# ಹಳ್ಳಿಮಕ್ಕಳ ಬೇಸಿಗೆ ಶಿಬಿರ



ಬೇಸಿಗೆ ಬಂದು, ಶಾಲೆಗಳಿಗೆ ರಜೆ ನೀಡಿದಾಗ ಮಕ್ಕಳ ಚಟುವಟಿಕೆಗಳಿಗೆ ರೆಕ್ಕೆ ಮೂಡುತ್ತವೆ. ಹೆತ್ತವರಿಗೆ ಅವರನ್ನು ಹಿಡಿದಿಟ್ಟುಕೊಳ್ಳುವುದೇ ದೊಡ್ಡ ಸಮಸ್ಯೆಯಾಗುತ್ತದೆ. ಮಕ್ಕಳನ್ನು ಬೋರಿನಿಂದ ಪಾರುಮಾಡುವುದಕ್ಕೆ ಬೇಸಿಗೆ ಶಿಬಿರಗಳು ನಗರವಾಸಿಗಳ ನೆರವಿಗೆ ಬರುತ್ತವೆ. ಅವರ ಪಠ್ಯೇತರ ಪ್ರತಿಭೆಗಳು ಹೊರಹೊಮ್ಮಲು ಅವಕಾಶ. ಹೆತ್ತವರಿಗೆ ಸ್ವಲ್ಪ ನಿರಾಳ.

ಹಳ್ಳಿಯ ಮಕ್ಕಳಿಗೆ ಇಂಥ ಅನುಕೂಲಗಳಿಲ್ಲ. ಬೇಸಿಗೆ ಶಿಬಿರಗಳಂಥವು ತಂದೆ-ತಾಯಿಯರಿಗೆ ಹೆಚ್ಚು ಖರ್ಚಿನ ಬಾಬತ್ತು. ಮಕ್ಕಳಿಗೆ ಹೊಲ-ಗದ್ದೆ ಕೆಲಸದ, ಆಡು-ಕುರಿ ಮೇಯಿಸುವ, ಹುಲ್ಲು-ಸೊಪ್ಪು ತರುವ ಒಕ್ಕಲುತನದ ತರಬೇತಿ ಕಡ್ಡಾಯ. ಆದರೂ ಅವರು ತಮ್ಮ ಚಟುವಟಿಕೆಗಳಿಗೆ ಸ್ವಲ್ಪ ಸಮಯ ಹೊಂದಿಸಿಕೊಳ್ಳುತ್ತಾರೆ. ಹಿರಿಯರೂ ಮಕ್ಕಳಿಗೆ 'ಬಿಸಿಲಿನಲ್ಲಿ ಅಲೆಯಬೇಡಿ, ಮರ ಹತ್ತಬೇಡಿ' ಇತ್ಯಾದಿ ಸಾಕಷ್ಟು ಬುದ್ಧಿವಾದಗಳ ಮಧ್ಯೆ ಅವರ ಕುಣಿದಾಟಕ್ಕೆ ಸ್ವಲ್ಪ ರಿಯಾಯಿತಿ ತೋರಿಸುವುದುಂಟು! ಗಿಲ್ಲಿ-ದಾಂಡು, ಕಣದಲ್ಲಿ ಕ್ರಿಕೆಟ್ ಟೂರ್ನಮೆಂಟ್, ಹಣ್ಣು ಸಿಗುವ ತೋಟಗಳತ್ತ ಸುಳಿದಾಟ, ಕೆರೆಕಟ್ಟೆ ನೀರಿನಲ್ಲಿ ಮನಸೋ ಇಚ್ಛೆ ಈಜಾಟ – ಹೀಗೆ ಅವರ ಬೇಸಿಗೆ ಶಿಬಿರ! ನಂತರ ಮನೆಗಳಿಗೆ ಭೇಟಿ.



ರಾಮಂದೂರು ಕೆರೆಯಲ್ಲಿ ವಲಸೆ ಹಕ್ಕಿಗಳನ್ನು ಅರಸುತ್ತ ಹೋದಾಗ ಮಕ್ಕಳ ಹಿಂಡು ನೀರಿಗೆ ಧುಮುಕುತ್ತ ಸಮ್ಮರ್ ಕ್ಯಾಂಪ್ ಚಟುವಟಿಕೆ ನಡೆಸಿತ್ತು. ಕ್ಯಾಮರಾ ಕಂಡಾಗ ಅವರ ಉತ್ಸಾಹಕ್ಕೆ ರೆಕ್ಕೆ ಮೂಡಿತು. ತಾವು ಬೆತ್ತಲೆ ಇದ್ದುದೂ ಕೆಲವರಿಗೆ ಮರೆತೇ ಹೋಗಿತ್ತು!

ಚಿತ್ರ-ಲೇಖನ : ಕೆ. ಪಿ. ಸ್ವಾಮಿ
ನಂ. ೧೬೭, ೧೦ನೇ ಮೈನ್, ೩ನೇ ಹಂತ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮







# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಆಚಾರ್ಯ, ಶ್ರೀಹರಿ, ಬಿ. ವಿಲ್ಸನ್, ಜಿ. ಎಂ. ಬೊಮ್ನಳ್ಳಿ

ಮುಖಚಿತ್ರ : ಅವ್ವನ ಕೆಲಸ... ಕೂಸಿನ ಕುತೂಹಲ... ವರ್ಣಚಿತ್ರ : ಮುತ್ತು ಹಾಳಕೇರಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಒಂ**ದು ತಿಂಗಳಲ್ಲಿ ಎಷ್ಟೆಲ್ಲಾ ಘಟನೆಗಳು ಸಂಭವಿಸಿ ಬಿಡಬಹುದು ! ಸಹಜವಾಗಿಯೇ ಅವೆಲ್ಲವನ್ನೂ ಪ್ರಸ್ತಾಪಿಸಲು ಶಕ್ಯವೂ ಅಲ್ಲ, ಅವಶ್ಯಕವೂ ಅಲ್ಲ. ಅತಿಮುಖ್ಯವಾಗಿ ಈ ತಿಂಗಳಲ್ಲಿ ಬೆಳಕಿಗೆ ಬಂದದ್ದು ಮನಮೋಹನ ಸಿಂಗರ ಕತ್ತಲೆ ವ್ಯವಹಾರಗಳು. ಇಷ್ಟೊಂದು ಕೆಟ್ಟ ಸುಳ್ಳುಗಳನ್ನು ಹೇಳಬಲ್ಲನೇ ಈತ ಎಂದು ಅಚ್ಚರಿಯಾಗುತ್ತದೆ. ಅದಕ್ಕಿಂತಲೂ ಮುಖ್ಯವಾಗಿ, ನಮ್ಮ ದೇಶಕ್ಕೆ ಇಂತಹ ಪ್ರಧಾನಿ ಇರುವುದು ಕ್ಷೇಮವೇ ಎಂಬುದು ಪ್ರಶ್ನೆ. ಎಡಪಕ್ಷಗಳು ಇಂದು ಏನೇ ನಿಲುವು ತಳೆದಿರಲಿ, ಪರಮಾಣು ಇಂಧನದ ಒಪ್ಪಂದದ ಕರಡನ್ನು ಅಂತರರಾಷ್ಟ್ರೀಯ ಪರಮಾಣು ಇಂಧನ ಸಂಸ್ಥೆಗೆ (ಐ.ಎ.ಈ.ಎ) ತೆಗೆದುಕೊಂಡು ಹೋಗಿ ಷರತ್ತುಗಳನ್ನು ಚರ್ಚಿಸಲು ಒಪ್ಪಿಗೆ ಕೊಟ್ಟಿದ್ದು ದೊಡ್ಡ ತಪ್ಪು. ಈ ಬಗ್ಗೆ 'ಹೊಸತು' ಅಂದೇ ತನ್ನ ಅಸಮ್ಮತಿಯನ್ನು ಪ್ರಕಟಿಸಿತ್ತು. ''ಚರ್ಚಿಸಿ, ಆದರೆ ಸಹಿ ಹಾಕಬೇಡಿ'' ಎಂದು ಸರ್ಕಾರಕ್ಕೆ ಹೇಳಿದ ಎಡಪಕ್ಷಗಳು ಒಂದು ಅಂತರರಾಷ್ಟ್ರೀಯ ಸಂಸ್ಥೆಯನ್ನು ಆಟಿಕೆಯ ಸ್ಥಾನವೆಂದು ಬಗೆದುವು. ನಿರ್ದಿಷ್ಟ ತೀರ್ಮಾನಗಳಿಗೆ ಒಪ್ಪಿಗೆ ಅಥವಾ ವಿರೋಧ ವ್ಯಕ್ತಪಡಿಸುವುದಿಲ್ಲವಾದರೆ ಚರ್ಚೆಗೇಕೆ ಆ ಸಂಸ್ಥೆಯು ಸಿದ್ಧವಾಗಿರುತ್ತದೆ ? ಮನಮೋಹನ ಸಿಂಗ್‌ರಿಗೆ ಅಷ್ಟು ಪರವಾನಗಿ ಸಾಕಾಗಿತ್ತು. ಸರ್ಕಾರದ ಪತನವು ಅಂದು ಅವರಿಗೆ ಬೇಕಾಗಿರಲಿಲ್ಲ, ಇಂದು ಪತನವಾದರೂ ಅಡ್ಡಿಯಿಲ್ಲ; ಹೇಗೂ ಚುನಾವಣೆ ಹತ್ತಿರ ಬಂದಿದೆ ಮತ್ತು ತಮ್ಮ ಆಯುಷ್ಯದ ಅತಿ ಪ್ರಮುಖ ಆಶಯವನ್ನು ಪೂರೈಸಿಕೊಂಡಿದ್ದಾರೆ. ಅಮೆರಿಕಾದ ಅಧ್ಯಕ್ಷರ ಪದತಲದಲ್ಲಿ ಭಾರತವನ್ನು ಇರಿಸುವುದಷ್ಟೇ ಅವರಿಗೆ ಉಲ್ಲಾಸದ ಸಂಗತಿ. ಹಾಗೆ ಮಾಡಿ ನಾಳೆ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ಅಧ್ಯಕ್ಷ ಪದವಿಗೇರಲು, ಇಲ್ಲವೆ ಬಾನ್-ಕಿ-ಮೂನ್ ನಿವೃತ್ತರಾದರೆ ವಿಶ್ವಸಂಸ್ಥೆಯ ಮಹಾ ಕಾರ್ಯದರ್ಶಿಯಾಗಲು ಆಶಿಸಬಹುದು (ಅಲ್ಲಿಯವರೆಗೂ ಅವರು ಚಲಾವಣೆಯಲ್ಲಿ ಉಳಿದರೆ). ಅವೆರಡರಿಂದಲೂ ಭಾರತಕ್ಕೆ ಪ್ರಯೋಜನವಾಗುವುದಿಲ್ಲ. ಪ್ರಧಾನಿಯಾಗಿರುವುದೇ ದೇಶಕ್ಕೆ ಅಪಾಯ ತಂದಿರುವುದು ಸಾಕು !

ತುರುವೇಕೆರೆಯ ಒಬ್ಬ ರೈತ ತೆಂಗಿನ ಸಸಿಯೊಂದನ್ನು ನೆಟ್ಟು ಹೇಳಿದನಂತೆ : '' ಈ ಸಸಿ ಫಲ ಕೊಟ್ಟಾಗ ಇದೊಂದೇ ಮರದ ಫಸಲನ್ನು ಪಡೆದು ನಾನು ಸಗಟು ಕೊಬ್ಬರಿ ವ್ಯಾಪಾರ ಆರಂಭಿಸುತ್ತೇನೆ,'' ಎಂದು. ಪರಮಾಣು ಇಂಧನದಿಂದ ನಮ್ಮ ದೇಶದ ವಿದ್ಯುತ್ ಪೂರೈಕೆ ಆಗುವುದು ಇಂತಹ ಮರೀಚಿಕೆಯೇ ! ೨೦೨೦ಕ್ಕೆ ನಮ್ಮ ಅಗತ್ಯದ ಶೇ. ಏಳರಷ್ಟು ಇದರ ಕೊಡುಗೆಯೆಂದು ಅಂದಾಜು ಮಾಡಿದ್ದಾರೆ. ಅದಕ್ಕೆ ಹತ್ತು - ಹದಿನೈದು ಸಾವಿರ ಕೋಟಿ ರೂಪಾಯಿಗಳನ್ನು ತೊಡಗಿಸುತ್ತೇವೆ. ಅಮೆರಿಕಾದ ಜನರಲ್ ಇಲೆಕ್ಟ್ರಿಕ್ ಕಂಪನಿಗೆ ೨೦ ಬಿಲಿಯನ್ ಡಾಲರುಗಳ ವ್ಯಾಪಾರವಾಗಲಿದೆಯಂತೆ; ಅವರಲ್ಲಿ ಮಾರಾಟವಾಗದೆ ಉಳಿದಿರುವ ಕಸವನ್ನೆಲ್ಲಾ ನಮ್ಮ ತಲೆಯ ಮೇಲೆ ಹಾಕಿ ಕಂಪನಿಯ ಜೀರ್ಣೋದ್ಧಾರ ಮಾಡಿಕೊಳ್ಳಬಹುದು. ಈಗಾಗಲೆ ಮನಮೋಹನ ಸಿಂಗರ ಫೋಟೋ ತಗುಲುಹಾಕಲು ಕಾರ್ಪೊರೇಟ್ ಕಚೇರಿಯಲ್ಲಿ ಪ್ರಶಸ್ತವಾದ ಜಾಗ ಹುಡುಕಿಟ್ಟಿರಬೇಕು.

ಮನಮೋಹನ ಸಿಂಗ್‌ರ ಕರ್ತವ್ಯಭ್ರಷ್ಟ ಹಾಗೂ ಅಮೆರಿಕಾ ಕೈಂಕರ್ಯದ ಸರ್ಕಾರ ಉರುಳಿಸಲು ಭಾರತೀಯ ಜನತಾ ಪಕ್ಷದ ಜೊತೆ ಮತ ಚಲಾಯಿಸಲು ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ಸುಭಾಷ್ ಚಕ್ರವರ್ತಿ ಮತ್ತು ಸೋಮನಾಥ ಚಟರ್ಜಿಯವರಿಗೆ ಅಳುಕಂತೆ. ಅದು 'ಜೊತೆಯ' ಪ್ರಶ್ನೆಯಲ್ಲ, ಅಮೆರಿಕಾ ದೇಶದ ಬಾಲಬಡುಕ ರಾಷ್ಟ್ರವಾಗುವುದರ 'ವಿರೋಧದ' ಪ್ರಶ್ನೆ ಎಂಬುದು ಇವರಿಗೆ ತಿಳಿಯದಿರಲು ಸಾಧ್ಯವಿಲ್ಲ. ಕಾಂಗ್ರೆಸ್ ವಿರುದ್ಧ ಮತ ಚಲಾಯಿಸಬೇಕಾದ್ದು ಅಮೆರಿಕಾದ ಆಧಿಪತ್ಯವನ್ನು ನಿರಾಕರಿಸುವ ಸಲುವಾಗಿ. ಮನಮೋಹನ ಸಿಂಗರ ಆಡಳಿತವು ಭಾಜಪವು ಆಡಳಿತಕ್ಕೆ ಬರಲು ಹಾದಿಯನ್ನು ಸುಗಮಗೊಳಿಸಿದೆ. ಆಗ ಮತ್ತೆ ಎಡಪಕ್ಷಗಳು ಅಮೆರಿಕಾದ ಹುನ್ನಾರಗಳನ್ನು ನಿಷ್ಫಲಗೊಳಿಸಲು ಭಾಜಪ ಸರ್ಕಾರದ ವಿರುದ್ಧವೂ ಹೋರಾಡಬೇಕಾಗುತ್ತದೆ. ದೇಶದ ಸಾರ್ವಭೌಮತ್ವದ ರಕ್ಷಣೆಯು ಸತತವಾಗಿ ನಡೆಯುತ್ತಲೇ ಇರಬೇಕಾಗಿದೆ. ಸೋಮನಾಥರಂತಹ ಅನುಭವಸ್ಥರಿಗೆ ಇದು ತಿಳಿಯುವುದಿಲ್ಲವೆ ? ನಾಳೆ ಶಾಂತಿ ನಿಕೇತನ ಇರುವ ಅವರ ಬೋಲ್ಪುರ ಲೋಕಸಭಾ ಕ್ಷೇತ್ರದಲ್ಲಿ ಇವರು ಮಮತಾ ಬ್ಯಾನರ್ಜಿಯವರ ಕಾರ್ಯಕರ್ತರನ್ನು ಆಶ್ರಯಿಸುತ್ತಾರೋ ಅಥವಾ ವಾಮರಂಗದ ಕಾರ್ಯಕರ್ತರನ್ನೋ ?

''ಬುಷ್‌ಗಿಂತಲೂ ಅದ್ವಾನಿ ಹೆಚ್ಚು ಅಪಾಯಕರ'' ಎಂದು ಹೇಳುವ ಮುಲಾಯಂ ಸಿಂಗರಿಗೆ ಭಾರತಕ್ಕಿಂತಲೂ ಉತ್ತರ ಪ್ರದೇಶ ಮುಖ್ಯ ಮತ್ತು ಜೈಲಿಗಿಂತಲೂ ಮನೆ ಭದ್ರ. ಅಮರ ಸಿಂಗರು ಈಚೆಗೆ ಅಮೆರಿಕಾದಿಂದ ಎಷ್ಟು ಸಂಪತ್ತು ತಂದರೆಂಬುದು ನಿಗೂಢವಾಗಿರುವಾಗ ಅವರ ಪಕ್ಷದ ''ಸಿದ್ಧಾಂತ''ದ ಬಗ್ಗೆ ಚರ್ಚೆ ಅಪ್ರಸ್ತುತ. ಇವರೆಲ್ಲಾ ಜಯಪ್ರಕಾಶ ನಾರಾಯಣರ ಗರಡಿಯಲ್ಲಿ ಮಲ್ಲಯುದ್ಧ ಪಟುಗಳಾದರೆಂಬುದು ಚಿಂತನಾರ್ಹ ವಿಷಯವಾಗಿದೆ. ಮತೀಯತೆಯು ನವ - ವಸಾಹತುಶಾಹಿಗೆ ಒಂದು ಮುಸುಕೆಂದು ತಿಳಿಯದವರು ಮತೀಯತೆಯನ್ನು ಸೋಲಿಸುತ್ತಾರೆಂಬ ಐತಿಹ್ಯಕ್ಕೆ ಮಾರುಹೋಗಬೇಕಾಗಿಲ್ಲ. ಇಷ್ಟು ಸರಳವಾದ ರಾಜಕೀಯ ಆರ್ಥಿಕತೆಯ ಸೂತ್ರವನ್ನು ಅರ್ಥಮಾಡಿಕೊಳ್ಳಲು ಯಾರಿಗಾದರೂ ಪಾಠ ಬೇಕಿದ್ದರೆ ಮಾನ್ಯ ಗಿರೀಶ ಕಾಸರವಳ್ಳಿಯವರ ಇತ್ತೀಚಿನ ಚಲನಚಿತ್ರವಾದ ''ಗುಲಾಬಿ ಟಾಕೀಸ್'' ನೋಡಬಹುದು. ಮೈಕೇಲ್ ಮೂರ್ ಎಂಬ ಚಲನಚಿತ್ರ ನಿರ್ದೇಶಕ ''ಸ್ಟುಪಿಡ್


*(೧೦ನೇ ಪುಟಕ್ಕೆ)*




ಸಂಪುಟ-೧೦ ಸಂಚಿಕೆ-೧ ಆಗಸ್ಟ್ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೮೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com



# ಪರ್ಯಾಯ ರಚನೆ ಮುಂದೂಡಲಾಗದು

ಎಡಪಕ್ಷಗಳು ಯುಪಿಎ ಸರ್ಕಾರಕ್ಕೆ ತಮ್ಮ ಬೆಂಬಲವನ್ನು ಹಿಂತೆಗೆದುಕೊಳ್ಳಬೇಕೆಂದು ನಾವು ಕಳೆದ ವರ್ಷ ಅಣು ಒಪ್ಪಂದದ ಭಾಗವಾದ ವಿಭಾಗ ೧೨೩ರ ಅನ್ವಯ ಕರಾರು ಬಹಿರಂಗವಾದಾಗಲೇ ಒತ್ತಾಯಿಸಿದ್ದೆವು. ನಂದೀಗ್ರಾಮ ಪ್ರಕರಣದಲ್ಲಿ ಇಕ್ಕಟ್ಟಿಗೆ ಸಿಕ್ಕಿಕೊಂಡಿದ್ದ ಹಿನ್ನೆಲೆಯಲ್ಲಿ, ಐಎಇಎ ಸಂಸ್ಥೆಯ ಮುಂದೆ ಚರ್ಚೆಗೆ ಹೋಗಬಹುದು, ಆದರೆ ಒಪ್ಪಂದಕ್ಕೆ ಸಹಿ ಹಾಕುವ ಮುಂಚೆ ಯುಪಿಎ-ಎಡಪಕ್ಷಗಳ ಸಮನ್ವಯ ಸಮಿತಿಯಲ್ಲಿ ಪೂರ್ವಭಾವಿಯಾಗಿ ಒಪ್ಪಂದದ ಕರಡನ್ನು ಚರ್ಚಿಸಿ ಅನುಮೋದನೆ ಪಡೆಯಬೇಕೆಂದು ಷರತ್ತು ವಿಧಿಸಿ, ನಾಲ್ಕೂ ಎಡ ಪಕ್ಷಗಳು ಸಮಸ್ಯೆಯನ್ನು ಮುಂದೂಡಿದ್ದವು. ಆಗಲೂ ಪ್ರಧಾನಿ ಒಪ್ಪದೆ ತಾನು ರಾಜಿನಾಮೆ ನೀಡುವುದಾಗಿ ಬೆದರಿಕೆ ಹಾಕಿದ್ದರು. ಈಗ ಸಮನ್ವಯ ಸಮಿತಿಯ ಮುಂದೆ ಸಾದರಪಡಿಸದೆಯೇ ಐಎಇಎ ಜತೆಗಿನ ಒಪ್ಪಂದದ ಕರಡನ್ನು ಸಿದ್ಧಪಡಿಸಿ ಅವರೊಡನೆ ಚರ್ಚೆಯನ್ನು ಪ್ರಾರಂಭಿಸಿಬಿಟ್ಟಿದ್ದಾರೆ; ಯುಪಿಎ-ಎಡಪಕ್ಷಗಳ ಸಮನ್ವಯ ಸಮಿತಿಯಲ್ಲಿ ನೀಡಿದ್ದ ಮಾತಿಗೆ ತಪ್ಪಿದ್ದಾರೆ. ಈ ಒಪ್ಪಂದದ ಕರಡು ಗೋಪನೀಯವೆಂದು, ಸರ್ಕಾರ ಸೇರದ ಎಡಪಕ್ಷಗಳೊಡನೆ ಹಂಚಿಕೊಳ್ಳಲಾಗದೆಂದು ಮತ್ತೊಂದು ಸುಳ್ಳು ಹೇಳಲಾಯ್ತು. ಕಾರಣ ಇವರು ಈ ಸುಳ್ಳು ಹೇಳುತ್ತಿದ್ದಂತೆಯೇ ಸ್ವತಃ ಐಎಇಎ ಕರಡನ್ನು ಬಹಿರಂಗಪಡಿಸಿತ್ತು. ಇದನ್ನೆಲ್ಲಾ ಗಮನಿಸಿದರೆ ಬಹುಶಃ ಕಾಂಗ್ರೆಸ್ ಪಕ್ಷ ಉದ್ದೇಶಪೂರ್ವಕವಾಗಿ ಎಡಪಕ್ಷಗಳನ್ನು ಅವರು ಬೆಂಬಲ ತಾವಾಗೇ ಹಿಂದಕ್ಕೆ ತೆಗೆದುಕೊಳ್ಳಲಿ ಎಂದು ಒತ್ತಾಯಿಸುತ್ತಿದ್ದಾರೆಯೇ ಎಂಬ ಸಂದೇಹ ಬರುತ್ತದೆ. ತನ್ನ ಈ ಏಕವ್ಯಕ್ತೀಯ ನಿರ್ಧಾರಕ್ಕೆ ಬೆಂಬಲ ನೀಡದಿದ್ದರೆ, ರಾಜಿನಾಮೆ ನೀಡುವುದಾಗಿ ಪುನಃ ಬೆದರಿಸುವ ಪ್ರಧಾನಿಯ ನಾಯಕತ್ವ ಕಾಂಗ್ರೆಸ್ ಪಕ್ಷದ ಹಿತಕ್ಕೆ ಮಾರಕವಾಗುವುದು ಖಂಡಿತ. ಈ ಒಪ್ಪಂದದ ಬಗ್ಗೆ ಕಾಂಗ್ರೆಸ್ ಪಕ್ಷದಲ್ಲೂ ಭಾಜಪದಲ್ಲೂ ಭಿನ್ನಾಭಿಪ್ರಾಯ ಇರುವುದು ಸ್ಪಷ್ಟ.

ಯುಪಿಯ ಸರ್ಕಾರ ಮುಂದುವರಿಯಬೇಕೆ ಬೇಡವೇ ಎಂಬ ಚರ್ಚೆಗೆ ಅಣು ಒಪ್ಪಂದ ಒಂದೇ ಕಾರಣವಲ್ಲ. ಇದು ಮೂಲಭೂತ ಸಮಸ್ಯೆಯ ಮೇಲ್ಪದರವಷ್ಟೆ. ಅಣು ಒಪ್ಪಂದದ ಮುಸುಕಿನಲ್ಲಿ ಯುಪಿಎ ತನ್ನ ಇತರ ವೈಫಲ್ಯಗಳನ್ನು ಮುಚ್ಚಿಕೊಳ್ಳಲು ವ್ಯರ್ಥ ಪ್ರಯತ್ನವೆಸಗುತ್ತಿದೆ. ಬಹುಸಂಖ್ಯೆಯ ಬೆಂಬಲವಿಲ್ಲದ ಯುಪಿಎ ಸರ್ಕಾರ ಕೆಲವು ಕನಿಷ್ಠ ಸಾಮಾನ್ಯ ಕಾರ್ಯಕ್ರಮಗಳನ್ನು ಸಾಮಾನ್ಯ ಜನರಿಗೆ ಒಂದಿಷ್ಟು ಪರಿಹಾರ ನೀಡುವ ಉದ್ದೇಶದಿಂದ ಕೈಗೊಳ್ಳುವುದಾಗಿ ಎಡಪಕ್ಷಗಳಿಗೆ ಮಾತುಕೊಟ್ಟು, ಅದರ ಆಧಾರದಲ್ಲಿ ಎಡಪಕ್ಷಗಳ ಬೆಂಬಲ ಪಡೆಯಿತು. ಆದರೆ ತಾನು ಒಪ್ಪಿಕೊಂಡ ಕಾರ್ಯಕ್ರಮಗಳನ್ನು ಕೈಬಿಟ್ಟು, ಅಥವಾ ಅರೆಮನಸ್ಸಿನಿಂದ ಒಂದಿಷ್ಟು ಪ್ರಯತ್ನ ಮಾಡಿದ್ದನ್ನು ಬಿಟ್ಟರೆ, ಮೂಲತಃ ಆ ಕಾರ್ಯಕ್ರಮಗಳಲ್ಲಿ ಒಪ್ಪಿಕೊಂಡಿದ್ದ ತತ್ವಗಳಿಗೆ ವಿರುದ್ಧವಾಗಿ ನಡೆದುಕೊಂಡಿರುವುದು ಮತ್ತೊಂದು ವಚನಭ್ರಷ್ಟತೆ. ಎಡಪಕ್ಷಗಳ ಒತ್ತಾಯಕ್ಕೆ ಮಣಿದು ಗ್ರಾಮಾಂತರ ಉದ್ಯೋಗ ಖಾತರಿ ಯೋಜನೆಯನ್ನು ಜಾರಿಗೆ ತಂದ ಈ ಪಕ್ಷ ಅದು ತನ್ನದೇ ಕಾರ್ಯಕ್ರಮವೆಂದು ಈಗ ಟಾಂಟಾಂ ಮಾಡಿಕೊಳ್ಳುತ್ತಿರುವುದು ಪ್ರಹಸನೀಯ. ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿದ್ದ ಒಂದು ಮಹತ್ತರ ವಿಷಯವೆಂದರೆ ದೇಶದ ಸಾಂಪ್ರದಾಯಿಕ ಸ್ವತಂತ್ರ ವಿದೇಶಾಂಗ ನೀತಿಯನ್ನು ಬದಲಾಯಿಸುವುದಿಲ್ಲವೆಂಬುದು. ಆದರೆ ಈಗ ಕ್ರಮಕ್ರಮವಾಗಿ ಈ ನೀತಿಯನ್ನು ಬುಡಮೇಲು ಮಾಡಿ, ಅಮೆರಿಕಾ ನೇತೃತ್ವದ ಪಾಶ್ಚಿಮಾತ್ಯ ಬಣಕ್ಕೆ ಭಾರತವನ್ನು ದೂಡುವ ಸಡಗರವನ್ನು ಪ್ರಧಾನಿ ಮೆರೆಯುತ್ತಿದ್ದಾರೆ. ಇದಕ್ಕೆ ಸಂಬಂಧಪಟ್ಟ ನೀತಿಗಳನ್ನು ಮಿತ್ರ ಪಕ್ಷಗಳೊಡನೆ ಚರ್ಚಿಸುವುದಿರಲಿ, ಲೋಕಸಭೆಯನ್ನೂ ವಿಶ್ವಾಸಕ್ಕೆ ತೆಗೆದುಕೊಳ್ಳದೆ ಇದು ಏಕ ಪಕ್ಷ ಆಡಳಿತವೋ ಎಂಬಂತೆ ವರ್ತಿಸುತ್ತಿರುವುದು ಸ್ಪಷ್ಟ. ಕಾಂಗ್ರೆಸ್ ಪಕ್ಷ ಸಮ್ಮಿಶ್ರ ಸರ್ಕಾರದಲ್ಲಿ ಭಾಗವಹಿಸಲು ವಿಶ್ವಾಸಾರ್ಹವಲ್ಲ. ಯುಪಿಎ ಮತ್ತು ಎಡಪಕ್ಷಗಳ ಒಕ್ಕೂಟಕ್ಕೆ ಇದ್ದ ಸಮರ್ಥನೀಯ ಕಾರಣಗಳೆಲ್ಲಾ ಈಗ ನಷ್ಟವಾಗಿವೆ. ಅದಕ್ಕೆಲ್ಲಾ ಕಾಂಗ್ರೆಸ್‌ನ ದುರ್ಮಾರ್ಗವೇ ಕಾರಣ.

ಸಚಿವ ಸಂಪುಟಕ್ಕೆ ಇರುವ ಕೆಲವು ವಿಶೇಷ ಸೌಲಭ್ಯಗಳನ್ನು ಮುಂದಿಟ್ಟು, ಮುಖ್ಯ ವಿಷಯಗಳಲ್ಲೂ ಲೋಕಸಭೆಯನ್ನು ಹಾಗೂ ಮಿತ್ರ ಪಕ್ಷಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವ ಅಗತ್ಯವಿಲ್ಲವೆಂಬ ಪ್ರಧಾನಿಯ ಧೋರಣೆ ಆತಂಕಕಾರಿ. ಇದು ಪ್ರಜಾಪ್ರಭುತ್ವ ವಿರೋಧಿ. ತ್ವರಿತವಾಗಿ ಪಾರ್ಲಿಮೆಂಟಿನಲ್ಲಿ ಈ ಬಗ್ಗೆ ತಕ್ಕ ತಿದ್ದುಪಡಿ ತರುವುದು ಅಗತ್ಯ. ಇಂತಹ ಅಧಿಕಾರ ಅಲ್ಪ ಸಂಖ್ಯಾತ ಸರ್ಕಾರಕ್ಕಂತೂ ಇಲ್ಲವೇ ಇಲ್ಲ. ಇಲ್ಲದ ಈ ಸೌಲಭ್ಯವನ್ನು ದುರುಪಯೋಗಪಡಿಸಿ ಭಾರತೀಯ ಸೇನಾಪಡೆಯನ್ನು ಅಮೆರಿಕಾದ ಸೇನಾಪಡೆಯೊಡನೆ ಎಲ್ಲಾ ರೀತಿಯಲ್ಲೂ ಸೇರ್ಪಡೆ ಮ...ುವಂಥ ಸಹಕಾರದತ್ತ ಒಯ್ಯಲಾಗುತ್ತಿದೆ. ಇರಾನ್‌ನೊಂದಿಗೆ ಅನಿಲ ಪೂರೈಕೆ ಒಪ್ಪಂದ ನಮ್ಮ ಹಿತದೃಷ್ಟಿಯಿಂದ ಅಗತ್ಯ. ಆದರೂ ಅಮೆರಿಕಾದ ಆಣತಿಯಂತೆ ಇದನ್ನೂ ಕೈಬಿಡಲಾಯ್ತು. ಈಗಲೂ ರಾಜಕೀಯ ಪರಿಸ್ಥಿತಿಯ ಒತ್ತಡಕ್ಕೆ ಮಣಿದು ಅರೆ ಮನಸ್ಸಿನಿಂದ ಈ ವಿಷಯವನ್ನು ಪುನಃ ಚರ್ಚೆಗೆ ತೆಗೆದುಕೊಳ್ಳಲಾಗಿದೆ. ಜಿ-೮ ಶೃಂಗಸಭೆಯಲ್ಲಿ ಅಮೆರಿಕದೊಡನೆ ಅಂತರರಾಷ್ಟ್ರೀಯವಾಗಿ ಹೆಗಲಿಗೆ ಹೆಗಲು ಕೊಟ್ಟು ನಿಲ್ಲುವುದಾಗಿ ನಮ್ಮ ಕುಬ್ಜ ಪ್ರಧಾನಿಯವರು ಬುಷ್ ಪಕ್ಕದಲ್ಲಿ ನಿಂತು ಘೋಷಿಸಿದ್ದಾರೆ. ಆರ್ಥಿಕವಾಗಿ ಅಮೆರಿಕದೊಡನೆ ವಿಶಿಷ್ಟ ಸಂಬಂಧ ಬೇಕೆನ್ನುವ ಈ ಅಂತರರಾಷ್ಟ್ರೀಯ ಬಂಡವಾಳದ ಭಂಟ, ನಮ್ಮ 'ಸಜ್ಜನ' ಪ್ರಧಾನಮಂತ್ರಿ, ಮತ್ತೊಮ್ಮೆ ಪ್ರಧಾನಿಯಾಗುವುದಂತೂ ಅಸಂಭವ. ಆದರೆ ಹಿಂದೆ ನರಸಿಂಹರಾಯರಿಂದ ಪ್ರಾರಂಭವಾಗಿ, ವಾಜಪೇಯಿ ಅವರಿಂದ ಮುಂದುವರಿದು, ಈ ದೇಶವನ್ನು ಪಶ್ಚಿಮದ ಸಾಮ್ರಾಜ್ಯಶಾಹಿ ಅಂತರರಾಷ್ಟ್ರೀಯ ಬಂಡವಾಳದ ತೆಕ್ಕೆಗೆ ಸಂಪೂರ್ಣವಾಗಿ ದಬ್ಬಿ, ನಮ್ಮ ನೆರೆಯವರೊಡನೆ ಮನಸ್ತಾಪವುಂಟುಮಾಡಿ, ನಮ್ಮನ್ನು ರಷ್ಯಾದ, ಚೀನಾದ ವಿರುದ್ಧ ಎತ್ತಿಕಟ್ಟಿರುವ ಈ ಪ್ರಧಾನಿಯ ಕೊಡುಗೆ ನಮ್ಮ ರಾಷ್ಟ್ರದ ಸ್ವಾತಂತ್ರ್ಯೋತ್ತರ ಇತಿಹಾಸದಲ್ಲಿ ಅತಿ ಹೀನಾಯವಾದ ಸಂದರ್ಭ.

ಅಣು ಒಪ್ಪಂದಕ್ಕೆ ತವಕಪಡುತ್ತಿರುವ ಆತ ಮತ್ತು ಆತನ ಆರ್ಥಿಕ ದುಷ್ಟ ಚತುಷ್ಟಯ ಸಹವರ್ತಿಗಳು, ಬೆಲೆ ಏರಿಕೆ ಮತ್ತು ಹಣದುಬ್ಬರವನ್ನು ಅಂತರರಾಷ್ಟ್ರೀಯ ಕಾರಣದ್ದೆಂದು ಹೇಳುತ್ತಾ, ತಾವು ರಾಷ್ಟ್ರೀಯವಾಗಿ ಮಾಡಬಹುದಾದುದೇನೂ ಇಲ್ಲವೆಂದು ಕೈಚೆಲ್ಲಿ ಕುಳಿತಿದ್ದಾರೆ. ಎಡಪಕ್ಷಗಳು ಈ ಕುರಿತು ಅನೇಕ ಮಹತ್ವದ ಸಲಹೆಗಳನ್ನು ನೀಡಿವೆ. ಅವು ಇವರಿಗೆ ಪಥ್ಯವಲ್ಲ. ಕಾರಣ ಅವು ದೇಶದ ಬೃಹತ್ ಉದ್ದಿಮೆದಾರರ ಹಿತಕ್ಕೆ ಧಕ್ಕೆಯಾಗಬಹುದು. ಒಂದು ಸಲವೂ ಜನರಿಂದ ನೇರವಾಗಿ ಆರಿಸಿ ಬರದ ಯಾರೇ ಆದರೂ ನಮ್ಮ ವ್ಯವಸ್ಥೆಯಲ್ಲಿ ಪ್ರಧಾನಿಯಾಗಬಹುದೆಂಬುದು ಅನಿಷ್ಟಕಾರಿ. ಲೋಕಸಭಾ ಸದಸ್ಯರು ಮಾತ್ರ

ಪ್ರಧಾನಿಯಾಗಬೇಕೆಂದು ಸಂಬಂಧಪಟ್ಟ ನಿಯಮಗಳಿಗೆ ತಿದ್ದುಪಡಿಯಾಗಬೇಕು. ಹಾಗೂ ರಾಷ್ಟ್ರದ ರಕ್ಷಣೆ, ವಿದೇಶಾಂಗ ನೀತಿ, ಅಂತರರಾಷ್ಟ್ರೀಯ ಕೌಲುಗಳು ಮುಂತಾದ ಕೆಲವು ವಿಷಯಗಳನ್ನು ಲೋಕಸಭೆಯ ಅನುಮತಿಗೆ ಕಡ್ಡಾಯವಾಗಿ ಒಳಪಡಿಸಬೇಕು. ಈ ಎಲ್ಲ ವೈಫಲ್ಯಗಳ ಹಿನ್ನೆಲೆಯಲ್ಲಿ ಎಡಪಕ್ಷಗಳು ಇನ್ನೂ ತಮ್ಮ ಬೆಂಬಲವನ್ನು ಮುಂದುವರಿಸಿದರೆ ಜನ ಅದನ್ನು ಕ್ಷಮಿಸಲಾರರು. ಈ ಟಿಪ್ಪಣಿಗಳನ್ನು ಬರೆಯುವ ವೇಳೆಗೆ, ಲೋಕಸಭೆಯಲ್ಲಿ ವಿಶ್ವಾಸಮತ ಯಾಚನೆ ಹೇಗೆ ಆಗುತ್ತದೋ ತಿಳಿದಿಲ್ಲ. ಹಲವು ವಿಧದ ಅನೀತಿಯುತ ಆಮಿಷಗಳನ್ನೊಡ್ಡಿರುವ ಕಾಂಗ್ರೆಸ್, ದೇಶದ ಸಾರ್ವಭೌಮತ್ವದ ಬಗ್ಗೆ ಕಾಳಜಿ ಇಲ್ಲದಿರುವ ಪಕ್ಷಗಳ ಸಹಾಯದಿಂದ ಗೆದ್ದರೂ ಗೆಲ್ಲಬಹುದು. ಆದರೆ ನಮ್ಮ ಈ ಅವಲೋಕನಗಳು ಅಲ್ಲಿಯ ತೀರ್ಮಾನವನ್ನು ಅವಲಂಬಿಸಿಲ್ಲ. ಕಾಂಗ್ರೆಸ್ ವಿರುದ್ಧ ಮತ ಚಲಾಯಿಸುವಾಗ ಎಡಪಕ್ಷಗಳು ಕೋಮುವಾದಿಗಳೊಂದಿಗೆ ಸೇರಿ ಕೊಂಡಂತೆ ಆಗುತ್ತದಲ್ಲಾ ಎಂಬ ಆಕ್ಷೇಪಣೆಗೆ ಅರ್ಥವಿಲ್ಲ. ಬಹುಶಃ ಚುನಾವಣೆ ಸಮೀಪದಲ್ಲೇ ಇರದಿದ್ದರೆ, ಭಾಜಪವು ಕಾಂಗ್ರೆಸ್ ಪಕ್ಷಕ್ಕೆ ಸಮರ್ಥನೆ ನೀಡುತ್ತಿತ್ತು. ಎಡಪಕ್ಷಗಳ ಮತ್ತು ಅವುಗಳ ಮಿತ್ರ ಪಕ್ಷಗಳ ಮತ ಅಂತರರಾಷ್ಟ್ರೀಯ ಸಾಮ್ರಾಜ್ಯಶಾಹಿ ಬಂಡವಾಳಶಾಹಿ ವಿರುದ್ಧವಾದುದು. ಅದು ಕೇವಲ ಅಣು ಒಪ್ಪಂದಕ್ಕೆ ಮಾತ್ರ ಸಂಬಂಧಿಸಿದ್ದಲ್ಲ. ಹಾಗೂ ಕೋಮುವಾದದ ವಿರುದ್ಧ ಹೋರಾಡುವ ಜವಾಬ್ದಾರಿ ಕೇವಲ ಎಡಪಕ್ಷಗಳದ್ದು ಮಾತ್ರ ಅಲ್ಲ. ಕೋಮುವಾದದ ವಿರುದ್ಧ ಕಾಂಗ್ರೆಸ್ ಪಕ್ಷ ಹೋರಾಡದಿರುವುದು ಜನತೆಗೆ ಸ್ಪಷ್ಟವಾಗಲಿ. ಭಾಜಪದೊಡನೆ ಗುಟ್ಟಾಗಿ ರಾಜಿ ಮಾಡಿಕೊಂಡು ಆಳಿದ ನರಸಿಂಹರಾಯರ ಕಾಂಗ್ರೆಸ್ ಪಕ್ಷ, ಜೆಎಂಎಂ ಪಕ್ಷಕ್ಕೆ ಲಂಚ ಕೊಟ್ಟ ಕಾಂಗ್ರೆಸ್ ಪಕ್ಷ, ಈಗಲೂ ಅವರನ್ನು ಒಲಿಸಿಕೊಳ್ಳಲು ಆಮಿಷ ಒಡ್ಡುತ್ತಿರುವ ಕಾಂಗ್ರೆಸ್, ಎಡಪಕ್ಷಗಳಿಗೆ ಅವರ ಕರ್ತವ್ಯ ಹೇಳಲು ಅನರ್ಹವಾದುದು. ವಿದೇಶೀ ಬಂಡವಾಳಕ್ಕೆ ಅಡಿಯಾಳಾಗಲು ಮುನ್ನುಗ್ಗಿರುವ ಕಾಂಗ್ರೆಸ್, ಎಡಪಕ್ಷಗಳ ದೇಶಪ್ರೇಮದ ಬಗ್ಗೆ ಆಕ್ಷೇಪವೆತ್ತಿದರೆ ಜನ ಅದಕ್ಕೆ ಉತ್ತರ ಕೊಡುತ್ತಾರೆ. ಎಡಪಕ್ಷಗಳು ಕೋಮುವಾದದ ವಿರುದ್ಧ ಹೋರಾಡುತ್ತಲೇ ಸಾಮ್ರಾಜ್ಯಶಾಹಿ ಮತ್ತು ಬಂಡವಾಳಶಾಹಿಗಳ ವಿರುದ್ಧದ ಹೋರಾಟಕ್ಕೆ ಎಲ್ಲಕ್ಕಿಂತ ಹೆಚ್ಚಿನ ಆದ್ಯತೆ ನೀಡಬೇಕು. ಈ ಪ್ರತಿಗಾಮಿ ಬಂಡವಾಳವೇ ಕೋಮುವಾದವನ್ನು, ಭಯೋತ್ಪಾದನೆಯನ್ನು, ತಂತ್ರವಾಗಿ ಬಳಸಿ, ಜನತೆಯನ್ನು ಹಾದಿತಪ್ಪಿಸುತ್ತಿದೆ. ಎಡ ಮತ್ತು ಪ್ರಜಾಪ್ರಭುತ್ವವಾದಿ, ಕೋಮುವಾದ ವಿರೋಧಿ, ಪಕ್ಷಗಳ ಕರ್ತವ್ಯ ಈಗ ಸ್ಪಷ್ಟವಿದೆ. ಕಾಂಗ್ರೆಸ್ಸನ್ನು, ಭಾಜಪವನ್ನು ಹೊರಗಿಟ್ಟು, ಮೂರನೆಯ ರಾಜಕೀಯ ಶಕ್ತಿಯನ್ನು ತ್ವರಿತವಾಗಿ ನಿರ್ಮಿಸಬೇಕು. ಇದು ಚುನಾವಣೆಗೆ ಮುಂಚೆಯೇ ರೂಪುಗೊಳ್ಳಬೇಕು. ಅಂಥ ಒಂದು ಸಂಯುಕ್ತ ರಂಗ ನಿರ್ದಿಷ್ಟವಾದ ಒಮ್ಮತದ ಕಾರ್ಯಕ್ರಮಗಳನ್ನು ರೂಪಿಸಿ, ಅದರ ಆಧಾರದ ಮೇಲೆ ಜನಮತವನ್ನು ಯಾಚಿಸಬೇಕು. ಜನತೆಗೆ ಅಂತಿಮವಾಗಿ ಕಾಂಗ್ರೆಸ್ ಮತ್ತು ಭಾಜಪಗಳ ಬಗೆಗೆ ಭ್ರಮನಿರಸನವಾಗುವ ಈ ಚಾರಿತ್ರಿಕ ಸಂದರ್ಭದಲ್ಲಿ ಎಡಪಕ್ಷಗಳ ಪಾತ್ರ ಮಹತ್ವವಾದುದು.

## ಇರಾಕ್ ಯುದ್ಧದ ಭೀಕರತೆ

ಸದ್ದಾಂ ಹುಸೇನ್‌ನ ಇರಾಕ್ ಸಾಮೂಹಿಕ ವಿನಾಶಕಾರಿ ಶಸ್ತ್ರಾಸ್ತ್ರಗಳನ್ನು ಹೊಂದಿದೆ, ಭಯೋತ್ಪಾದಕರ ತಾಣವಾಗಿದೆ, ಆ ರಾಷ್ಟ್ರದ ಮೇಲೆ ಆಕ್ರಮಣ ಎಸಗಿದರೆ ಜಾಗತಿಕ ಮಟ್ಟದಲ್ಲಿ ಭಯೋತ್ಪಾದಕತೆಯ ಪಿಡುಗನ್ನು ನಿವಾರಿಸುವತ್ತ ಪರಿಣಾಮಕಾರಿ ಹೆಜ್ಜೆ ಇಟ್ಟಂತಾಗುತ್ತದೆ ಎಂಬಂತಹ ಸುಳ್ಳು ನೆಪಗಳನ್ನು ಮುಂದಿಟ್ಟು ಬುಷ್ ಆಡಳಿತವು ತೆಗೆದುಕೊಂಡ ಕ್ರಮಗಳಿಂದಾಗಿ ಭಯೋತ್ಪಾದಕತೆಯನ್ನು ಹಿಮ್ಮೆಟ್ಟಿಸುವ ಬದಲು ಅದಕ್ಕೆ ಮತ್ತಷ್ಟು ಇಂಬುಕೊಟ್ಟಂತಾಗಿದೆ. ಕೆಲವು ಮೂಲಗಳು ಅಂದಾಜಿಸಿರುವಂತೆ ಭಯೋತ್ಪಾದಕತೆಯು ಮೊದಲಿಗಿಂತ ಏಳು ಪಟ್ಟು ಹೆಚ್ಚು ವ್ಯಾಪಕವಾಗಿ ಹರಡಿದೆ. ಬಹುತೇಕವಾಗಿ ಸಾಮ್ರಾಜ್ಯಶಾಹಿ ಅಮೆರಿಕಾ ತಮ್ಮನ್ನು ತಾವು ರಕ್ಷಿಸಿಕೊಳ್ಳಲಾಗದಂತಹ ಬಲಹೀನ ರಾಷ್ಟ್ರಗಳ ಮೇಲೆ, ತನ್ನ ಆಣತಿಯಂತೆ ನಡೆದುಕೊಳ್ಳದ ರಾಷ್ಟ್ರಗಳನ್ನೇ ಗುರಿಮಾಡಿ, ಆಕ್ರಮಣ ನಡೆಸುತ್ತದೆ; ಅಂತಹ ಆಕ್ರಮಣಗಳಿಗೆ ಮಿಲಿಟರಿ ಉದ್ದೇಶಗಳೇ ಅಲ್ಲದೆ ಆರ್ಥಿಕ ಹಿನ್ನೆಲೆಯಿರುವ ಉದ್ದೇಶಗಳೂ ಇರುತ್ತವೆ ಎಂಬುದಕ್ಕೆ ಇತಿಹಾಸವೇ ಸಾಕ್ಷಿ. ಇರಾಕ್‌ನ ತೈಲ ಸಂಪತ್ತನ್ನು ಹತೋಟಿಗೆ ತೆಗೆದುಕೊಂಡು ಇಡೀ ಪಶ್ಚಿಮ ಏಷ್ಯಾದಲ್ಲಿ ತನ್ನ ಪ್ರಾಬಲ್ಯವನ್ನು ಹೆಚ್ಚಿಸಿಕೊಳ್ಳುವುದು ಅಮೆರಿಕಾದ ಆಕ್ರಮಣಕ್ಕೆ ಪ್ರೇರಣೆಯಾಗಿತ್ತು. ಇವೆಲ್ಲದರ ಪರಿಣಾಮವಾಗಿ ಇರಾನ್, ಸಿರಿಯಾ, ಇಸ್ರೇಲ್, ಆಫ್ಘಾನಿಸ್ತಾನ ಮೊದಲಾದ ರಾಷ್ಟ್ರಗಳನ್ನೊಳಗೊಂಡಂತೆ ಇಡೀ ಪಶ್ಚಿಮ ಏಷ್ಯಾದಲ್ಲಿ ಪರಿಸ್ಥಿತಿ ಉಲ್ಬಣಗೊಂಡಿದೆ. ಇಸ್ರೇಲ್ ಮತ್ತಷ್ಟು ಆಕ್ರಮಣಕಾರಿ ಕೃತ್ಯಗಳಲ್ಲಿ ತೊಡಗಿಕೊಂಡು ಪ್ಯಾಲೆಸ್ಟೈನ್ ಮೇಲೆ ದಾಳಿ ನಡೆಸುವುದು ದಿನನಿತ್ಯದ ಸುದ್ದಿಯಾಗಿದೆ.

ಮಾರ್ಚ್ ೨೦೦೩ರಲ್ಲಿ ಅಮೆರಿಕಾ ಆಕ್ರಮಣ ನಡೆಸಿ ಇದೀಗ ಹೆಚ್ಚೂ ಕಡಿಮೆ ಐದೂವರೆ ವರ್ಷಗಳೇ ಸಂದಿವೆ. ಎರಡನೇ ಜಾಗತಿಕ ಯುದ್ಧವು ಜರುಗಿದ್ದು ಇದಕ್ಕೂ ಕಡಿಮೆ ಅವಧಿಯಲ್ಲಿ. ಸದ್ದಾಂ ಹುಸೇನ್ ಮತ್ತು ಅವನ ಕುಟುಂಬವನ್ನು ಗುರಿಮಾಡಿ ಕುವೈತ್ ಮೂಲದ ನೆಲೆಗಳಿಂದ ನಡೆಸಿದ ದಾಳಿಯ ಕೆಲವೇ ಗಂಟೆಗಳ ಅವಧಿಯಲ್ಲಿ ಅಮೆರಿಕಾ ಮತ್ತು ಅದರ ಮಿತ್ರರಾಷ್ಟ್ರಗಳಿಗೆ ಸೇರಿದ ೪,೬೬,೦೦೦ ಸೈನಿಕರು ಬಾಗ್ದಾದ್‌ನಲ್ಲಿ ಬಂದಿಳಿದು ವಿಧ್ವಂಸಕ ಕಾರ್ಯಾಚರಣೆಗಳಲ್ಲಿ ತೊಡಗಿದರು. ಕೇವಲ ೨೦ ದಿವಸಗಳಲ್ಲಿ ೧೮೦೦ ವಿಮಾನಗಳು ೧೨,೫೦೦ ಟನ್ ಬಾಂಬುಗಳ ಮಳೆ ಸುರಿಸಿದುದರಿಂದಾಗಿ ಇರಾಕ್ ಸರ್ಕಾರ ಶರಣಾಯಿತು. ಆ ಸಂದರ್ಭದಲ್ಲಿ ಅಮೆರಿಕಾದ ಸೇನಾ ದಂಡನಾಯಕ ಟಾಮಿ ಫ್ರ್ಯಾಂಕ್ ಅಂದು ಜರುಗಿದ ಘರ್ಷಣೆಗಳಲ್ಲಿ ೩೦,೦೦೦ ಇರಾಕಿ ಸೈನಿಕರು ಹತರಾಗಿದ್ದು, ೮೦೦೦ ಜನ ನಾಗರಿಕರು ಗಾಯಗೊಂಡಿದ್ದಾರೆ ಎಂದು ಘೋಷಿಸಿದ್ದ. ೪೩ ದಿವಸಗಳ ಮಿಲಿಟರಿ ಕಾರ್ಯಾಚರಣೆಯ ನಂತರ, ಎಂದರೆ ಮೇ ೧ರಂದು ಜಾರ್ಜ್ ಬುಷ್, ''ಇರಾಕ್ ವಿರುದ್ಧ ತೆಗೆದುಕೊಂಡಿದ್ದ ಮಿಲಿಟರಿ ಕಾರ್ಯಾಚರಣೆಯು ಸಫಲಗೊಂಡಿದೆ'' ಎಂದು ಇಡೀ ಜಗತ್ತಿಗೆ ಸಾರಿ ಹೇಳಿದ್ದ. ದುರಂತವೆಂದರೆ, ಇರಾಕ್‌ನಲ್ಲಿ ಜರುಗುತ್ತಿರುವ ಘರ್ಷಣೆಗಳು ಇಂದಿಗೂ ಮುಂದುವರೆಯುತ್ತಿದ್ದು ಸಾವನ್ನಪ್ಪಿದ ಅಮಾಯಕರ ಸಂಖ್ಯೆ ೧ ಕೋಟಿ ೨೩ ಲಕ್ಷಕ್ಕೂ ಹೆಚ್ಚು. ಈ ೫ ವರ್ಷಗಳ ಅವಧಿಯಲ್ಲಿ ಅಮೆರಿಕಾದ ೪೦೦೦ ಸೈನಿಕರೂ ಹತರಾಗಿದ್ದಾರೆ.

೯ನೇ ಪುಟಕ್ಕೆ






**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**ಪ್ರೊ॥ ಜಿ.ಟಿ.ಎನ್.**
**– ಮುಗಿಯದ ಪಯಣದಲ್ಲಿ ಅತ್ರಿಸೂನು**

ಇತ್ತೀಚೆಗೆ ಪ್ರಕೃತಿಯಲ್ಲಿ ಲೀನರಾದ ಪ್ರೊ॥ ಜಿ. ಟಿ. ನಾರಾಯಣರಾಯರ ವ್ಯಕ್ತಿತ್ವಕ್ಕೆ ಹಲವಾರು ಆಯಾಮಗಳು – ಜನಪ್ರಿಯ ವಿಜ್ಞಾನ ಲೇಖಕರು, ವಿಚಾರವಾದಿಗಳು, ಕಾವ್ಯಹೃದಯಿಗಳು, ಗಣಿತ ಮತ್ತು ಖಗೋಳ ವಿಜ್ಞಾನಗಳ ಅತ್ಯುತ್ತಮ ಅಧ್ಯಾಪಕರು, ಒಳ್ಳೆಯ ವಾಗ್ಮಿಗಳು, ಪದಕೋಶ - ವಿಶ್ವಕೋಶಗಳ ಯಶಸ್ವೀ ಸಂಪಾದಕರು, ನಿಷ್ಠುರವಾದಿ ಇತ್ಯಾದಿ. ಇವುಗಳಲ್ಲಿ ಯಾವುದೇ ಒಂದು ಆಯಾಮದಲ್ಲಿ ಕಾರ್ಯನಿರತರಾಗಿದ್ದರೂ ಪ್ರೊ॥ ಜಿ.ಟಿ.ಎನ್. ಅವರು ಓರ್ವ ಯಶಸ್ವೀ ಸಾಧಕರೆನಿಸಿಕೊಳ್ಳುತ್ತಿದ್ದರು. ಹಾಗಿರುವಲ್ಲಿ ಈ ಎಲ್ಲಾ ಆಯಾಮಗಳಲ್ಲೂ ಜಯವನ್ನೇ ಸಾಧಿಸಿರುವ ಕನ್ನಡಿಗರಲ್ಲಿ ಪ್ರೊ॥ ಜಿ. ಟಿ. ನಾರಾಯಣರಾಯರು ಏಕಮೇವಾದ್ವಿತೀಯರೇ ಸರಿ! ಕ್ಲಿಷ್ಟವಾದ ವೈಜ್ಞಾನಿಕ ವಿಷಯಗಳ ಮಂಡನೆ ಮತ್ತು ವಿವರಣೆಗಳಿಂದ ಹಿಡಿದು ಸುಶ್ರಾವ್ಯವಾದ ಶಾಸ್ತ್ರೀಯ ಸಂಗೀತ ಕಾರ್ಯಕ್ರಮಗಳವರೆಗೆ ಸಂದರ್ಭೋಚಿತವಾಗಿ ಹೊರ ಬಂದ ಅವರ ಆಶುಕವಿತಾ ಪ್ರತಿಭೆಯ ತುಣುಕುಗಳಿಗೆ 'ಅತ್ರಿಸೂನು' ಎಂಬ ಮುದ್ರೆಯನ್ನು ಒತ್ತಿದ ಶ್ರೀಯುತರು ಅವರ ಮನೆಗೆ ಎ-ತ್ರಿ ಎಂದು ಇಟ್ಟ ಹೆಸರನ್ನು ವ್ಯಾಖ್ಯಾನಿಸುತ್ತ ಆಂಗ್ಲ ಭಾಷೆಯ ಮೊದಲಕ್ಷರವಾದ 'ಎ'ಯಿಂದ ಆರಂಭವಾಗುವ ಅವರ ಪುತ್ರತ್ರಯರನ್ನು ಸೂಚಿಸುತ್ತದೆ ಎಂಬ ಮಹಾವಾಕ್ಯಾರ್ಥವನ್ನು ನಮ್ಮಂಥ ಪಾಮರರ ಜ್ಞಾನಾರ್ಥವಾಗಿ ನೀಡುತ್ತಾರೆ!

ಇಪ್ಪತ್ತನೇ ಶತಮಾನದ ಮಧ್ಯದಿಂದ ಸುಮಾರು ಆರು ದಶಕಗಳಷ್ಟು ದೀರ್ಘಾವಧಿಯಲ್ಲಿ ಪ್ರೊ॥ ಜಿ.ಟಿ.ಎನ್. ಅವರು ವಿಪುಲವಾದ ವಿಜ್ಞಾನ ಸಾಹಿತ್ಯೋಗರವನ್ನು ಕನ್ನಡಾಭಿಮಾನಿಗಳಿಗೆ ಯಥೇಚ್ಛವಾಗಿ ಉಣಬಡಿಸಿದ್ದಾರೆ. ಅವರ ವಿಶಿಷ್ಟವಾದ ಲೇಖನ ಶೈಲಿಯ ಬಗ್ಗೆ ಜಿ.ಟಿ.ಎನ್. ಅವರಿಗೆ ಎಲ್ಲಿಲ್ಲದ ಅಭಿಮಾನ. ಅರ್ಥಪೂರ್ಣವಾದ ಸಂಸ್ಕೃತ ಪದಗಳ ಜೋಡಣೆ ಹಾಗೂ ಪ್ರಯೋಗಗಳಲ್ಲಿ ಅವರದೇ ಆದ ಅಸದೃಶವಾದ ಒಂದು ಛಾಪು! ಅಂತೆಯೇ ಇತರ ಲೇಖಕರ ಶೈಲಿ ಹಾಗೂ ಪದಪ್ರಯೋಗಗಳ ಬಗ್ಗೆ ಜಿ.ಟಿ.ಎನ್. ಅವರಿಗೆ ಏನೋ ಒಂದು ಅಸಮಾಧಾನ.

ನನ್ನ 'ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ' ಮತ್ತು 'ಫಲಜ್ಯೋತಿಷ - ನಂಬುವಿರಾ ?' (ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು) ಎಂಬ ಪುಸ್ತಿಕೆಗಳು ಹೊರ ಬಂದಾಗ ಪತ್ರಿಕೆಗಳಲ್ಲಿ ಮೆಚ್ಚುಗೆಯ ವಿಮರ್ಶೆಗಳನ್ನು ಪ್ರಕಟಿಸಿ ನನ್ನನ್ನು ಪ್ರೋತ್ಸಾಹಿಸಿದ ಪ್ರೊ॥ ರಾಯರು, ಖಾಸಗಿಯಾಗಿ ನನ್ನ ಕಿವಿ ಹಿಂಡಿ ನನ್ನ ಲೇಖನ ಶೈಲಿ ''ಕೃತ್ರಿಮ ಮತ್ತು ಜರ್ನಲಿಸ್ಟಿಕ್'' ಎಂದು ಖಂಡಿಸಲು ಹಿಂದೇಟು ಹಾಕಲಿಲ್ಲ. ನಾನಾದರೋ ಅವರ ಗದರಿಕೆಯ ಮಾತುಗಳನ್ನೇ ಆಶೀರ್ವಾದ ಮತ್ತು ಪ್ರೋತ್ಸಾಹವೆಂದು ವಿನಮ್ರವಾಗಿ ಸ್ವೀಕರಿಸಿ ನನ್ನ ಎಂದಿನ ಶೈಲಿಯನ್ನೇ ಮುಂದುವರಿಸಿದ್ದೇನೆ. ಕನ್ನಡದಲ್ಲಿ ಹತ್ತಾರು ಯಶಸ್ವೀ ವಿಜ್ಞಾನ ಲೇಖಕರನ್ನು ಸೃಷ್ಟಿಸಿ ಪ್ರೋತ್ಸಾಹಿಸಿದ ಹಿರಿಯ ಜೀವಿ ಪ್ರೊ॥ ಜಿ.ಟಿ.ಎನ್. ಅವರು. ಹಾಗೆಯೇ ಕ್ಲಿಷ್ಟ ಸಂಸ್ಕೃತ ಪದಗಳ ಪ್ರಯೋಗ ಹಾಗೂ ಮಧ್ಯೇ ಮಧ್ಯೇ ಪದ್ಯಗಳ ಸಿಂಚನದಿಂದಾಗಿ ವಿಚಲಿತರಾದ ಕನ್ನಡ ಓದುಗರು ಇಲ್ಲದಿಲ್ಲ. ''ಹೇಳಿಕೆಗಳ ಉಲ್ಲೇಖಗಳು ತರ್ಕಕ್ಕೆ ಪರ್ಯಾಯವಾಗಲಾರವು'' ಎಂದು ಕಿವಿಮಾತನ್ನು ಹೇಳುವ ಪ್ರೊ॥ ಜಿ.ಟಿ.ಎನ್. ಅವರ ಕೃತಿಗಳಲ್ಲಿ 'ಮಂಕುತಿಮ್ಮ'ನಿಂದ, ಕವಿವರ್ಯ ಕುವೆಂಪು ಅವರ ಕೃತಿಗಳಿಂದ ಹಾಗೂ ಸ್ವನಾಮಾಂಕಿತ 'ಅತ್ರಿಸೂನು'ವಿನಿಂದ ಪದ್ಯಗಳ ಮಹಾಪೂರವನ್ನೇ ಕಾಣಬಹುದು!




ಆಧುನಿಕ ವಿಜ್ಞಾನ ವಿಷಯಗಳಲ್ಲಿ ಬರುವ ಪಾರಿಭಾಷಿಕ ಪದಗಳನ್ನು (ಸಂಸ್ಕೃತೀಕೃತ) ಕನ್ನಡಕ್ಕೆ ಅನುವಾದಿಸುವಾಗ ವಿಶಿಷ್ಟ ಪದಪ್ರಯೋಗಗಳ ಬಗ್ಗೆ ಜಿ.ಟಿ.ಎನ್. ಅವರು ಎಂದೂ ರಾಜಿಮಾಡಿಕೊಳ್ಳುತ್ತಿರಲಿಲ್ಲ. ಅಷ್ಟೇ ಅಲ್ಲದೆ ಬೇರೆ ಲೇಖಕರು ಬಳಸಿದ ಪದಗಳನ್ನು ಒಪ್ಪುತ್ತಲೂ ಇರಲಿಲ್ಲ. ಜ್ಯೋತಿರ್ಭೌತ ಶಾಸ್ತ್ರದಲ್ಲಿ ಬರುವ 'ಬ್ಲಾಕ್ ಹೋಲ್' ಎಂಬುದಕ್ಕೆ ಬಹಳಷ್ಟು ಲೇಖಕರು ಬಳಸಿರುವ ಪದಗಳು 'ಕೃಷ್ಣರಂಧ್ರ' ಅಥವಾ 'ಕಪ್ಪುರಂಧ್ರ'. ಈ ಪ್ರಯೋಗಗಳನ್ನು ಒಪ್ಪದ ಪ್ರೊ॥ ಜಿ.ಟಿ.ಎನ್. ಸೂಚಿಸಿರುವ ಪದ 'ಕೃಷ್ಣವಿವರ'! ಇಲ್ಲಿ 'ವಿವರ' ಎಂಬ ಸಂಸ್ಕೃತ ಪದದ ಅರ್ಥ ರಂಧ್ರ, ತೂತು ಹಾಗೂ ಸಂದು. ಕನ್ನಡದ ಜಾಯಮಾನಕ್ಕೆ ಅನುಗುಣವಾಗಿ 'ವಿವರ' ಪದವನ್ನು 'ವಿವರಣೆ' ಎಂದು ಅರ್ಥೈಸಿಕೊಂಡರೆ ಅದು ಕನ್ನಡಿಗರಾದ ನಮ್ಮದೇ ತಪ್ಪು!

ಯುವ ಪೀಳಿಗೆಯ ಕನ್ನಡ ವಿಜ್ಞಾನ ಲೇಖಕರಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟು, ಜನಪ್ರಿಯ ವಿಜ್ಞಾನ ಲೇಖನಗಳಲ್ಲಿ ಪರಿಪಾಲಿಸಲೇಬೇಕಾದ ಅನೇಕ ನಿಯಮಗಳನ್ನು ವಿಧಿಸಿ, ಮೀರಬಾರದಂತಹ ಒಂದು ಸ್ಪಷ್ಟವಾದ ಚೌಕಟ್ಟನ್ನು ನಿರ್ಮಿಸಿ, ಬಹಳಷ್ಟು ಲೇಖಕರನ್ನು ಪ್ರೋತ್ಸಾಹಿಸಿದ ಪ್ರೊ॥ ಜಿ. ಟಿ. ನಾರಾಯಣರಾಯರು ಚಿರಸ್ಫೂರ್ತಿಯ ಸೆಲೆ.

ಬೆಂಗಳೂರು *ಡಾ॥ ಎಸ್. ಬಾಲಚಂದ್ರರಾವ್*

ಪ್ರೊ॥ ಜಿ.ಟಿ.ಎನ್. ಅವರು ನನಗೆ ಮೊದಲು ಪರಿಚಯವಾದದ್ದು ೧೯೫೭ರಲ್ಲಿ ಮಡಿಕೇರಿಯ ಪ್ರಥಮ ದರ್ಜೆ ಕಾಲೇಜಿನಲ್ಲಿ. ಅವರು ನನ್ನ ಹಿರಿಯ ಸಹೋದ್ಯೋಗಿಗಳು ಹಾಗೂ ಬ್ಯಾಂಕಿನ ವ್ಯವಹಾರದಿಂದ ಮೊದಲ್ಗೊಂಡು ಕಾಲೇಜಿನ ಅನೇಕ ಚಟುವಟಿಕೆಗಳನ್ನು ಕುರಿತು ನನಗೆ ಮಾರ್ಗದರ್ಶಕರಾಗಿದ್ದವರು. ಅನೇಕ ವರ್ಷಗಳ ನಂತರ ಮೈಸೂರಿನಲ್ಲಿ ಭೇಟಿಯಾದಾಗ 'ರಿಚರ್ಡ್ ಫೇನ್‌ಮನ್' ಕುರಿತು ಪುಸ್ತಕ ಬರೆದುಕೊಡಲು ಪ್ರೇರೇಪಿಸಿದರು. ಅದು ನಂತರ ಪುಸ್ತಕ ಪ್ರಾಧಿಕಾರದಿಂದ ಪ್ರಕಟವಾಯಿತು. ''ನವಕರ್ನಾಟಕದವರ ಜ್ಞಾನ-ವಿಜ್ಞಾನ ಕೋಶದ ಕೆಲಸದಲ್ಲಿ ಪಾಲ್ಗೊಳ್ಳಿರಿ, ಶ್ರೀಯುತರಾದ ಆರ್. ಎಸ್. ರಾಜಾರಾಮ್ ಅವರಿಗೆ ನಿಮ್ಮ ಹೆಸರನ್ನು ಸೂಚಿಸಿದ್ದೇನೆ, ನೀವು ಬೆಂಗಳೂರಿಗೆ ಹೋಗಿ ಅವರನ್ನು ಭೇಟಿಯಾಗಿ'' ಎಂದು ಪತ್ರವನ್ನು ಬರೆದಿದ್ದರು. 'ಸ್ಟೀಫನ್ ಹಾಕಿಂಗ್' ಕುರಿತು ಪುಸ್ತಕ ಬರೆಯಿರಿ ಎಂದು ಹೇಳಿ ಅವರ ಪುಸ್ತಕ ಭಂಡಾರದಿಂದ ಆಕರ ಗ್ರಂಥಗಳನ್ನು ಆರಿಸಿ ನಮ್ಮ ಮನೆಗೇ ತಲುಪಿಸಿದ್ದರು. ಪುಸ್ತಕದ ಹಸ್ತಪ್ರತಿಯನ್ನು ಸಹನೆಯಿಂದ ಪರಿಷ್ಕರಿಸಿಕೊಟ್ಟರು. ಪುಸ್ತಕಕ್ಕೆ ಬೆನ್ನುಡಿ ಬರೆಯುತ್ತೇನೆ ಎಂದೂ ಹೇಳಿದ್ದರು. ಅವರ ನೆನಪು ನನಗೆ ಚಿರಂತನ.

ಮೈಸೂರು **ಬಿ. ಎಸ್. ಮಯೂರ**

ಅನೇಕ ಕ್ಷೇತ್ರಗಳಲ್ಲಿ ಖ್ಯಾತನಾಮರಾಗಿದ್ದ ಜಿ. ಟಿ. ನಾರಾಯಣರಾಯರು ಈಗ ನಮ್ಮೊಂದಿಗಿಲ್ಲ. ಸುಮಾರು ಎರಡೂವರೆ ವರ್ಷಗಳ ಹಿಂದೆ, ಜಿ.ಟಿ.ಎನ್.ಗೆ ಆಪ್ತರಾದ ರಾಘವೇಂದ್ರ ಭಟ್ಟರ ಮನೆಯಲ್ಲಿ ಅವರ ಪ್ರಥಮ ಭೇಟಿ, ಪರಿಚಯ. 'ಎನ್.ಸಿ.ಸಿ. ದಿನಗಳು' ಎನ್ನುವ ಅವರ ಕೃತಿಯನ್ನು ಓದಿ ಅವರ ಬರವಣಿಗೆಯ ಕುರಿತಾಗಿ ಗೌರವಪೂರ್ವಕವಾದ ಮೆಚ್ಚುಗೆಯನ್ನು ಹೊಂದಿದವಳಿಗೆ ಆ ದಿನದ ಮುಖತಃ ಭೇಟಿಯಿಂದ ಜಿ.ಟಿ.ಎನ್.ರ ನಿರಹಂಕಾರ ವ್ಯಕ್ತಿತ್ವದ ಪರಿಚಯವಾಗಿ ಅವರ ಕುರಿತಾದ ಗೌರವ ಮತ್ತಷ್ಟು ಹೆಚ್ಚಿತು. ಆಪ್ತಬಂಧುವಿನಂತೆ ಮಾತಾಡಿಸುವ ಸರಳತೆ, ಸಜ್ಜನಿಕೆ. ಯಾವ ಹಮ್ಮುಬಿಮ್ಮುಗಳಿಲ್ಲದ ಸೌಹಾರ್ದತೆ. ಅಂದಿನ ಪರಿಚಯ ಅಷ್ಟಕ್ಕೇ ಮೊಟಕುಗೊಳ್ಳಲಿಲ್ಲ. ಜಿ.ಟಿ.ಎನ್.ರ ಆಯ್ಕೆಯ ಪತ್ರಿಕೆ, ಪುಸ್ತಕಗಳಲ್ಲಿ ನನ್ನ ಲೇಖನ ಪ್ರಕಟವಾದಾಗಲೆಲ್ಲ ಅವರು ಅದನ್ನು ಓದಿದ್ದಾರೆ, ಫೋನ್ ಮಾಡಿ ತಮ್ಮ ಅನಿಸಿಕೆಯನ್ನು ವ್ಯಕ್ತಪಡಿಸಿದ್ದಾರೆ. ಹೆಸರಾಂತ ಹಿರಿಯ ಲೇಖಕರಾದ ಅವರು ಮೊದಲ ಸಲ ಫೋನ್ ಮಾಡಿ 'ಹಲೋ...'ಗೆ ಪ್ರತ್ಯುತ್ತರವಾಗಿ ನನ್ನ ಪ್ರಕಟಿತ ಕತೆಯ ಕೊನೆಯ ಎರಡು ಸಾಲುಗಳನ್ನು ಓದಿ ನಂತರ ಮಾತು ಮುಂದುವರಿಸಿದ ಪರಿ ಅವರದೇ ವೈಖರಿ. ಹಿರಿಯ ಚೇತನದ ಈ ಅಕೃತ್ರಿಮ ವಿಶ್ವಾಸದಿಂದ ನನ್ನಲ್ಲಿ ಕೃತಜ್ಞತೆಯ ಭಾವ. ಸ್ವಇಚ್ಛೆಯಿಂದ ಮೈಸೂರಿನ ಜೆ.ಎಸ್.ಎಸ್. ಆಸ್ಪತ್ರೆಗೆ ದೇಹದಾನ ಮಾಡುವ ಕುರಿತು ಲಿಖಿತ ನಿರ್ದೇಶನವಿತ್ತಿದ್ದ ಜಿ.ಟಿ.ಎನ್. ಸಾಮಾನ್ಯರೊಡನಿದ್ದ ಓರ್ವ ಅಸಾಮಾನ್ಯ. ಅವರ ವೈಚಾರಿಕ ದೃಷ್ಟಿಕೋನ ಅನನ್ಯ. ಚರಮ ಗೀತೆಯೆಂದು ತಮ್ಮ ಜೀವನಚರಿತ್ರೆ 'ಮುಗಿಯದ ಪಯಣ'ದಲ್ಲಿ ಅವರೇ ಬರೆದುಕೊಂಡ ಒಂದು ಮುಕ್ತಕ ಹೀಗಿದೆ :

ಸಾವು ? ಜೀವನಯಾನವೈದಲಿಹ ಕಟ್ಟಕಡೆ
ರೇವು. ಸುಂದರ ಸುಖದ ಸಂತೃಪ್ತ ಸಂಪನ್ನ
ಠಾವು. ಪೀಳಿಗೆ ವರ್ಧಿಸಲು ವ್ಯಕ್ತಿ ಮುಡಿಪಿಡುವ
ಠೇವು – ತಿಳಿ ಜೀವಸಾತತ್ಯವಿದು ಅತ್ರಿಸೂನು.

ಮೈಸೂರು - ೧೬ **ವಸುಮತಿ ಉಡುಪ**

### ತಾರೆಗಳ ನಡುವೆ ಜಿ.ಟಿ.ಎನ್.

ಒಂಭತ್ತು ವರ್ಷಗಳ ಹಿಂದೆ ನಡೆದ ಘಟನೆ: ಮೈಸೂರು ವಿಶ್ವವಿದ್ಯಾನಿಲಯದ ಶೈಕ್ಷಣಿಕ ಸಿಬ್ಬಂದಿ ಮಹಾವಿದ್ಯಾಲಯದವರು ಹಮ್ಮಿಕೊಂಡಿದ್ದ ಅಭಿವಿನ್ಯಾಸ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿದ್ದೆ. ಅಂದು ಬೆಳಗ್ಗಿನ ತರಗತಿ ಜಿ.ಟಿ.ಎನ್. ಅವರದು. ಬೆಳಗ್ಗೆ ಹತ್ತು ಗಂಟೆಗೆ ಹಾಜರಾಗಬೇಕಾಗಿದ್ದ ನಾನು ಐದು ನಿಮಿಷ ತಡವಾಗಿ ಬಂದಿದ್ದೆ. ನನ್ನೊಂದಿಗೆ ಇತರ ನಾಲ್ಕಾರು ಮಂದಿ ಉಪನ್ಯಾಸಕರೂ ಇದ್ದರು. ನಮ್ಮ ಆಲಸ್ಯಕ್ಕೆ ಕಾರಣವೂ ಇತ್ತು. ಹಿಂದೆ ತರಗತಿ ತೆಗೆದುಕೊಂಡಿದ್ದ ಹಲವಾರು ಮಂದಿ ಸಂಪನ್ಮೂಲ ವ್ಯಕ್ತಿಗಳು ಹದಿನೈದು-ಇಪ್ಪತ್ತು ನಿಮಿಷ ತಡವಾಗಿ ಬಂದಿದ್ದರು. ಆದರೆ ನಾರಾಯಣ ರಾಯರು ಒಂಬತ್ತು ಐವತ್ತಕ್ಕೆ ತರಗತಿಗೆ ಹಾಜರಾಗಿ ಕರಿಹಲಗೆಯ ಮೇಲೆ ಬರೆಯತೊಡಗಿದ್ದರು. ''ಅಧ್ಯಾಪಕರು ಸರಿಯಾದ ಸಿದ್ಧತೆ ಇಲ್ಲದೆ, ಸಮಯಕ್ಕೆ ಸರಿಯಾಗಿ ತರಗತಿಗೆ ಹಾಜರಾಗದಿದ್ದರೆ ವಿದ್ಯಾರ್ಥಿಗಳಲ್ಲಿ ಶಿಸ್ತು ಮೂಡುವುದು ಹೇಗೆ?'' ಎಂದು ನೇರವಾಗಿ ನಮ್ಮ ಬಳಿ ಕೇಳಿದರು. ನೆಲವು ಬಾಯಿಬಿಡಬಾರದೇ, ಎಂದು ಆಗ ಅನ್ನಿಸಿತ್ತು! ಮೈಸೂರಿನಲ್ಲಿ ಎಲ್ಲೇ ಸಂಗೀತ, ನಾಟಕ, ಯಕ್ಷಗಾನವೇ ಮೊದಲಾದ ಕಾರ್ಯಕ್ರಮಗಳು ನಡೆಯಲಿ ಅಲ್ಲಿ ಇವರು ಹಾಜರ್. ನಡೆದುಕೊಂಡೇ ಬರುತ್ತಿದ್ದ ಅವರನ್ನು ಒಂದೆರಡು ಬಾರಿ ಕಾರ್ಯಕ್ರಮ ಮುಗಿದ ಬಳಿಕ ನನ್ನ ಲಟಾರಿ ಚಾಂಪ್‌ನಲ್ಲಿ ಮನೆಗೆ ಬಿಟ್ಟದ್ದುಂಟು. ವಾಹನ ಹತ್ತುವ ಮೊದಲು, ''ಒಂದು ಬಾರಿ ಸೋಮಾರಿತನ ಆವರಿಸಿದರೆ ದೇಹ ಅದನ್ನೇ ಬೇಡುತ್ತದೆ'', ಎಂದು ತಮಾಷೆ ಮಾಡುತ್ತಿದ್ದರು. ಪ್ರಯಾಣ, ಭಾಷಣ, ದೇವರು ಈ ಮೂರು ಅವರಿಗೆ ಇಷ್ಟವಾಗದ ವಿಷಯಗಳಾಗಿದ್ದವು. ನಾನು ಉಡುಪಿಯವ ಎಂದು ಪರಿಚಯಿಸಿಕೊಂಡಾಗ ಅವರು ಕು.ಶಿ. ಅವರನ್ನು ನೆನಪಿಸಿಕೊಂಡು ಭಾವುಕರಾಗುತ್ತಿದ್ದರು. ಅವರ ಒತ್ತಾಸೆಯ ಮೇರೆಗೆ ಅನೇಕ ಬಾರಿ ಉಡುಪಿಗೆ ಬಂದದ್ದಿದೆ. ವೈಚಾರಿಕತೆ ಜಿ.ಟಿ.ಎನ್. ಅವರಲ್ಲಿ ಹರಳುಗಟ್ಟಿತ್ತು. ಇಳಿ ವಯಸ್ಸಿನಲ್ಲಿಯೂ ಅವರು ದೇವರು, ಜ್ಯೋತಿಷ್ಯ, ವಾಸ್ತು ಇತ್ಯಾದಿಗಳ ಬಗ್ಗೆ ತಲೆಕೆಡಿಸಿಕೊಂಡವರೇ ಅಲ್ಲ. ಒಮ್ಮೆ ವಿ.ವಿ. ಮೊಹಲ್ಲಾದ ಗಣಪತಿ ಚಪ್ಪರದ ಕೆಳಗೆ ಚೌತಿಯ ಸಂಬಂಧ ಸಂಗೀತ ಕಾರ್ಯಕ್ರಮ ನಡೆಯುತ್ತಿತ್ತು. ಎಂಟು ಗಂಟೆಗೆ ಗಣಪತಿ ವಿಗ್ರಹಕ್ಕೆ ಆರತಿ ಬೆಳಗಿ ತಟ್ಟೆಯನ್ನು ಎಲ್ಲರೆದುರು ಹಿಡಿದರು. ತಮ್ಮ ಮುಂದೆ ಹಿಡಿದಾಗ ಜಿ.ಟಿ.ಎನ್. ತಟ್ಟೆಗೆ ಕಾಸು ಹಾಕಿದರು. ''ಸಾರ್... ಯಾವುದನ್ನೂ ನಂಬದವರು ಆರತಿ ತಕೊಂಡು ತಟ್ಟೆಗೆ ಕಾಸು ಹಾಕಿದಿರಲ್ಲಾ?'' ಎಂದು ಕೆಣಕಿದೆ. ಅದಕ್ಕೆ ಅವರು, ''ಸಂಗೀತ ಕೇಳುತ್ತಿರುವ ಶ್ರೋತೃಗಳ ಮುಂದೆ ಇತರರಿಗೆ ಇರಸುಮುರಸು ಉಂಟುಮಾಡುವುದಿಲ್ಲ. ನನ್ನ ವೈಯಕ್ತಿಕ ಅಭಿಪ್ರಾಯವನ್ನು ಯಾರ ಮೇಲೂ ಹೇರುವುದಿಲ್ಲ'' ಎಂದರು. ಅರುವತ್ತಕ್ಕೂ ಮಿಕ್ಕಿ ಕೃತಿಗಳನ್ನು ಇವರು ರಚಿಸಿದ್ದಾರೆ. ''ನಿಮ್ಮ ಭಾಷೆ ಸಂಸ್ಕೃತಭೂಯಿಷ್ಠ, ಪೆಡಸು ಎಂಬ ಕೂಗು ಇದೆಯಲ್ಲಾ'' ಎಂದು ಅವರನ್ನೊಮ್ಮೆ ಕೆಣಕಿದ್ದೆ. ಅದಕ್ಕೆ ಅವರು, ''ಭಾಷಾ ದಾರಿದ್ರ್ಯ ಇರುವವರು, ಶಬ್ದ ಸಂಪತ್ತು ಬರಿದಾದವರು ಮಾತ್ರ ಹಾಗೆ ಹೇಳಲು ಸಾಧ್ಯ'' ಎಂದು ಮುಖ ಕೆಂಪಗೆ ಮಾಡಿಕೊಂಡು ಹೇಳಿದ್ದರು !

*ಶಿರಸಿ* **ಪಿ. ಬಿ. ಪ್ರಸನ್ನ**

### ಚೆನ್ನಬಸವಪ್ಪ ಬೆಟ್ಟದೂರು

ಸಾಹಿತಿ ಡಾ|| ಶಾಂತರಸರ ಒಡನಾಡಿ ಚೆನ್ನಬಸವಪ್ಪ ಬೆಟ್ಟದೂರು ಬರೆದ ಲೇಖನ (ಜೂನ್ ೨೦೦೮)ದಲ್ಲಿ ಶಾಂತರಸರ ಹೃದಯವಂತಿಕೆ, ಧೀಮಂತಿಕೆ ಮುಂತಾದ ಸದ್ಗುಣಗಳ ಅರಿವಾಗುವುದರೊಂದಿಗೆ ಅವರ ಒಟ್ಟು ವ್ಯಕ್ತಿತ್ವವೇ ಅನಾವರಣಗೊಂಡಿದೆ. ಅಗಲಿದ ಗೆಳೆಯನಿಗೆ ಅಂತಃಕರಣಪೂರ್ವಕ ಸಲ್ಲಿಸಿದ ನುಡಿನಮನದಂತಿರುವ ಈ ಲೇಖನ – ಕೊನೆಗೂ ಚೆನ್ನಬಸಪ್ಪನವರ ಕೊನೆಗಾಲದ ಕೊನರಾಗಿಬಿಟ್ಟಿತು. ಇನ್ನಿಲ್ಲದ ಚೆನ್ನಬಸವಪ್ಪ ಬೆಟ್ಟದೂರು ಅವರಿಗೆ 'ಹೊಸತು' ಮೂಲಕ ನನ್ನ ನುಡಿನಮನ.

*ನಾರ್ಣಕಜೆ, ಸುಳ್ಯ* **ಜಿ. ಎಸ್. ಉಬರಡ್ಕ**

### ಸೌರಮಂಡಲದ ಉಷ್ಣಮಾಪಕ

ನನ್ನ ಈ ಲೇಖನ ಕುರಿತಂತೆ ಓದುಗರೊಬ್ಬರು ಸೌರಗರ್ಭದ ಉಷ್ಣತೆಯ ಬಗೆಗೆ ದೂರವಾಣಿಯಲ್ಲಿ ಕೇಳಿ ವಿವರವನ್ನು 'ಹೊಸತು'ನಲ್ಲಿ ಪ್ರಕಟಿಸಿ ಎಂದು ಸಲಹೆ ನೀಡಿದ್ದಾರೆ.

ಖಗೋಳ ವಿಜ್ಞಾನದಲ್ಲಿ ಸೂರ್ಯನ ಉಷ್ಣತೆಯ ಬಗೆಗೆ ನಿಖರವಾಗಿ ಹೇಳುವುದು ಕಷ್ಟಸಾಧ್ಯ. ಬ್ರಿಟನ್ನಿನ ಸರ್ ಜಾನ್ ಹೆರ್ಷಲ್ (೧೭೯೨-೧೮೭೧) ಮತ್ತು ಫ್ರಾನ್ಸ್ ದೇಶದ ಕ್ಲಾಡ್ ಸೆರ್ವೆಸ್ ಮಾಥಿಯಸ್ ಪೌಲೆಟ್ (೧೮೩೭) ಎಂಬ ಖಗೋಳ ವಿಜ್ಞಾನಿಗಳು ಸೂರ್ಯನಿಂದ ನೇರವಾಗಿ ಬರುವ ರಶ್ಮಿಗಳು ಸಂಪೂರ್ಣವಾಗಿ ಹೀರಲ್ಪಟ್ಟರೆ ೧.೮ ಸೆಂ.ಮೀ. ಆಳದಲ್ಲಿ ಶೇಖರವಾಗಿರುವ ನೀರು ೧ ನಿಮಿಷದಲ್ಲಿ ೧°Cಗೆ ಏರಬಲ್ಲ ಸಾಮರ್ಥ್ಯವಿರುತ್ತದೆ ಎಂದು ವಿವರಿಸಿದ್ದರು. ಇಂತಹ ಪ್ರಯೋಗ ಅತಿ ಸರಳ ಎನಿಸಿದರೂ ವಾತಾವರಣದಲ್ಲಿ ಅನೇಕ ಘಟಕಗಳ ಪ್ರಭಾವದಲ್ಲಿ ಸಂಪೂರ್ಣ ಹೀರಿಕೆ ಸಾಧ್ಯವಾಗದು. ಈ ಸಮಸ್ಯೆಗೆ ೧೮೮೧ ಹಾಗೂ ೧೯೦೪ರಲ್ಲಿ ಅನೇಕ ಖಗೋಳ ವಿಜ್ಞಾನಿಗಳು ವೈವಿಧ್ಯಮಯ ವಿವರಣೆಗಳನ್ನೂ ನೀಡಿದ್ದರು.

ಬೆಳಕು ವಿದ್ಯುತ್ಕಾಂತೀಯ ತರಂಗಗಳನ್ನು ಹೊಂದಿದ್ದು, ಪ್ರತಿಯೊಂದು ತರಂಗಾಂತರ ಬೆಳಕಿನ ಕಿರಣಗಳು ಯಾವುದೇ ವಾತಾವರಣದ ಅಡಚಣೆಯಿಲ್ಲದಾಗ ಹೀರುವ ಪ್ರಕ್ರಿಯೆಯ ಲಕ್ಷಣಗಳನ್ನು ಪರಿಗಣಿಸಿ ಸೂರ್ಯನ ಉಷ್ಣತೆಯನ್ನು ಊಹಿಸುವ ಅಧ್ಯಯನಗಳಾಗಿವೆ. ಉಷ್ಣತೆಯನ್ನು ಸೆಂಟಿಗ್ರೇಡ್, ಫ್ಯಾರನ್‌ಹೈಟ್ ಮತ್ತು ಕೆಲ್ವಿನ್ ಮಾನಕಗಳಲ್ಲಿ ಪರಿಗಣಿಸಬಹುದು. ವಿವಿಧ ಮೂಲಗಳು ವಿವರಿಸಿರುವ ಸೌರಗರ್ಭದ ಉಷ್ಣತೆಗಳು ಹೀಗಿವೆ :

| ಆಕರ | ಮಾನಕ | ಶಿಷ್ಟ ಮಾನಕ |
|---|---|---|
| ೧. 'ಫಸ್ಟ್ ಗೈಡ್ ಟು ಅಸ್ಟ್ರಾನಮಿ' ೧೯೮೮, ಪಶಾಫ್ ಜೆ. ಎಂ. ಪೀಟರ್‌ಸನ್ | ೧೫,೦೦೦°C<br>೨೭,೦೦೦°F | ೧೫,೦೦೦ K |
| ೨. 'ನ್ಯೂ ಬುಕ್ ಆಫ್ ನಾಲೆಡ್ಜ್' ೧೯೯೬, ಸಂಪುಟ 175 | ೨೭,೦೦೦,೦೦೦°F<br>೧೫,೦೦೦,೦೦೦°C | ೧೫,೦೦೦,೦೦೦ K |
| ೩. 'ಮೈಕ್ರೊ ಸಾಫ್ಟ್ ಎನ್‌ಕಾರ್ಟ' ೧೯೯೫ | ೧೬,೦೦೦,೦೦೦° K<br>೨೯,೦೦೦,೦೦೦°F | ೧೬,೦೦೦,೦೦೦ K |
| ೪. 'ಕಾಸ್‌ಮಾಸ್' ೧೯೮೦ | ೫೯ ಮಿಲಿಯನ್ °F<br>೧೫ ಮಿಲಿಯನ್ °K | ೧೫,೦೦೦,೦೦೦ K |
| ೫. 'ಕನ್‌ಸೈಸ್ ಕೊಲಂಬಿಯಾ ಎಲೆಕ್ಟ್ರಾನಿಕ್ ಎನ್‌ಸೈಕ್ಲೋಪೀಡಿಯಾ' ೧೯೯೪ | ೨೦ ಮಿಲಿಯನ್ °C | ೨೦,೦೦೦,೦೦೦ K |

ಸೌರಗರ್ಭದಲ್ಲಿ ಹೇರಳವಾಗಿರುವ ಜಲಜನಕ (ಶೇ. ೭೦) ಮತ್ತು ಹೀಲಿಯಂ (ಶೇ. ೩೦) ಅನಿಲಗಳು ಬೈಜಿಕ ಸಮ್ಮಿಲನಗೊಳ್ಳಲು ಅಧಿಕ ಉಷ್ಣತೆ ಹೊರಬೀಳುವುದು. ಹಾಗಾಗಿ ಐನ್‌ಸ್ಟೀನ್‌ರ $E=mc^2$ ಸೂತ್ರ ಸೂಕ್ತವಾಗಿದೆ.

ಪ್ರಸ್ತುತ ಲೇಖನದ ಜೊತೆ ಇರುವ ಚಿತ್ರದಲ್ಲಿ ಸೌರಗರ್ಭದ ಉಷ್ಣತೆ ೨೦ ಮಿಲಿಯನ್ °C ಎಂದು ತಿದ್ದಿ ಓದಿಕೊಳ್ಳಬೇಕು. ಹಾಗೆಯೇ ಪಠ್ಯದಲ್ಲಿ ಅದು ೨೦೦ ಲಕ್ಷ °C ಇರಬೇಕಾದ್ದು ೨೦ ಲಕ್ಷ °C ಎಂದಾಗಿದೆ. ಅಚಾತುರ್ಯದ ತಪ್ಪಿಗಾಗಿ ಕ್ಷಮೆಯಿರಲಿ.

ಒಟ್ಟಿನಲ್ಲಿ ನಮಗೀಗ ಲಭ್ಯವಾಗಿರುವ ಸೂರ್ಯಪ್ರಕಾಶದ ಅರ್ಧದಷ್ಟು ಮಾತ್ರ ದೊರಕಿದರೆ ನಾವು ಮಂಜಿನಂತೆ ಹೆಪ್ಪುಗಟ್ಟಬೇಕಾಗುತ್ತದೆ. ಇಲ್ಲಿ ಈ ಪ್ರಕಾಶದ ದುಪ್ಪಟ್ಟು ಅನುಭವಿಸಬೇಕಾಗಿ ಬಂದರೆ ಸುಟ್ಟು ಕರಕಲಾಗಬೇಕಾದೀತು !!!

*ಬೆಂಗಳೂರು* ***ಡಾ|| ಎನ್. ಎಸ್. ಲೀಲಾ***

### ಜುಲೈ ಸಂಚಿಕೆ

ಎ. ಕೆ. ರಾಮಾನುಜನ್ ೧೯೫೫ರಲ್ಲಿ ಬೆಳಗಾವಿ ಲಿಂಗರಾಜ ಮಹಾವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದರು. ಆಗ ನಾನು 'ಸೇವಾ' ಮಾಸಪತ್ರಿಕೆ ಹೊರಡಿಸುತ್ತಿದ್ದೆ. ಆ ಪತ್ರಿಕೆಯ ಸಲಹೆಗಾರರಾಗಿ ಮಾರ್ಗದರ್ಶನ ಮಾಡುತ್ತಿದ್ದರು. ಜನ-ಮನದ ಕಥೆಗಳನ್ನೂ ಬರೆಯುತ್ತಿದ್ದರು. ಅವರೂ-ನಾನು ಕೆಲ ಹಳ್ಳಿಗಳಲ್ಲಿ ಅಡ್ಡಾಡಿ ಕಥೆಗಳನ್ನು ಸಂಗ್ರಹಿಸಿದ್ದೆವು. ಅನಂತರ ಅವರು ಬರೋಡಾಕ್ಕೆ ಹೋದರು. ಆ ಕಥೆಗಳು ಬಹುಶಃ ಅಲ್ಲಿಂದ ಪ್ರಕಟವಾಗಿರಬೇಕು. ಈ ಸಂಚಿಕೆಯಲ್ಲಿ ಅವರ ಲೇಖನ ಓದಿ, ನನಗೆ ಹಳೆಯ ದಿನಗಳು ನೆನಪಿಗೆ ಬಂದವು. ಅಂಥ ಆಸಾಮಿ ಇನ್ನು ಸಿಗಲಾರ !

*ಬೆಳಗಾವಿ* ವಿ. ವಿಜಯಕುಮಾರ್

ಎ. ಕೆ. ರಾಮಾನುಜನ್ ಅವರ 'ಮುನ್ನೂರು ರಾಮಾಯಣಗಳು' ಬಹು ಕುತೂಹಲಕರ. ರಾಮಾಯಣ ವಾಸ್ತವವಾಗಿ ಒಂದಲ್ಲ, ಮುನ್ನೂರಲ್ಲ; ''ಶತಕೋಟಿ ಪ್ರವಿಸ್ತರಂ!'' ಮಹಾಭಾರತವೂ ಹಾಗೆಯೆ. ಅದು ಒಂದಾಗಿದ್ದರೆ ಹಗುರವಾಗಿರಬೇಕಿತ್ತು; ವಸ್ತುತಃ ಅದು ಭಾರ : ಮಹತ್ವಾತ್ ಭಾರವತ್ವಾತ್ ಚ ಮಹಾಭಾರತ ಮುಚ್ಯತೇ!'' (ಇವು ಪ್ರಾಚೀನೋಕ್ತಿಗಳೇ.)

ಮೈಸೂರು — ಸಿ.ಪಿ.ಕೆ.

ನಮ್ಮ ಇಂದಿನ ಚುನಾವಣೆಗಳು ಕೇವಲ ''ಓಟದ ಸ್ಪರ್ಧೆಯಂತಿವೆ'' ಎಂದಿರುವ ಸಂಪಾದಕರ ನಿಲುವು ನೈಜ ವಿಷಯವನ್ನು ಪ್ರಸ್ತುತಪಡಿಸಿದೆ. ನಮ್ಮ ಅಭಿಪ್ರಾಯಕ್ಕೆ ಸಿಗಬೇಕಾದ ಮಾನ್ಯತೆ, ಮತ್ತು ನೀಡಿದ ಮತಗಳಿಗೆ ಸಿಗಬೇಕಾದ ಪ್ರಾತಿನಿಧ್ಯದ ಬಗ್ಗೆಯೂ ಚಿಂತನೀಯವಾದ ಮಾತುಗಳನ್ನು ಆಡಿ ಜಾತ್ಯತೀತತೆ ಮತ್ತು ಪಕ್ಷಾತೀತತೆಗಳಿಗೆ ಮಾನ್ಯತೆ ಮತ್ತು ಗೌರವ ದೊರಕಬೇಕೆಂದು ಹೇಳಿರುವ ಮಾತುಗಳು ಮಂಥನೀಯವಾಗಿವೆ.

ಇನ್ನು, ಇತ್ತೀಚಿನ ದಿನಗಳಲ್ಲಿ ನಮ್ಮ ರಾಷ್ಟ್ರ ತನ್ನ 'ಶಾಂತಿವಾದ'ವನ್ನು ಬದಿಗಿಟ್ಟು ಪರಮಾಣು ನೀತಿ ಮತ್ತು ಆ ಇಂಧನಕ್ಕಾಗಿ ದೊಡ್ಡಣ್ಣನ ಮೊರೆಹೋಗುತ್ತಿರುವ ನೀತಿಯನ್ನು ಸೀಯಾರ್ಕೆ ಅವರ ಲೇಖನದಲ್ಲಿ ಎಳೆ ಎಳೆಯಾಗಿ ವಿಶ್ಲೇಷಿಸಲಾಗಿದೆ. ಪರಮಾಣು ಇಂಧನಕ್ಕೂ ಮತ್ತು ಸಾಗಾಣಿಕೆ ಇಂಧನಕ್ಕೂ (ಪೆಟ್ರೋಲಿಯಂ ಉತ್ಪನ್ನ) ಹೇಗೆ ನೇರ ಮತ್ತು ವೈಜ್ಞಾನಿಕ ಸಂಪರ್ಕವಿದೆ ಎನ್ನುವ ಮಾತು ವಾಸ್ತವದಲ್ಲಿ ಯೋಚಿಸಬೇಕಾದ ಸಂಗತಿ. ಪ್ರತಿಯೊಂದು ಸಮಸ್ಯೆಗೂ ಪರಿಹಾರವಿದೆ. ಅಂತೆಯೇ ಇವುಗಳಿಗೂ ಪರಿಹಾರ ಸೂಚಿಸಿರುವದು ಮಂಥನೀಯ. ಇನ್ನು ಜಾಗತೀಕರಣ, ಉದಾರೀಕರಣ ಎನ್ನುವ ಹೆಸರಿನಲ್ಲಿ ಶ್ರೀಮಂತ ರಾಷ್ಟ್ರಗಳು ಹೇಗೆ ಇತರೇ ರಾಷ್ಟ್ರಗಳ ಮೇಲೆ ತಮ್ಮ ಕಬಂಧಬಾಹುವನ್ನು ವಿಸ್ತರಿಸಿವೆ ಎನ್ನುವ ದಿಶೆಯಲ್ಲಿ ಪರ್ಯಾಯ ವ್ಯವಸ್ಥೆಯ ಅಗತ್ಯತೆ ಮತ್ತು ಅನಿವಾರ್ಯತೆಯನ್ನು ಓದುಗರಿಗೆ ಬಿಂಬಿಸಿರುವ ಶೈಲಿ ಚೆನ್ನಾಗಿದೆ. ನಮಗೆ ''ಒಗ್ಗದ ನೀತಿ'' ನಮ್ಮನ್ನು ಈಗಾಗಲೇ ವಿಷವರ್ತುಲದಲ್ಲಿ ಸಿಲುಕಿಸಿದೆ ಎನ್ನುವ ಮಾತಂತೂ ಸುಸ್ಪಷ್ಟ. ಹೀಗಾಗಿ ನಾವು ನಮ್ಮ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಗಳಲ್ಲಿ ಮಾಡಲೇಬೇಕಾದ ಮಾರ್ಪಾಡುಗಳನ್ನು ಒರೆಹಚ್ಚುವಂತಹ ರೀತಿ, ನೀತಿಗಳ ಬಗ್ಗೆ, ಜನಬಲದ ಬಗ್ಗೆಯೂ ಚಿಂತಿಸಬೇಕಾದ ಅವಶ್ಯಕತೆಯ ಬಗ್ಗೆ ಹೇಳಿದ್ದಾರೆ ಶ್ರೀ ಸೀಯಾರ್ಕೆಯವರು.

ಬೆಂಗಳೂರು — ನೆ. ಲ. ರಾಮಮೂರ್ತಿ

'ನಾಗರ ಹಾವೇ ಹಾವೊಳು ಹೂವೇ ...' ಎನ್ನುವ ಲಲಿತ ಪ್ರಬಂಧದಲ್ಲಿ ವಸುಮತಿ ಉಡುಪ ಅವರು 'ನಾಗರ ಮತ್ತು ಕೇರೆಹಾವುಗಳ ಎಣೆಯಾಟ ಹಳ್ಳಿಮಂದಿಗೆ ಅಪರೂಪದ ದೃಶ್ಯವಲ್ಲ' ಎಂದಿದ್ದಾರೆ. ಆದರೆ ನನಗೆ ಪುತ್ತೂರಿನ ಖ್ಯಾತ ಉರಗತಜ್ಞರಾದ ಡಾ|| ರವೀಂದ್ರನಾಥ ಐತಾಳರ ಮಾತು ಕೇಳಿದ ನೆನಪು : ನಾಗರಹಾವು ಕೇರೆಹಾವಿನೊಟ್ಟಿಗೆ ಎಣೆಯಾಟ ಮಾಡುವುದಿಲ್ಲ ಎಂಬುದು.

ಕನ್ಯಾನ — ರವಿಶಂಕರ ಒಡ್ಡಂಬೆಟ್ಟು

### ವಿಜ್ಞಾನಿಗಳು ಏನು ಹೇಳುತ್ತಾರೆ ?

'ಕಸ್ತೂರಿ' ಎಂಬ ದೂರದರ್ಶನ ವಾಹಿನಿಯು ೨೦೧೨ರ ವೇಳೆಗೆ ಪ್ರಳಯ ಸಂಭವಿಸಿ ಪ್ರಪಂಚವೇ ಮುಳುಗಿಹೋಗುತ್ತದೆ ಎಂಬ 'ಸುದ್ದಿ'ಯನ್ನು ಹಲವು ದಿನಗಳಿಂದ ಪ್ರಸಾರ ಮಾಡುತ್ತಿದೆ. ಇದು ಆಗುತ್ತೋ ಬಿಡುತ್ತೋ, ಆದರೆ ಜನಸಾಮಾನ್ಯರ ಮೇಲೆ ಎಂಥ ಪರಿಣಾಮವಾಗುತ್ತದೆ ಎಂಬುದನ್ನು ಜವಾಬ್ದಾರಿಯುತ ಸುದ್ದಿ ಮಾಧ್ಯಮಗಳು ಅರಿತು ಪ್ರಸಾರ/ಪ್ರಚಾರ ಮಾಡುವುದು ಒಳಿತು. ವೃಥಾ ಆತಂಕ ಮೂಡಿಸುವುದರಲ್ಲಿ ಅರ್ಥವಿಲ್ಲ. ಜ್ಯೋತಿಷಿಯೋ ವೈದ್ಯರೋ ಒಬ್ಬ ವ್ಯಕ್ತಿಯನ್ನು ಒಂದು ವಾರದಲ್ಲಿ ಸಾಯುತ್ತಾನೆಂದು ಹೇಳಿದರೆ ಆ ವ್ಯಕ್ತಿಯ ಮಾನಸಿಕ ಪರಿಸ್ಥಿತಿ ಏನಾಗುತ್ತದೆ ಎಂಬುದನ್ನು ಒಮ್ಮೆ ಊಹಿಸಿ ನೋಡಿ. ನಾವು ನಿಸರ್ಗ, ಪರಿಸರ, ಭೂಮಿ, ಆಕಾಶ ಎಂದು ಕರೆಯುವ ಅವುಗಳ ಕಾರ್ಯಾಚರಣೆ ಅಗೋಚರವಾಗಿದೆ. ಪಾಪ-ಪುಣ್ಯ, ಪೂಜೆ-ಪುರಸ್ಕಾರಗಳಿಂದ ಈ ಪ್ರಪಂಚ ನಿರ್ಮಾಣವಾಗಿಲ್ಲ. ಅವೆಲ್ಲಾ ನಮ್ಮ ಮನಸ್ಸಿನ ಹುಸಿ ನೆಮ್ಮದಿಗಾಗಿ ನಾವೇ ಕಂಡುಕೊಂಡ ಸೂತ್ರಗಳಾಗಿವೆ. ನಾನು ಯಾರು, ಎಲ್ಲಿಂದ ಬಂದೆ, ಹೇಗೆ ಹೋಗುತ್ತೇನೆ, ಎಂಬುದಕ್ಕೆ ಹೇಗೆ ಉತ್ತರಗಳಿಲ್ಲವೋ ಅದೇ ರೀತಿ ಮುಂದೇನಾಗುತ್ತೇನೆ, ಏನು ಸಂಭವಿಸುತ್ತದೆ ಎಂಬುದು ಅಗೋಚರ. ಭೂಮಿ ಬಾಯ್ಬಿಡುತ್ತದೆ; ಸಮುದ್ರ ಉಕ್ಕುತ್ತದೆ, ಜ್ವಾಲಾಮುಖಿಗಳು ಬೆಂಕಿ ಉಗುಳುತ್ತವೆ; ಹೀಗೆ ಪ್ರಳಯ ಸಂಭವಿಸುತ್ತದೆ ಎಂದು ಮೂರ್ಖತನದ ಪ್ರಸಾರ ಮಾಡಲಾಗಿದೆ. ಇಂದು ಪ್ರಪಂಚದಾದ್ಯಂತ ವಿಜ್ಞಾನ-ತಂತ್ರಜ್ಞಾನಗಳಿಗೆ ಕೋಟ್ಯಂತರ ರೂ.ಗಳನ್ನು ಖರ್ಚು ಮಾಡಲಾಗುತ್ತದೆ. ಭಾರತದಲ್ಲೆ ಅತ್ಯಂತ ದೊಡ್ಡ ದೊಡ್ಡ ವಿಜ್ಞಾನ ಸಂಸ್ಥೆಗಳಿವೆ. ಅವುಗಳು ಈ ಬಗ್ಗೆ ಏನು ಹೇಳುತ್ತವೆ ? ಇದೆಲ್ಲಾ ನಿಜವೇ ಆದಲ್ಲಿ ಸಾರ್ವಜನಿಕವಾಗಿ ವಿಜ್ಞಾನಿಗಳು ಸಂಶೋಧಿಸಿ ತಿಳಿಸಬಹುದಲ್ಲಾ!

ಬೆಂಗಳೂರು — ಡಿ. ಮಂಜುನಾಥ

### ಸವಾಲಾಗಿರುವ ಸ್ಟಿರಿಯೋಟೈಪ್ಸ್

ಇತ್ತೀಚೆಗೆ ಕೆಲ ಪ್ರವಾಸ ಕಥನಗಳನ್ನು ಹಾಗೂ ವಾರ ಪತ್ರಿಕೆಗಳನ್ನು ಓದುತ್ತಿರುವಾಗ ಭಾರತೀಯರ ಕುರಿತು ಇರುವ ವರ್ಣನೆ ನನ್ನನ್ನು ಒಂದು ಕ್ಷಣ ವಿಚಲಿತಳನ್ನಾಗಿ ಮಾಡಿ, ಓದುವುದನ್ನು ನಿಲ್ಲಿಸುವ ಹಾಗೆ ಮಾಡಿತು. ಈ ವರ್ಣನೆಯು ಕೇವಲ ಒಬ್ಬ ಭಾರತೀಯನ ಕುರಿತಾಗಿರದೆ ಸಮಗ್ರ ಭಾರತದ ಬಗ್ಗೆ ವಿದೇಶೀಯರು ಮಾಡಿದ ವರ್ಣನೆ ಅವರು ಹೊಂದಿರುವ ಗ್ರಹಿಕೆಯನ್ನು ಬಿಂಬಿಸುವಂತಿತ್ತು. ಉದಾ : ಭಾರತೀಯರು ಸೋಮಾರಿಗಳು, ಭ್ರಷ್ಟರು, ಹಿಂದುಳಿದವರು ಇತ್ಯಾದಿ.

ಈ ಅನುಭವ ಕಥನಗಳನ್ನು ಓದುವಾಗೆಲ್ಲಾ ಭಾರತೀಯರು ಅನಾಗರಿಕರು, ಸ್ವಾರ್ಥಿಗಳು, ಗುಲಾಮರು, ತಾಳ್ಮೆಯಿರದವರು ಎಂದು ಹತ್ತು ಹಲವಾರು ಬಗೆಯಲ್ಲಿ ವರ್ಣನೆ ಕಂಡುಬರುತ್ತದೆ. ಇದನ್ನು ಓದುವಾಗ ಕೊಂಚ ನೋವಾದರೂ ಅದಕ್ಕಿಂತ ಹೆಚ್ಚಾಗಿ ಭಾರತೀಯರ ಕುರಿತು ಮಾಡಿದ ಈ ವರ್ಣನೆಯ ಹಾಗೆಯೇ ನಾವೆಲ್ಲ ಇದ್ದೇವೆಯೇ, ವಿದೇಶೀಯರು ಈ ರೀತಿ ನಮ್ಮನ್ನು ಗ್ರಹಿಸಿಕೊಳ್ಳಲು ಮೂಲ ಪ್ರೇರಣೆಯಾದರೂ ಏನು, ಎಂದು ಪ್ರಶ್ನಿಸಿಕೊಂಡು ಕುತೂಹಲದಿಂದ ಮತ್ತಷ್ಟು ಕೆದಕಿ ನೋಡಿದಾಗ ಕಂಡದ್ದು, ಪಾಶ್ಚಿಮಾತ್ಯರು ಭಾರತೀಯರ ಕುರಿತು ಹೊಂದಿರುವ ಅಸಂಖ್ಯಾತ ಸ್ಟಿರಿಯೋಟೈಪ್‌ಗಳು. ಭಾರತೀಯರ ಕುರಿತು ಇರುವ ಸ್ಟಿರಿಯೋಟೈಪ್‌ಗಳಲ್ಲಿ ನಕಾರಾತ್ಮಕ ಹಾಗೂ ಸಕಾರಾತ್ಮಕವಾದ ಎರಡು ಬಗೆಗಳೂ ಇದ್ದು, ಅವುಗಳಲ್ಲಿ ಬಹಳಷ್ಟು ನಕಾರಾತ್ಮಕ ಅಂಶಗಳಿಂದ ಕೂಡಿವೆ.

ಸ್ಟಿರಿಯೋಟೈಪ್ಸ್ ಎಂದರೇನು, ಅವುಗಳನ್ನು ಬೆಳೆಸಿಕೊಳ್ಳಲು ಕಾರಣಗಳೇನು ? ಈ ಸ್ಟಿರಿಯೋಟೈಪ್‌ಗಳು ಒಂದು ಸಂಸ್ಕೃತಿ ಅಥವಾ ಒಂದು ಜನಸಮುದಾಯದ ಕುರಿತ ಸತ್ಯವೂ ಆಗಿರದ ಸುಳ್ಳೂ ಆಗಿರದ ಗ್ರಹಿಕೆಗಳಾಗಿವೆ. ಉದಾ : ಭಾರತೀಯರು ಸೋಮಾರಿಗಳು, ಸಂಪ್ರದಾಯವಾದಿಗಳು, ಹಿಂದುಳಿದವರು, ಭ್ರಷ್ಟರು, ಅಸಮರ್ಥರು, ಬ್ರಾಹ್ಮಣರು ಮೋಸಗಾರರು, ಇತ್ಯಾದಿ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಈ ರೀತಿಯಾಗಿ ಒಂದು ದೇಶ ಅಥವಾ ಜನಸಮುದಾಯದ ಬಗ್ಗೆ ವರ್ಣಿಸುವಾಗ ಯಾವುದೇ ರೀತಿಯ ಸಾಂದರ್ಭಿಕ ಮಾಪನಗಳಿಲ್ಲ, ಅಂದರೆ, ಎಲ್ಲಾ ಭಾರತೀಯರು ಅಥವಾ ಕೆಲವು ಭಾರತೀಯರು ಎಂಬ ಶಬ್ದದ ಬದಲು ಸಾರಾಸಗಟಾಗಿ 'ಭಾರತೀಯರು' ಎಂದು ಬಳಸಲಾಗುತ್ತದೆ. ಹಾಗೆ ಬಳಸುವಾಗ ಅದು ಸಾಮಾನ್ಯ ಗ್ರಹಿಕೆಯಾಗಿ ಮುಂದುವರೆಯುವುದರ ಜೊತೆಗೆ ಅನ್ಯ ಸಂಸ್ಕೃತಿಯೊಡನೆ ಒಡನಾಡಲು ಅಸ್ಪಷ್ಟ ನಿರ್ದೇಶನವನ್ನು ನೀಡುತ್ತಿರುತ್ತದೆ.

ಈ ಸ್ಟಿರಿಯೋಟೈಪ್‌ಗಳ ಕುರಿತು ಚರ್ಚೆ ನಡೆಸುವಾಗ ಅವುಗಳು ಬೇಕೋ ಅಥವಾ ಬೇಡವೋ ಎಂಬುದಾಗಲಿ ಅಥವಾ ಅವುಗಳ ಬಳಕೆಯು ಒಳ್ಳೆಯದೋ ಅಥವಾ ಕೆಟ್ಟದ್ದೋ ಎಂಬುದು ಸ್ಪಷ್ಟವಾಗದ ಸಂಗತಿಯಾಗಿದೆ. ಆದರೆ ಸ್ಟಿರಿಯೋಟೈಪ್‌ಗಳು ಅಸ್ತಿತ್ವಕ್ಕೆ ಬರಲು ಕಾರಣ ಏನು ? ಈ ರೀತಿಯ ಗ್ರಹಿಕೆಗಳು ರೂಪ ತಳೆದಿದ್ದಾದರೂ ಏಕೆ ? ಪಾಶ್ಚಿಮಾತ್ಯರು ನಮ್ಮನ್ನು ಈ ರೀತಿಯಾಗಿ ಗ್ರಹಿಸಿಕೊಂಡದ್ದಾದರೂ ಏಕೆ ? ಅವರು ಗ್ರಹಿಸಿಕೊಂಡ ಹಾಗೆ ನಾವು ಸೋಮಾರಿ, ಸಂಪ್ರದಾಯವಾದಿಗಳೇ ? – ಹೀಗೆ ಪ್ರಶ್ನೆಗಳ ಸಾಲು ಮುಂದುವರೆಯುತ್ತದೆ. ಉತ್ತರ ಇಂತಿದೆ : ಪಾಶ್ಚಾತ್ಯರು ಮುಖ್ಯವಾಗಿ ಸಿದ್ಧಾಂತಗಳನ್ನು ಅವಲಂಬಿಸಿ ನಡೆಯುವ ಒಂದು ಸಂಸ್ಕೃತಿಯಾಗಿದ್ದು, ಯಾವುದೇ ಒಂದು ದೇಶ, ಕಾಲ, ಸಂಸ್ಕೃತಿ, ಅಥವಾ ಜನರೊಡನೆ ಒಡನಾಟ ಮಾಡಬೇಕಾದರೆ ಅವರಿಗೆ ಮೊದಲೇ ಅದರ ಕುರಿತಂತೆ ಸಮಗ್ರ ಮಾಹಿತಿಯ ಅವಶ್ಯಕತೆ ಇದೆ. ಉದಾಹರಣೆಗೆ, ಒಬ್ಬ ವಿದೇಶಿಯವ ಭಾರತಕ್ಕೆ ಭೇಟಿ ನೀಡುವ ಮುನ್ನ, ಭಾರತ, ಅದರ ಸಂಸ್ಕೃತಿ, ಜನಜೀವನದ ಕುರಿತಂತೆ ತನ್ನ ದೇಶದಲ್ಲಿ ದೊರೆಯುವ ಈ ಅನುಭವ ಕಥನಗಳನ್ನೋ, ಮಾಹಿತಿಪೂರಕ ಪುಸ್ತಕಗಳನ್ನೋ ಸಾಕಷ್ಟು ಅಧ್ಯಯನ ಮಾಡುತ್ತಾನೆ. ಈ ಅಧ್ಯಯನದ ಸಮಯದಲ್ಲಿ ಭಾರತೀಯರು ಅನಾಗರಿಕರು ಎಂದೋ ಅಥವಾ ಭಾರತೀಯರು ಸಂಕುಚಿತ ಮನೋಭಾವದವರು ಎಂದೋ ಉಲ್ಲೇಖಿಸಿದ್ದರೆ ಯಥಾವತ್ತಾಗಿ ಹಾಗೆಯೇ ಗ್ರಹಿಸಿಕೊಳ್ಳುತ್ತಾನೆ. ಈ ರೀತಿಯಾಗಿ ಅರ್ಥೈಸಿಕೊಂಡ ಗ್ರಹಿಕೆಯು ನಿಜವಾಗಿಯೂ ಅವನ ಅನುಭವಕ್ಕೆ ಬರದ ಸಂಗತಿಯಾಗಿರುತ್ತದೆ. ಆದರೂ ಅದನ್ನೇ ಪೂರ್ಣವಾಗಿ ನಂಬಿ, ತನ್ನ ಅನುಭವಕ್ಕೂ ಬಾರದ ಸಂಗತಿಯನ್ನು ಗ್ರಹಿಸಿಕೊಳ್ಳುವ ಮೂಲಕ ಭಾರತ, ಭಾರತೀಯರು ಅಥವಾ ಅಲ್ಲಿಯ ಜನಜೀವನ ಕುರಿತು ಅಸ್ಪಷ್ಟ ಚಿತ್ರಣವನ್ನು ಕಟ್ಟಿಕೊಂಡು ಆಗಮಿಸುತ್ತಾನೆ. ಈಗಾಗಲೇ ಮಾನಸಿಕ ಚಿತ್ರಣವನ್ನು ಕಟ್ಟಿಕೊಂಡಿರುವ ವಿದೇಶೀಯನಿಗೆ ಈ ನೆಲದಲ್ಲಿ ಕಾಲಿಟ್ಟ ನಂತರ ಕ್ರಮೇಣ ಎಲ್ಲಾ ಗ್ರಹಿಕೆಗಳು,

ವಾಸ್ತವ ಅಂಶಗಳು ಗೋಚರಿಸಲು ಪ್ರಾರಂಭವಾಗುತ್ತವೆ. ಪರಿಣಾಮವಾಗಿ ಭಾರತ, ಭಾರತೀಯರ ಕುರಿತು ಅವನು ಹೊಂದಿರುವ ಸ್ಟಿರಿಯೋಟೈಪ್‌ಗಳಾದ ''ಭಾರತೀಯರೆಂದರೆ ವಂಚಕರು, ಸೋಮಾರಿಗಳು...'' ಇತ್ಯಾದಿ ಅವನಿಗೆ ಸತ್ಯವೆಂದು ಮನದಟ್ಟಾಗುತ್ತದೆ. ಹಾಗಾಗಿಯೇ ಪಾಶ್ಚಿಮಾತ್ಯರು ಸಿದ್ಧಾಂತಗಳಿಗೆ ನೀಡುವ ಮನ್ನಣೆ ಹಾಗೂ ಅದರ ಸಹಾಯದಿಂದ ಇತರ ಸಂಸ್ಕೃತಿಗಳನ್ನು ಗ್ರಹಿಸಿಕೊಳ್ಳುವ ಅವರ ಪರಿಯನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಹಾಗಾಗಿಯೇ ಯಾವುದೋ ಪುಸ್ತಕದಲ್ಲಿ ಭಾರತೀಯರಲ್ಲದವರು ಭಾರತೀಯರ ಕುರಿತು ಅಸಂಗತ ವ್ಯಾಖ್ಯಾನ ಮಾಡುವಾಗ ಅಂತಹ ವ್ಯಾಖ್ಯಾನ ಸತ್ಯ ಸಂಗತಿ ಎಂದು ನಂಬಬೇಕಾದ ಪ್ರಮೇಯವಿಲ್ಲ. ಬದಲಾಗಿ ಈ ರೀತಿಯ ಸ್ಟಿರಿಯೋಟೈಪ್‌ಗಳು ನಮ್ಮ ಸಂಸ್ಕೃತಿ ಹಾಗೂ ನಮ್ಮ ಅಭಿವೃದ್ಧಿಗೆ ಪೂರಕವಾಗದೆ, ಮಾರಕವಾಗುತ್ತಿವೆಯೇ ಎಂಬುದರ ಕಡೆ ಗಮನ ಹರಿಸಿ ಅದಕ್ಕೆ ಬೇಕಾದ ಸಿದ್ಧತೆ ಮಾಡಿಕೊಳ್ಳುವುದು ಇಂದಿನ ತುರ್ತಾಗಿದೆ.

*ಶಂಕರಘಟ್ಟ* **ಕವಿತಾ ಪಿ. ಎನ್.**

---

*ಸಂಪಾದಕೀಯ (೫ನೇ ಪುಟದಿಂದ)*

ಸದ್ದಾಂ ಹುಸೇನ್ ಭಯೋತ್ಪಾದಕ ಸಂಘಟನೆ ಅಲ್ ಖೈದಾದೊಂದಿಗೆ ಸಂಪರ್ಕಹೊಂದಿದ್ದಾನೆ; ರಾಸಾಯನಿಕ, ಜೈವಿಕ, ಅಷ್ಟೇಕೆ, ಪರಮಾಣು ಬಾಂಬುಗಳಂತಹ ವಿನಾಶಕಾರಿ ಶಸ್ತ್ರಾಸ್ತ್ರಗಳನ್ನು ಹೊಂದಿದ್ದಾನೆ ಎಂದೆಲ್ಲಾ ಬುಷ್ ಆರೋಪಿಸಿದ್ದ. ಈ ಆಪಾದನೆಗಳಲ್ಲಿ ಯಾವುದೇ ಹುರುಳಿಲ್ಲ ಎಂಬ ಸತ್ಯಾಂಶವು ಆಕ್ರಮಣ ಎಸಗುವ ಮೊದಲೇ ಅಮೆರಿಕಾದ ಅಧಿಕಾರಿಗಳಿಗೆ ತಿಳಿದಿತ್ತು. ಅಮೆರಿಕಾದ ಪೆಂಟಗನ್, ಅಮೆರಿಕಾದ ರಾಷ್ಟ್ರೀಯ ಸುದ್ದಿ ಸಂಗ್ರಹ ಇಲಾಖೆ ಇವೇ ಮೊದಲಾದ ಸಂಸ್ಥೆಗಳು ಬಹಿರಂಗಗೊಳಿಸಿರುವ ಅಂಕಿಅಂಶಗಳು ಈ ಮೇಲೆ ತಿಳಿಸಿದ ವಾಸ್ತವಾಂಶಗಳನ್ನು ಸಾಬೀತುಪಡಿಸುತ್ತವೆ.

ತೈಲ ಉತ್ಪಾದನೆಯಲ್ಲಿ ಸೌದಿ ಅರೇಬಿಯಾ, ಇರಾನ್‌ಗಳನ್ನು ಬಿಟ್ಟರೆ ಇರಾಕ್ ಮೂರನೆಯ ಸ್ಥಾನದಲ್ಲಿದೆ. ಈಗ ತನ್ನ ಹಿಡಿತದಲ್ಲೇ ಇರುವ ಇರಾಕ್ ಸರ್ಕಾರವನ್ನು ಬುಷ್ ಆಡಳಿತವು, ತೈಲ ಉತ್ಪಾದನೆಗೆ ಸಂಬಂಧಪಟ್ಟಂತೆ, ಒಂದು ಹೊಸ ಕಾನೂನನ್ನು ಜಾರಿಗೆ ತರುವಂತೆ ಒತ್ತಾಯಿಸುತ್ತಿದೆ. ಈ ಕಾನೂನು ಜಾರಿಗೆ ಬಂದದ್ದೇ ಆದರೆ ದೀರ್ಘಾವಧಿ ಆಧಾರದ ಮೇಲೆ ತೈಲ ಸಂಪನ್ಮೂಲಗಳು ಪಾಶ್ಚಾತ್ಯ ಖಾಸಗಿ ಕಂಪನಿಗಳ ಏಕಸ್ವಾಮ್ಯಕ್ಕೆ ಒಳಪಡುತ್ತವೆ. ಪಾಶ್ಚಿಮಾತ್ಯ ಮೂಲದ ಮಧ್ಯವರ್ತಿಗಳೇ ಸಿದ್ಧಪಡಿಸಿರುವ ಈ ಕಾನೂನಿನ ಕರಡುಪ್ರತಿಗೆ ಇರಾಕ್‌ನ ಪಾರ್ಲಿಮೆಂಟ್ ಇನ್ನೂ ಸಮ್ಮತಿ ಸೂಚಿಸಿಲ್ಲ. ಈಗಿನ ಇರಾಕ್ ಆಡಳಿತ ವ್ಯವಸ್ಥೆಯಲ್ಲಿ ತಮ್ಮದೇ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವ, ತೈಲ ವ್ಯಾಪಾರದಿಂದ ಒದಗಿಬರುವ ಆದಾಯದಲ್ಲಿ ತಮ್ಮದೇ ಪಾಲನ್ನು ಗಿಟ್ಟಿಸಿಕೊಳ್ಳಲು ಸಂಚುಹೂಡುವ ಸ್ಥಳೀಯ 'ದೇಶಭಕ್ತ'ರಿಗೇನೂ ಕಡಿಮೆ ಇಲ್ಲ. ಇವರೆಲ್ಲರೂ ಅಮೆರಿಕಾದ ಏಜಂಟರೇ. ಇಂತಹ ಧೂರ್ತರೇ ಹೆಚ್ಚಿನ ಸಂಖ್ಯೆಯಲ್ಲಿರುವ ಪಾರ್ಲಿಮೆಂಟ್ ತೈಲ ಬೆಲೆ ನಿರ್ವಹಣೆಯ ಸಂಬಂಧದಲ್ಲಿ ಬೇರೊಂದು ಕಾನೂನಿಗೆ ಒಪ್ಪಿಗೆ ನೀಡಿದೆ. ಇರಾಕ್ ಸರ್ಕಾರದ ಈ ಕ್ರಮ ಜಗತ್ತಿನಾದ್ಯಂತ ತೈಲ ಬೆಲೆ ಎಗ್ಗಿಲ್ಲದೆ ಏರುವುದಕ್ಕೆ ಕಾರಣವಾಗಿದೆ. ೨೦೦೩ರಲ್ಲಿ ಒಂದು ಬ್ಯಾರೆಲ್‌ನ ದರ ೨೮ ಡಾಲರ್‌ಗಳಷ್ಟಿತ್ತು. ಸಾಮ್ರಾಜ್ಯಶಾಹಿ ಅಮೆರಿಕಾ ತಾನು ಇರಾಕ್ ಮೇಲೆ ಎಸಗಿದ ಆಕ್ರಮಣದ ೫ನೇ ವಾರ್ಷಿಕೋತ್ಸವವನ್ನು 'ವಿಜೃಂಭಣೆಯಿಂದ' ಆಚರಿಸುತ್ತಿರುವ ಇಂದಿನ ಸಂದರ್ಭದಲ್ಲಿ ತೈಲದ ಬೆಲೆ ಸುಮಾರು ೧೪೦ ಡಾಲರ್‌ಗಳಷ್ಟಾಗಿದೆ.

ಈವರೆಗೂ ಅಮೆರಿಕಾ ಮತ್ತು ಅದರ ಮಿತ್ರ ರಾಷ್ಟ್ರಗಳ ಸೈನಿಕರು ಸಿಡಿಸಿದ ಗುಂಡುಗಳು, ಬಾಂಬುಗಳು, ಕ್ಷಿಪಣಿಗಳು ಮುಂತಾದ ಮಾರಣಾಂತಿಕ ಶಸ್ತ್ರಾಸ್ತ್ರಗಳಿಗೆ ಬಲಿಯಾದ ಇರಾಕಿಗಳ ಸಂಖ್ಯೆ ೮೨,೦೦೦ದಿಂದ ೮೯,೦೦೦ ಎಂದು ಅಂದಾಜಿಸಲಾಗಿದೆ. ಸಹಜವಾಗಿಯೇ ಈ ಐದು ವರ್ಷಗಳಿಂದ ಸತತವಾಗಿ ಜರುಗುತ್ತಿರುವ ಶಸ್ತ್ರಾಸ್ತ್ರ ಸಂಘರ್ಷದಿಂದಾಗಿ ಲಕ್ಷಾಂತರ ಜನರು ವೈದ್ಯಕೀಯ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ; ಹಸಿವು, ಬಡತನ, ರೋಗರುಜಿನಗಳು, ನಿರುದ್ಯೋಗ, ದರೋಡೆ, ಕಳ್ಳತನ, ಸುಲಿಗೆ, ಕೊಲೆ ಇವೇ ಮೊದಲಾದ ಸಮಸ್ಯೆಗಳು ತಾಂಡವವಾಡುತ್ತಿವೆ. ಜಾನ್ ಹಾಪ್‌ಕಿನ್ಸ್ ವಿಶ್ವವಿದ್ಯಾನಿಲಯವು ಕೈಗೊಂಡ ಅಧ್ಯಯನವೊಂದರ ಪ್ರಕಾರ ಜೂನ್ ೨೦೦೬ರ ಹೊತ್ತಿಗೆ ೬,೫೫,೦೦೦ಕ್ಕೂ ಮೀರಿದ ಸಂಖ್ಯೆಯಲ್ಲಿ ಇರಾಕಿನ ನಾಗರಿಕರು ಮರಣಹೊಂದಿದ್ದಾರೆ. ಈ ವೇಳೆಗೆ ಆ ಸಂಖ್ಯೆ ೧೦ ಲಕ್ಷ ಮೀರಿರುವ ಸಾಧ್ಯತೆಯಿದೆ. ಅಮೆರಿಕನ್ ಆಕ್ರಮಣಕಾರರ ಕುತಂತ್ರದಿಂದಾಗಿ, ಮುಂಚಿನಿಂದಲೂ ಪರಸ್ಪರ ಕಾದಾಡುತ್ತಿದ್ದ, ವ್ಯಾಪಕವಾದ ಆಂತರಿಕ ಘರ್ಷಣೆಗಳಲ್ಲೇ ನಿರತರಾಗಿರುತ್ತಿದ್ದ ಷಿಯಾ, ಸುನ್ನಿ ಪಂಗಡಗಳ ನಡುವಿನ ಅಂತರ ಬಹು ದೊಡ್ಡ ಕಂದಕವಾಗಿ ಪರಿಣಮಿಸಿದೆ. ಈಗಿನ ವಿದ್ಯಮಾನಗಳನ್ನು ನೋಡಿದರೆ ಇರಾಕ್ ವಿಘಟನೆಗೊಂಡು ೩-೪ ಪ್ರತ್ಯೇಕ ರಾಷ್ಟ್ರಗಳಾಗುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ರಾಷ್ಟ್ರದ ಆರ್ಥಿಕತೆ ಕುಸಿದುಬಿದ್ದಿದೆ. ೨ ಕೋಟಿಗಿಂತಲೂ ಹೆಚ್ಚಿನ ಸಂಖ್ಯೆಯ ಇರಾಕಿಗಳು ನೆರೆ ರಾಷ್ಟ್ರಗಳಾದ ಸಿರಿಯಾ, ಜೋರ್ಡಾನ್, ಲೆಬನಾನ್‌ಗಳಿಗೆ ವಲಸೆ ಹೋಗುತ್ತಿದ್ದಾರೆ. ಶೇಕಡ ೨೦ರಷ್ಟು ನಿರುದ್ಯೋಗವಿದ್ದು, ಬಹಳಷ್ಟು ಜನರು ನೌಕರಿಯಲ್ಲಿದ್ದರೂ ಪೂರ್ಣಾವಧಿ ದುಡಿಯುವ ಅವಕಾಶದಿಂದ ವಂಚಿತರಾಗಿದ್ದಾರೆ. ಪ್ರತಿ ವರ್ಷ ಏರುತ್ತಿರುವ ಹಣದುಬ್ಬರದ ಪ್ರಮಾಣ ಶೇಕಡ ೪೦ರಷ್ಟಿದೆ. ಬಹುತೇಕ ಜನರಿಗೆ ಒಂದು ದಿನಕ್ಕೆ ಒಂದೂವರೆ ಗಂಟೆಯಷ್ಟು ವಿದ್ಯುಚ್ಛಕ್ತಿ ಮಾತ್ರ ಲಭ್ಯ. ಶೇ. ೩೦ರಷ್ಟು ಜನರಿಗೆ ಮಾತ್ರ ಕುಡಿಯುವ ನೀರಿನ ಸೌಲಭ್ಯವಿದೆ. ಶೇ. ೪೩ರಷ್ಟು ಜನರು ದಿನಕ್ಕೆ ೧ ಡಾಲರ್ ವರಮಾನದಲ್ಲಿ ಬದುಕು ಸಾಗಿಸಬೇಕಾಗಿದೆ. ಈ ಮಧ್ಯೆ ಮೊನ್ನೆ ತಾನೆ ಇರಾನ್ ಎರಡೇ ದಿನಗಳಲ್ಲಿ ೮-೧೦ ಕ್ಷಿಪಣಿಗಳನ್ನು ಗಗನಕ್ಕೆ ಹಾರಿಸಿ ತನ್ನ ಮಿಲಿಟರಿ ಶಕ್ತಿಯನ್ನು ಪ್ರದರ್ಶಿಸಿರುವ ಹಿನ್ನೆಲೆಯಲ್ಲಿ ಪಶ್ಚಿಮ ಏಷ್ಯಾದ ರಾಜಕಾರಣಕ್ಕೆ ಮತ್ತೊಂದು ಆಯಾಮ ಸೃಷ್ಟಿಯಾದಂತಾಗಿದೆ.

ಇದು ಇರಾಕ್ ಹಾಗೂ ಪಶ್ಚಿಮ ಏಷ್ಯಾದ ಇಂದಿನ ಸ್ಥೂಲ ಚಿತ್ರಣ. ಸದ್ದಾಂ ಹುಸೇನನ ಸರ್ವಾಧಿಕಾರಿ ವರ್ತನೆ, ನೆರೆ ರಾಷ್ಟ್ರಗಳೊಡನೆ ನಿರಂತರ ವ್ಯಾಜ್ಯ, ಆ ಪ್ರದೇಶದ ತೈಲ ಸಂಪತ್ತಿನ ಮೇಲೆ ಕಣ್ಣಿಟ್ಟು ಅಮೆರಿಕವೇ ಅಲ್ಲದೆ ಇಂಗ್ಲೆಂಡ್, ಫ್ರಾನ್ಸ್, ಜರ್ಮನಿಯಂತಹ ಸಾಮ್ರಾಜ್ಯಶಾಹಿ ಶಕ್ತಿಗಳು ಹಲವಾರು ದಶಕಗಳಿಂದ ನಡೆಸಿಕೊಂಡು ಬರುತ್ತಿರುವ ಕ್ಷುದ್ರ ರಾಜಕಾರಣ, ತಮ್ಮದೇ ಆಂತರಿಕ ಬಿಕ್ಕಟ್ಟುಗಳು, ಈ ಎಲ್ಲ ಕಾರಣಗಳಿಂದ ತನ್ನತನವನ್ನೇ ಕಳೆದುಕೊಂಡು ಕಂಗಾಲಾಗುತ್ತಿರುವ ಇರಾಕಿನ ಜನತೆಯು ನೆಮ್ಮದಿಯ ನಾಳೆಗಳತ್ತ ಮುನ್ನಡೆಯಲು ಬಹುದೂರ ಸಾಗಬೇಕಿದೆ. ಈ ಬೃಹತ್ ಸಮಸ್ಯೆಯು ಕೇವಲ ಇರಾಕ್ ಅಥವಾ ಪಶ್ಚಿಮ ಏಷ್ಯಾಕ್ಕೆ ಸೀಮಿತಗೊಂಡಿಲ್ಲ. ಏಷ್ಯಾ, ಆಫ್ರಿಕಾ, ದಕ್ಷಿಣ ಅಮೆರಿಕಾ ಖಂಡಗಳಲ್ಲಿ ಶತಮಾನಗಳ ಕಾಲ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಶಕ್ತಿಗಳಿಗೆ ನೇರವಾಗಿ ಹಾಗೂ ಪರೋಕ್ಷವಾಗಿ ಬಲಿಯಾಗಿ ಇಂದಿಗೂ ನರಳುತ್ತಿರುವ ರಾಷ್ಟ್ರಗಳಿವೆ.

ಇರಾಕ್ ಜನತೆಯು ತಮ್ಮ ಸ್ವಾತಂತ್ರ್ಯ, ಸಾರ್ವಭೌಮತ್ವಗಳನ್ನು ಮರುಪಡೆಯುವಂತಾಗಬೇಕಾದರೆ, ತಮ್ಮ ತೈಲಸಂಪತ್ತಿನ ಮೇಲೆ ತಮ್ಮದೇ ಒಡೆತನ ಸ್ಥಾಪಿಸಿಕೊಳ್ಳಬೇಕಾದರೆ, ಆ ನೆಲದ ಪ್ರಮುಖ ಪಂಗಡಗಳಾದ ಷಿಯಾ, ಸುನ್ನಿ ಸಮುದಾಯಗಳು ತಮ್ಮೆಲ್ಲ ಆಂತರಿಕ ಭಿನ್ನಾಭಿಪ್ರಾಯಗಳನ್ನು ಬದಿಗಿಟ್ಟು ಒಗ್ಗಟ್ಟಿನಿಂದ, ಈಗಾಗಲೇ ಆಳವಾಗಿ ಬೇರುಬಿಟ್ಟಿರುವ ನವಸಾಮ್ರಾಜ್ಯಶಾಹಿ ಶಕ್ತಿಗಳ ವಿರುದ್ಧ, ತಮ್ಮ ನಡುವೆಯೇ ಇರುವ ದುಷ್ಟ ಶಕ್ತಿಗಳ, ಏಜಂಟರುಗಳ ವಿರುದ್ಧ, ಕ್ರಾಂತಿಕಾರಿ ಸಮರವನ್ನೇ ಸಾರಬೇಕಿದೆ. ಈ ಮಹಾನ್ ಕಾರ್ಯದಲ್ಲಿ ನೆರೆ ರಾಷ್ಟ್ರಗಳ ಅಗತ್ಯವೂ ಇದೆ. ಇದು ಸುಲಭದ ಮಾತಲ್ಲ. ಏಕೆಂದರೆ ಇರಾನ್, ಸೌದಿ ಅರೇಬಿಯಾ, ಸಿರಿಯಾ, ಜೋರ್ಡಾನ್, ಈಜಿಪ್ಟ್, ಕುವೈತ್ ಇವೇ ಮೊದಲಾದ ರಾಷ್ಟ್ರಗಳು ಪರಸ್ಪರ ವೈರುಧ್ಯಗಳಲ್ಲಿ ಮುಳುಗಿಹೋಗಿವೆ. ಅವುಗಳಲ್ಲಿ ಕೆಲವು ರಾಷ್ಟ್ರಗಳು ಭಯೋತ್ಪಾದಕರಿಗೆ ನೆಲೆಗಳನ್ನೊದಗಿಸಿವೆ. ಇನ್ನು ಕೆಲವು ರಾಷ್ಟ್ರಗಳು ಪ್ರಜಾಪ್ರಭುತ್ವದಿಂದ ವಂಚಿತರಾಗಿ ಅಮೆರಿಕಾ, ಬ್ರಿಟನ್‌ಗಳಂತಹ ಸಾಮ್ರಾಜ್ಯಶಾಹಿ ಶಕ್ತಿಗಳ ಕೈಗೊಂಬೆಗಳಾಗಿರುವ ರಾಜರು, ಮುಲ್ಲಾಗಳು, ಸುಲ್ತಾನರು ಮತ್ತು ಸರ್ವಾಧಿಕಾರಿಗಳ ಆಳ್ವಿಕೆಗೆ ತುತ್ತಾಗಿವೆ. ಇಡೀ ಪಶ್ಚಿಮ ಏಷ್ಯಾದ ರಾಷ್ಟ್ರಗಳಲ್ಲಿ ತಮ್ಮ ಸ್ವಾತಂತ್ರ್ಯ, ಸ್ವಾಭಿಮಾನ, ಸಾರ್ವಭೌಮತ್ವಗಳನ್ನು ಮತ್ತೆ ಪಡೆಯುವುದಕ್ಕಾಗಿ, ತಮ್ಮ ನೈಸರ್ಗಿಕ ಸಂಪನ್ಮೂಲಗಳನ್ನು ನವ ಸಾಮ್ರಾಜ್ಯಶಾಹಿಗಳು ಲಾಗಾಯ್ತಿನಿಂದ ದೋಚುತ್ತಿರುವುದರ ವಿರುದ್ಧ ವ್ಯಾಪಕ ಜನಾಂದೋಲನಗಳು ಪ್ರಾರಂಭವಾಗಬೇಕಿದೆ. ಆಗ ಮಾತ್ರ ಅಲ್ಲಿನ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಿದೆ.

ಇಂತಹ ಕ್ರಾಂತಿಕಾರಿ ಜನಪರ ಹೋರಾಟಗಳಿಂದ ಸಾಮ್ರಾಜ್ಯಶಾಹಿ ಶಕ್ತಿಗಳನ್ನು ಧಿಕ್ಕರಿಸಲು ಸಾಧ್ಯವಿದೆ ಎಂಬುದನ್ನು ಇತ್ತೀಚೆಗೆ ದಕ್ಷಿಣ ಅಮೆರಿಕಾದ ರಾಷ್ಟ್ರಗಳಲ್ಲಿ ಜರುಗುತ್ತಿರುವ ವಿದ್ಯಮಾನಗಳು ತೋರಿಸಿಕೊಟ್ಟಿವೆ. ಈ ವಿದ್ಯಮಾನಗಳು ಜಗತ್ತಿನ ಇತರ ಶೋಷಿತ ರಾಷ್ಟ್ರಗಳಿಗೆ ಸ್ಫೂರ್ತಿದಾಯಕವಾಗಿವೆ. ಇಂದಿನ ಸಂದರ್ಭದಲ್ಲಿ ನಿಜಕ್ಕೂ ಇದೊಂದು ಶುಭ ಸೂಚನೆ.

ಈ ತಿಂಗಳು (೩ನೇ ಪುಟದಿಂದ)

ವೈಟ್‌ಮೆನ್'' ಎಂಬ ತನ್ನ ಪುಸ್ತಕದಲ್ಲಿ ಜಾರ್ಜ್ ಬುಷ್ ಎಂತಹ ಘಾತುಕ ಮತ್ತು ಅಧಮನೆಂಬುದನ್ನು ದಾಖಲೆ ಸಮೇತ ವಿವರವಾಗಿ ತೆರೆದಿಟ್ಟಿದ್ದಾರೆ. ಮನಮೋಹನ್ ಮತ್ತು ಮುಲಾಯಂ ರಾಜಕೀಯವಾಗಿ ಅಕ್ಷರಸ್ಥರಾಗಲು ಅದನ್ನು ಓದಬೇಕು. ಅಂತೆಯೇ, ಜುಲೈ ೨ರಂದು ಪ್ರಕಟವಾದ ಲೆಕ್ಕದಂತೆ ಇರಾಕಿನಲ್ಲಿ ಜಾರ್ಜ್ ಬುಷ್ ಕೊಂದಿರುವವರ ಸಂಖ್ಯೆ ಹನ್ನೆರಡು ಲಕ್ಷ ಮೂವತ್ತಾರು ಸಾವಿರದ ಆರುನೂರ ನಾಲ್ಕು ಮುಟ್ಟಿದೆ ಎಂಬುದನ್ನರಿಯಲಿ.

*(ಇದು ಜುಲೈ ೨೧ಕ್ಕೆ ಮುನ್ನ ಬರೆದದ್ದು)*

* * *

ಪ್ರೊ॥ ಮಹಾಬಲೇಶ್ವರ ರಾವ್ ಅನುವಾದಿಸಿದ ಎ.ಕೆ.ರಾಮಾನುಜನ್ ಅವರ ರಾಮಾಯಣ ಪಠ್ಯಗಳನ್ನು ಕುರಿತ ಲೇಖನ ಮತ್ತು ಶ್ರೀ ಜಿ.ರಾಜಶೇಖರ್ ಬರೆದ ''ಕನ್ನಡ ಪತ್ರಿಕೆಗಳ ಮಹಾಮೌನ'' ಎಂಬ ಲೇಖನಗಳನ್ನು ಈಗೇಕೆ ಪ್ರಕಟಿಸಬೇಕಾಗಿತ್ತೆಂದು 'ಹೊಸತು' ಓದುಗರೊಬ್ಬರು ಆಕ್ಷೇಪವೆತ್ತಿದ್ದಾರೆ. ಅವರು ತಪ್ಪಾಗಿ ಭಾವಿಸಿರುವುದೇನೆಂದರೆ ಆ ಲೇಖನಗಳಿಗೂ ಭಾಜಪ ನಮ್ಮ ರಾಜ್ಯದಲ್ಲಿ ಅಧಿಕಾರಕ್ಕೆ ಬಂದಿರುವುದಕ್ಕೂ ಏನೋ ಸಂಬಂಧವಿದೆ ಎಂಬುದು. ಚುನಾವಣೆಯ ಘೋಷಣೆಗೆ ಎಷ್ಟೋ ಮುಂಚೆ ಈ ಲೇಖನಗಳು ಪ್ರಕಟಣೆಗೆ ಸಿದ್ಧವಾಗಿದ್ದುವು. ವಿನಾಕಾರಣ ಘರ್ಷಣೆಗೆ ಪ್ರಚೋದನೆ ನೀಡುವುದು 'ಹೊಸತು'ವಿನ ಪರಿಧಿಗೆ ಹೊರತಾದುದು. ಆರೋಗ್ಯಕರ ಚರ್ಚೆಗಳು ಪ್ರಜಾಪ್ರಭುತ್ವದ ಬುನಾದಿಯನ್ನು ಭದ್ರಗೊಳಿಸುತ್ತವೆಂಬುದು ಅನುಭವದ ಮಾತು. ಅನೈತಿಹಾಸಿಕ ಸಂಗತಿಗಳಿಗೆ ಮನ್ನಣೆ ದೊರಕಿಸಿಕೊಡುವುದು ಮತ್ತು ಅತಾರ್ಕಿಕ ನಿಲುವುಗಳನ್ನು ಪೋಷಿಸುವುದು ಅನಾರೋಗ್ಯಕರ. ದ್ವೇಷ ಮತ್ತು ಹಿಂಸೆಗೆ ಅದು ಮೂಲವಾಗಬಹುದೆಂಬ ಆತಂಕವಿದೆ. ಆದ್ದರಿಂದ ''ರಾಮಾನುಜನ್‌ರ ಲೇಖನವನ್ನೇಕೆ ಪ್ರಕಟಿಸಿದಿರಿ'' ಎಂಬುದಕ್ಕಿಂತಲೂ ಅವರ ಲೇಖನದಲ್ಲಿ ಒಪ್ಪಿಗೆಗೆ ಅನರ್ಹವಾದ್ದು ಯಾವುದು ಮತ್ತು ಏಕೆ ಎಂಬುದನ್ನು ಸಾಧಾರವಾಗಿ ನಿರೂಪಿಸಿದರೆ ಚರ್ಚೆಯು ಸಾರ್ಥಕವಾದೀತು.

* * *

ನಮ್ಮ ರಾಜ್ಯದಲ್ಲಿ ಅಧಿಕಾರಕ್ಕೇರಿರುವ ಪಕ್ಷವು ಶಾಸನಸಭೆಯಲ್ಲಿ ಸ್ವತಂತ್ರವಾಗಿ ಸ್ಪಷ್ಟ ಬಹುಮತ ಪಡೆಯಲು ಹೊಸ ನಮೂನೆಯ ಗಣಿಗಾರಿಕೆ ಆರಂಭಿಸಿದೆ. ಅದಕ್ಕೆ ಅಕ್ರಮ ಹಾಗೂ ಸಕ್ರಮ ಗಣಿಗಾರಿಕೆಯ ದೊರೆಗಳ ಬೆಂಬಲವಿರುವುದು ಖಚಿತ. ಈ ಪ್ರಕ್ರಿಯೆಯಲ್ಲಿ ದೋಷಾರೋಪಣೆ ಯಾರ ಮೇಲಾಗಬೇಕು? ಭಾಜಪದ ಮೇಲೋ ಅಥವಾ ಲೋಭಿಗಳಾಗಿ ವರ್ತಿಸುವ ಚುನಾಯಿತ ಕೋತಿಗಳ ಮೇಲೋ? ಫಲ ಬಿಟ್ಟಿರುವ ಮರಕ್ಕೆ ಜಿಗಿಯುವುದು ಮಂಗನ ಮೂಲಭೂತ ಲಕ್ಷಣ. ಮಂಗಗಳಲ್ಲದವರಿಗೆ ಬೌದ್ಧಿಕ ಮತ್ತು ಸೈದ್ಧಾಂತಿಕ ಕಟ್ಟುಪಾಡುಗಳಿರುತ್ತವೆ. ಅಂಥವರನ್ನು ಬೆಳೆಸುವುದು ರಾಜಕೀಯ ಪಕ್ಷಗಳ ಕರ್ತವ್ಯ. ತಮ್ಮ ಮನೆಗೆ ಸುರಕ್ಷಿತವಾದ ಬೇಲಿ ಹಾಕಿಕೊಳ್ಳಬೇಕಿದ್ದರೆ ಮಲ್ಲಿಕಾರ್ಜುನ ಖರ್ಗೆ ಅದನ್ನು ಮಾಡಬೇಕು. ಅವರ ದೆಹಲಿ ನಾಯಕರು ಸರ್ಕಾರ ಉಳಿಸಿಕೊಳ್ಳಲು ಹೂಡಿರುವ ತಂತ್ರಗಳು ಯಡಿಯೂರಪ್ಪನವರ ತಂತ್ರಗಳೂ ಆಗಿವೆ. ಮನಮೋಹನ ಸಿಂಗರು ಈ ತಂತ್ರದಿಂದ ಯಶಸ್ಸು ಪಡೆಯಲೂಬಹುದು. ಪಡೆಯದಿದ್ದರೆ ಮುಂದಿನ ಚುನಾವಣೆಯ ಸಂದರ್ಭದಲ್ಲಿ ಎಂತಹ ತಂತ್ರಗಳನ್ನು ಹೂಡುತ್ತಾರೋ ಕಂಡವರಾರು! ಆದ್ದರಿಂದ ಖರ್ಗೆ ಮಾಡಬೇಕಾದ್ದಿದು: ಪಕ್ಷಾಂತರಿಗಳನ್ನು ಮಧ್ಯಂತರ ಚುನಾವಣೆಯಲ್ಲಿ ಆಯಾ ಕ್ಷೇತ್ರಗಳಲ್ಲಿ ಸೋಲಿಸುವುದು. ಅದನ್ನು ಮಾಡುವ ವರ್ಚಸ್ಸಿದೆಯೆ?

* * *

ಕಂಚಿಯ ಜಯೇಂದ್ರ ಸರಸ್ವತಿ ಎಂಬ ಸ್ವಾಮಿಗಳ ಕತೆ ಬಹುಮಟ್ಟಿಗೆ ಮರೆತೇಹೋಗಿದೆ. ಅವರ ಮೇಲೆ ಕೊಲೆಯ ಆಪಾದನೆ ಇದೆ. ವಿಚಾರಣೆಯು ಬಹುಶಃ ಅವರು ತೀರಿಕೊಂಡ ಮೇಲೆ ನಡೆಯಬಹುದು, ಮುಗಿಯಬಹುದು. ಜಾಮೀನು ಕೊಟ್ಟು ಜೈಲಿನಿಂದ ಹೊರಬಂದ ಸ್ವಾಮಿಗಳಿಗೆ ಯಥಾಪ್ರಕಾರ ಪಾದಪೂಜೆ ಮುಂತಾದವು ಜಾರಿಯಲ್ಲಿವೆ. ನಮ್ಮ ರಾಜ್ಯಕ್ಕೂ ಅವರ ಪಾದಧೂಳಿ ಹರಡಿದೆ. ಸಚಿವ ಆಚಾರ್ಯರು ಅವರಿಗೆ ಸನ್ಮಾನ ಮಾಡಿ ಆಶೀರ್ವಾದ ಪಡೆದಿದ್ದಾರೆ. ಬೆಂಗಳೂರಿಗೆ ಬಂದು ಒಂದಷ್ಟು ಭೂಮಿ ಕೇಳದೆ ಹೋಗುವುದುಂಟೆ! ಎಂಥದೋ ಯೋಜನೆ ಇದೆ, ಹತ್ತು ಎಕರೆ ಭೂಮಿ ಕೊಡಿ, ಎಂದು ಕೇಳಿದ್ದಾರೆ. ಗಣಪತಿ ಸ್ವಾಮಿ ಅಥವಾ ರವಿಶಂಕರ ಆದರೆ 'ಕೊಡಿ' ಎಂಬ ಪ್ರಶ್ನೆಯೇ ಇರುತ್ತಿರಲಿಲ್ಲ; 'ಇಷ್ಟು ತೆಗೆದುಕೊಂಡಿದ್ದೇವೆ' ಎಂದುಬಿಡುತ್ತಿದ್ದರು. ಸ್ವಾಮಿಗಳ ಭೂಕಬಳಿಕೆಯ ಪ್ರಸಂಗಗಳ ತನಿಖೆ ಮುಂದುವರಿಸಬಾರದೆಂದು ನ್ಯಾಯಾಲಯವೂ ಹೇಳಿಬಿಡುತ್ತಿತ್ತು, ಅದಿರಲಿ, ಇನ್ನೊಂದು ವಿಷಯ ನೋಡಿ:

ಮಹಾನ್ ಜೀವನ ಕಲೆಯ ಉಪದೇಶಾಮೃತ ಸುರಿಸುವ ರವಿಶಂಕರರು ಇತ್ತೀಚೆಗೆ ಅಮೆರಿಕಾದ ಮಿಶಿಗನ್ ರಾಜ್ಯಕ್ಕೆ ತೆರಳಿದ್ದರು. ನ್ಯಾಯಮೂರ್ತಿಗಳು, ಪ್ರಾಧ್ಯಾಪಕರು, ವೈದ್ಯರು, ಮುಂತಾದ ವಿಶೇಷ ಆಹ್ವಾನಿತರ ಮುಂದೆ ಉಪನ್ಯಾಸ ನೀಡಿದರು. ಅದನ್ನು ಕೇಳಿ ಮೋಜು ಪಡೆದ ಪ್ರಾಧ್ಯಾಪಕರೊಬ್ಬರು ಉಪನ್ಯಾಸದ ಒಂದು ತುಣುಕನ್ನು 'ಹೊಸತು' ಓದುಗರಿಗಾಗಿ ಹಂಚಿಕೊಂಡಿದ್ದಾರೆ:

ವಿಶ್ವದ ಎಲ್ಲ ಭಾಷೆಗಳಲ್ಲೂ 'ಶ್ಯ್ ಶ್ಯ್' ಎಂಬುದಿದೆ. ಅದರ ಬಳಕೆಯಲ್ಲಿ ಎಲ್ಲೆಡೆ ಒಂದೇ ಅರ್ಥವಿದೆ: ಸುಮ್ಮನಿರಿ, ಸದ್ದು ಮಾಡಬೇಡಿ, ಮೌನವಾಗಿರಿ, ಎಂದು. ಅದ್ಭುತವಾದುದು ಏನಾದರೂ ಇದ್ದರೆ ಅದಕ್ಕೂ ಎಲ್ಲ ಭಾಷಿಕರೂ 'ವಾ' ಅಥವಾ 'ವಾಹ್' ಎನ್ನುತ್ತಾರೆ. 'ಮೌನದ ಅದ್ಭುತ' ಎಂಬುದನ್ನು ಸೂಚಿಸಲು ನಾವು, ಭಾರತೀಯರು, 'ಶಿವ' ಎನ್ನುತ್ತೇವೆ. ಶ್ಯ್... ವ =ಶಿವ. ಬೇರಾವ ಭಾಷೆಯವರೂ ಕಂಡುಕೊಳ್ಳದ ಸತ್ಯವನ್ನು ನಾವು ಅರಸಿದ್ದೇವೆ.

ಗಡಚಿಕ್ಕುವಷ್ಟು ಚಪ್ಪಾಳೆ ಬಿದ್ದಿತಂತೆ, ಈ ಅದ್ಭುತ ವ್ಯಾಖ್ಯಾನಕ್ಕೆ. ''ಶ್ಯ್...ವ =ಶವ'' ಎಂದು ಸಹ ಆಗಬಹುದೆಂದು ಯಾರೂ ಶಿವಶಂಕರರಿಗೆ ಹೇಳಲಿಲ್ಲ. ಪದಗಳನ್ನು ಚಮತ್ಕಾರದಿಂದ ಕುಣಿಸುವುದೇ ಯಶಸ್ಸಿನ ಗುಟ್ಟು ಎನಿಸುತ್ತದೆ.

* * *

ಸ್ವಾಮಿ ತ್ರಯರ ಪ್ರಸ್ತಾಪ ಬಂದಾಗ ''ಹಿಂದು ಧರ್ಮಕ್ಕೆ ಅಗೌರವ'' ತೋರಿಸುವುದು ಖಂಡನೀಯವೆಂಬ ಮಾತು ಉದ್ಭವಿಸಬೇಕಾದ್ದು ನ್ಯಾಯ. ಜುಲೈ ೨ರಂದು ಭಾಜಪದ ಅಂಗಸಂಸ್ಥೆಗಳಾದ ವಿಶ್ವ ಹಿಂದು ಪರಿಷತ್ ಮತ್ತು ಬಜರಂಗ ದಳ ಭಾರತ ಬಂದ್‌ಗೆ ಕರೆಕೊಟ್ಟಿದ್ದವು; ಜಮ್ಮು-ಕಾಶ್ಮೀರದ ಒಂದು ವಿವಾದದ ಸಂದರ್ಭದಲ್ಲಿ. ಅಮರನಾಥ ಗುಹೆಗೆ ಹೋಗುವ ಯಾತ್ರಿಗಳ ಅನುಕೂಲಕ್ಕಾಗಿ ಒಂದಷ್ಟು ಭೂಮಿಯನ್ನು ಕೊಡಬೇಕೆಂಬ ತೀರ್ಮಾನವು ಕೆಲವು ಮತಾಂಧರಿಗೆ ಅಪಥ್ಯವಾಗಿ ಕಂಡಿತು. ಅದು ಹೊಸದಾಗಿ ಪಡೆದ ಭೂಮಿಯಲ್ಲ. ಹಲವು ವರ್ಷಗಳಿಂದ ಉಪಯೋಗಿಸಲಾಗುತ್ತಿದ್ದ ಜಾಗವೇ ಅದು. ಅಲ್ಲಿ ತಂಗುದಾಣಗಳಿರುತ್ತಿದ್ದವು. ಅವನ್ನು ಖಾಯಂ ಆಗಿ ತಂಗುದಾಣಕ್ಕೆ ಸಜ್ಜುಗೊಳಿಸಬೇಕೆಂಬ ತೀರ್ಮಾನವನ್ನು ರಾಜ್ಯಪಾಲರು ತಮ್ಮ ನಿವೃತ್ತಿಯ ದಿನ ಪ್ರಕಟಿಸಬೇಕಾಗಿರಲಿಲ್ಲ; ಪ್ರಕಟಿಸಿದ್ದಕ್ಕೆ ವಿರೋಧ ಮತ್ತು ಗಲಭೆಯೂ ಅಗತ್ಯವಿರಲಿಲ್ಲ. ''ಈ ಜಾಗದಲ್ಲಿ ಕಾಶ್ಮೀರಿಗಳಲ್ಲದ ಹಿಂದುಗಳು ಬಂದು ನೆಲೆಸಿಬಿಡುತ್ತಾರೆ'' ಎಂಬ ಪುಕಾರು ಎಬ್ಬಿಸಿದಾಗ ಕಾಶ್ಮೀರದ ಎರಡು ಪ್ರಮುಖ ಪಕ್ಷಗಳು ಅದಕ್ಕೆ ಪುಷ್ಟಿ ನೀಡಿದ್ದು ಹೊಲಸು ರಾಜಕೀಯಕ್ಕೆ ಒಂದು ನಿದರ್ಶನ. ಕೆಲವು ಯಾತ್ರಿಗಳು ಬೇಕೆಂದೇ ರಾಜಕೀಯ ಘೋಷಣೆಗಳನ್ನು ಕೂಗುವುದು ರೂಢಿಯಾಗಿದೆ, ಅದು ಇನ್ನೊಂದು ಪಂಥದ ಮತಾಂಧರನ್ನು ರೊಚ್ಚಿಗೆಬ್ಬಿಸಿದೆ. ಆದಾಗ್ಯೂ, ಅವರು ಹರಿಬಿಟ್ಟ ಹಿಂಸೆ ಮತ್ತು ಪ್ರತಿಭಟನೆಗೆ ಯಾವ ಸಮರ್ಥನೆಯೂ ಇಲ್ಲ. ಅವರಿಗೆ ಪ್ರತಿಕ್ರಿಯೆಗಾಗಿ 'ಭಾರತ ಬಂದ್'ಗೆ ಕರೆ ನೀಡಲಾಗಿತ್ತು. ಕರೆ ನೀಡಿದಾಗ ಸ್ವಯಂ ಪ್ರೇರಣೆಯಿಂದ ಭಾಗವಹಿಸದವರಿಗೆ ಏನು ಮಾಡಬೇಕು? ''ಹಿಂದು ಧರ್ಮವನ್ನು ಗೌರವಿಸುವುದರ ಬಗ್ಗೆ'' ಪಾಠ ಹೇಳಬೇಕು! ತನ್ನ ಊರುಗೋಲುಗಳಾದ ಸಂಘ ಪರಿವಾರದ ಕಾರ್ಯಕರ್ತರು 'ಹಿಂದು ಧರ್ಮಕ್ಕೆ ಅಗೌರವ' ತೋರಿಸಿದರೆಂಬ ಆಪಾದನೆಯನ್ನು ಹೊರಿಸಿ ಬೆಳಗಾವಿಯ ಮುಖ್ಯ ಇಂಜಿನಿಯರ್ ಶ್ರೀ ಖಾನಾಗವಿಯವರನ್ನು ನೂಕಾಡಿ ಕಚೇರಿಯನ್ನು ಧ್ವಂಸ ಮಾಡಿದರಂತೆ. 'ದಿ ಹಿಂದು' ಪತ್ರಿಕೆ ಇದನ್ನು ವರದಿ ಮಾಡಿತ್ತು, ಆಮೇಲೆ ಮೌನ ವಹಿಸಿತು. ತಮ್ಮ ಸಮರ್ಥಕರು ಹೀಗೆ 'ಪಾಠ' ಹೇಳಿಕೊಡುವ ಧೀಮಂತ ಕೃತ್ಯವನ್ನೆಸಗಿರುವಾಗ ಶ್ರೀ ಯಡಿಯೂರಪ್ಪನವರ ಪಕ್ಷವು ಏನು ಕ್ರಮ ತೆಗೆದುಕೊಳ್ಳುತ್ತದೆಂದು ರಾಜ್ಯದ ನಾಗರಿಕರು ಕುತೂಹಲಿಗಳಾಗಿರುತ್ತಾರೆ. ಪರಿವಾರವು ಇಷ್ಟು ಬೇಗನೆ ತನ್ನ 'ಸಂಸ್ಕೃತಿ'ಯನ್ನು ಸಾರ್ವಜನಿಕವಾಗಿ ಪ್ರದರ್ಶಿಸಬಹುದೆಂಬ ನಿರೀಕ್ಷೆ ಇರಲಿಲ್ಲ. ಆದರೆ ತನ್ನ ನೈಜ ಲಕ್ಷಣಗಳನ್ನು ಅದು ದೂರಮಾಡಿಕೊಳ್ಳಲಾರದು. ಪತ್ರಿಕಾ ಧರ್ಮಕ್ಕೆ ತಕ್ಕಂತೆ ಶ್ರೀ ಖಾನಾಗವಿಯವರ ಕುಲ-ಗೋತ್ರಗಳನ್ನು ಪತ್ರಿಕೆಗಳು ವರದಿ ಮಾಡಿಲ್ಲ. ಅವರು ಯಾವ ಹಿನ್ನೆಲೆಯವರೇ ಆಗಿರಲಿ, ಅವರು ಹಿಂದು ಮತಧರ್ಮದ ಬಗೆಗಿನ ಗೌರವವನ್ನು ಸರ್ಕಾರದ ಕಚೇರಿಯನ್ನು ಮುಚ್ಚುವುದರ ಮೂಲಕ ಕಾಪಾಡಲು ನಿರಾಕರಿಸಿದರು. ಆದರೆ ಭಾಜಪ ಶಾಸಕರಿಗೆ ರಾಜ್ಯದ ಸರ್ಕಾರವು ತಮ್ಮ ಮತಧರ್ಮದ ಅನುಯಾಯಿಯಾಗಿರಬೇಕು ಎನಿಸಿದೆ. ಅದೇ ಅವರ ಕೋಪಕ್ಕೆ ಕಾರಣ. ಒಟ್ಟಿನಲ್ಲಿ 'ಗುಜರಾತ ಮಾದರಿ'ಯನ್ನು ಅವರು ಉದ್ಘಾಟಿಸಿದ್ದಾರೆ. ಪ್ರಾಥಮಿಕ ಶಾಲೆಯ ಪಠ್ಯಪುಸ್ತಕದಲ್ಲಿ 'ಹಿಂದು ಧರ್ಮದ ಗೌರವಕ್ಕೆ ಮೂಲಸೂತ್ರಗಳು' ಎಂಬ ಪಾಠವನ್ನು ಸೇರಿಸುವುದು ಮುಂದಿನ ಕ್ರಮವಾಗುತ್ತದೆಯೇ? ಅಭಿವೃದ್ಧಿ ಮಂತ್ರ ಆಗಲೇ ಫಲ ನೀಡುತ್ತಿದೆ ಎನ್ನಬಹುದೆ?

ಇಲ್ಲಿ ಒಂದು ಗಮನಾರ್ಹವಾದ ಸಂಗತಿ ಇದೆ. ಬೆಳಗಾವಿಯ ಕುಕೃತ್ಯದ ಸಂದರ್ಭದಲ್ಲಿ ಮೂಕಪ್ರೇಕ್ಷಕರಾಗಿದ್ದ ಪೊಲೀಸರು ನಂತರ ಒಂದು ದಿನ, ಇನ್ನೊಂದು ಮೂರ್ಖ ಕೆಲಸವು ಬೆಂಗಳೂರಿನ ಜಯಚಾಮರಾಜೇಂದ್ರ ನಗರದಲ್ಲಿ ಪರಿಸ್ಥಿತಿಯನ್ನು ಉದ್ವಿಗ್ನಗೊಳಿಸಿದಾಗ, ತಮ್ಮ ಪ್ರತಾಪವನ್ನು ಮೆರೆದರು, ಸಾಮಾನ್ಯ ನಾಗರಿಕರನೇಕರನ್ನು ಹಿಗ್ಗಾ ಮುಗ್ಗಾ ಥಳಿಸಿದರು. ಒಟ್ಟಿನಲ್ಲಿ, ಏನಾದರೊಂದು ನೆಪದಲ್ಲಿ ಮತೀಯತೆಯ ತಾಂಡವನೃತ್ಯ ನಡೆಯುತ್ತಿರಬೇಕು, ಅದರಲ್ಲಿ ಕನಿಷ್ಠ ಎರಡು ಕೋಮಿನವರು ಘರ್ಷಣೆಯಲ್ಲಿ ತೊಡಗಬೇಕು. ಇದೆಲ್ಲವನ್ನೂ ಸಮಚಿತ್ತದಿಂದ ಪರಾಂಬರಿಸಿರುವ ಮಾನ್ಯ ಡಾ॥ ಎಂ. ಚಿದಾನಂದಮೂರ್ತಿಯವರು ಹಿಂದು

ಧರ್ಮದ ರಕ್ಷಣೆಯ ಭಾರವನ್ನು ಹೊತ್ತಿದ್ದಾರೆ. ''ಬಜರಂಗ ದಳವು ನಡೆಸುವ ಕಾರ್ಯಕ್ರಮಗಳನ್ನು ಟೀಕಿಸಬಾರದು'' ಎಂಬ ಮುದ್ದು ಮಾತು ಹೇಳಿದ್ದಾರೆ. ಐವತ್ತು ವರ್ಷಗಳ ತಮ್ಮ ಸಂಶೋಧನಾ ಕಾರ್ಯಕ್ಕೆ ಇದು ಅವರು ಹಾಡಿರುವ ಚರಮಗೀತೆ ಇರಬೇಕು.

* * *

ರಾಸಾಯನಿಕ ಗೊಬ್ಬರದ ಸರಬರಾಜಿನ ಗೊಂದಲವು ಇನ್ನೂ ಬಗೆಹರಿದಿಲ್ಲ. ಕೇಂದ್ರವು ಸಾಕಷ್ಟು ಪ್ರಮಾಣದಲ್ಲಿ ಗೊಬ್ಬರವನ್ನು ನಮ್ಮ ರಾಜ್ಯಕ್ಕೆ ಕಳಿಸುತ್ತಿಲ್ಲವೆಂಬ ಹೇಳಿಕೆಗಳು ಕಡಿಮೆಯಾಗಿವೆ. ವ್ಯಾಪಾರಿಗಳಲ್ಲಿ ಗೊಬ್ಬರದ ಶೇಖರಣೆ ಸಮರ್ಪಕವಾಗಿದೆ ಎಂದು ಸಹ ಕೆಲವು ವಲಯಗಳಲ್ಲಿ ಹೇಳಲಾಗುತ್ತಿದೆ. ಹೆಗ್ಗಡದೇವನಕೋಟೆ ತಾಲ್ಲೂಕಿನ ರೈತನಾಯಕರೊಬ್ಬರು 'ಹೊಸತು'ಗೆ ಹೇಳಿದಂತೆ, ಗೊಬ್ಬರವನ್ನು ''ಭಾಜಪದ ಶಾಸಕರು ಆಯ್ಕೆಯಾಗಿರುವ ಕ್ಷೇತ್ರಗಳಲ್ಲಿ ಚೆನ್ನಾಗಿ ಸರಬರಾಜು ಮಾಡಲಾಗುತ್ತಿದೆ. ಬೇರೆ ಪಕ್ಷಗಳವರು ಆಯ್ಕೆಯಾಗಿರುವ ಕಡೆಗಳಲ್ಲಿ ಬೇಕೆಂದೇ ಗೊಬ್ಬರವನ್ನು ಮುಚ್ಚಿಡಲಾಗಿದೆ. ಅಲ್ಲಿ ಮೂಟೆಗೆ ೧೧೦ ರೂಪಾಯಿಗಳಂತೆ (ಅಂದರೆ, ಹೆಚ್ಚಿನ ದರದಲ್ಲಿ) ಗುಟ್ಟಾಗಿ ಮಾರಲಾಗುತ್ತದೆ. ಭಾಜಪ ಕ್ಷೇತ್ರದಿಂದ ಗೊಬ್ಬರ ಕೊಂಡು ತಂದರೆ ದಾರಿಯಲ್ಲಿ ಅದನ್ನು ತಡೆಯಲಾಗುತ್ತಿದೆ.'' ಇದು ನಿಜವೇ ? ಮಾಧ್ಯಮದ ಮಿತ್ರರು ತನಿಖೆ ನಡೆಸಿ ತಿಳಿಸಬೇಕು.

* * *

ಮೊದಲು ಎತ್ತಿಕೊಳ್ಳಬೇಕಾಗಿದ್ದುದನ್ನು ಕಡೆಗೆ ಪ್ರಸ್ತಾಪಿಸುತ್ತಿರುವುದು ಕೆಲವರಿಗೆ ಕೋಪ ತರಿಸುತ್ತದೆ, ನಿರಾಶೆಯುಂಟುಮಾಡುತ್ತದೆ. 'ಹೊಸತು'ವಿನ ಕನ್ನಡದ ಬಗೆಗಿನ ಅಭಿಪ್ರಾಯದಲ್ಲಿ ಏನೋ ದ್ವಂದ್ವ ಉಂಟಾಗಿದೆಯೆಂಬ ಭಾವನೆಯನ್ನು ತರಿಸಬಹುದು. ಆದರೆ ಅಂತಹದ್ದೇನೂ ಇಲ್ಲ. ಅಂತರ್ಮುಖಿಗಳಾಗಿ ನಮ್ಮನ್ನು ನಾವು ಅವಲೋಕಿಸಿಕೊಳ್ಳಬೇಕು. ಆಗ ತಿಳಿಯುತ್ತದೆ, ನಮ್ಮ ಅತ್ಯಂತ ಮುಖ್ಯವಾದ ಒಂದು ಲಕ್ಷಣವನ್ನು ನಾವು ಗುರುತಿಸಿಕೊಂಡಿಲ್ಲ ಅಥವಾ ಹೇಳಿಕೊಂಡಿಲ್ಲ, ಎಂದು. ಕನ್ನಡದ ಬಗ್ಗೆ ಬೇಕಾದಷ್ಟು ಅಭಿಮಾನವಿದೆ, ಆದರೆ ಸಾಕಷ್ಟು ನಂಬಿಕೆಯಿಲ್ಲ. ಅದು ನಮ್ಮ ಸಮಸ್ಯೆಯು ಚಿರಂತನವಾಗಿ ನಮ್ಮೊಂದಿಗೆ ಉಳಿಯಲು ಪ್ರಮುಖ ಕಾರಣವಾಗಿದೆ. ಬಹಳ ಹಿಂದೆ ಬಿ.ಎಂ.ಶ್ರೀ. ಅವರು ಕನ್ನಡಕ್ಕೆ ಸಿಂಹಾಸನ ಕೊಡಿಸಲು ಹೊರಟರು. ಅವರ ಸದಾಶಯದಲ್ಲಿ ಠಕ್ಕು ಎಳ್ಳಷ್ಟೂ ಇರಲಿಲ್ಲ. ಆದರೆ ಅವರು ''ಆಳೌ ಬ್ರಿಟಾನಿಯಾ'' ಎಂಬ ದುರಹಂಕಾರದ ಕವನವನ್ನು ಭಾಷಾಂತರಿಸಿದ್ದುದೂ ಅಷ್ಟೇ ನಿಜ. ಎರಡನ್ನೂ ಹೇಗೆ ಸಮನ್ವಯಗೊಳಿಸಲು ಇಚ್ಛಿಸಿದ್ದರೋ ಸರಿಯಾಗಿ ತಿಳಿಯುವುದಿಲ್ಲ. ವಸ್ತುನಿಷ್ಠವಾಗಿ ನೋಡಿದರೆ ಒಂದಂಶವು ಗೋಚರಿಸುತ್ತದೆ : ಯಾರೆಲ್ಲಾ ಕನ್ನಡದ ಪರವಾಗಿ ದನಿಯೆತ್ತುವ 'ದೊಡ್ಡವರು' ಇದ್ದಾರೋ ಅವರಲ್ಲಿ ಬಹುತೇಕ, ಮಕ್ಕಳಿಗೆ ಮೊಮ್ಮಕ್ಕಳಿಗೆ ಇಂಗ್ಲಿಷ್ ಕಲಿಸಿದ್ದೇ ಹೆಚ್ಚು. (ಆಮೇಲೆ ಇಂಜಿನಿಯರಿಂಗ್, ನಂತರ ಅಮೆರಿಕಾದಲ್ಲಿ 'ಸೇವೆ' ಸಲ್ಲಿಸಿ ಭಾರತೀಯ ಸಂಸ್ಕೃತಿಯನ್ನು ವಿಜೃಂಭಣೆಯಿಂದ ಎತ್ತಿಹಿಡಿಯುವುದು !) ಮಕ್ಕಳಿಲ್ಲದವರು ನುಡಿಯುವ ಕುಹಕದ ಮಾತೆಂದು ಇದನ್ನು ಟೀಕಿಸುವವರೂ ಇರುತ್ತಾರೆ. ಶಾಲಾ-ಕಾಲೇಜುಗಳಲ್ಲಿ ಅಧ್ಯಾಪಕರು ಮೊದಲಿನಿಂದಲೂ ವಿದ್ಯಾರ್ಥಿಗಳಿಗೆ ಹೇಳುತ್ತಲೇ ಬಂದಿದ್ದಾರೆ: ''ನಾನು ನುಡಿದಂತೆ ನೀನು ಮಾಡು, ನಾನು ಮಾಡಿದಂತೆ ನೀನು ಮಾಡಬೇಡ.'' ಕನ್ನಡದ ಪ್ರಾಶಸ್ತ್ಯದ ಬಗ್ಗೆ ತರ್ಕಬೆಳೆಸುವವರನ್ನು ಕಂಡು ಜನಸಾಮಾನ್ಯರು ಅನಾದರ ತೋರಿಸುವುದು ಈ ಕಾರಣದಿಂದ. ''ನಮ್ಮ ಮಕ್ಕಳಿಗೆ ಇಂಗ್ಲಿಷ್, ಆದರೆ ನಿಮ್ಮ ಮಕ್ಕಳಿಗೆ ಕನ್ನಡವೇ ಚೆನ್ನು'' ಎಂಬ ಉಪದೇಶವು ಸವಕಲಾಗಿ ಹೋಗಿದೆ. ಕನ್ನಡಕ್ಕೆ ಕುತ್ತು ತರುವುದು ಇದೇ. ಅದಕ್ಕೆ ನ್ಯಾಯಾಲಯವು ಈಗ ಕಾನೂನಿನ ಗುರಾಣಿಯನ್ನು ಸಿದ್ಧಗೊಳಿಸಿಕೊಟ್ಟಿದೆ, ಅಷ್ಟೆ. ಶಿಕ್ಷಣ ನೀತಿಯನ್ನು ಪರಿಗಣನೆಗೆ ತೆಗೆದುಕೊಳ್ಳದೆಯೇ ಭಾಷಾನೀತಿಯನ್ನು ಯಥೇಚ್ಛವಾಗಿ ನಿರೂಪಿಸುವ ಹಕ್ಕು ನ್ಯಾಯಾಲಯಕ್ಕಿದೆ. ''ಇದು ಶಿಕ್ಷಣ ತಜ್ಞರ ಪರಿಧಿಗೆ ಸೇರಿದ್ದು, ಮನೋವಿಜ್ಞಾನದ ಆಯಾಮವುಳ್ಳದ್ದು, ಭಾಷಾಕಲಿಕೆಯ ಸಂಕೀರ್ಣ ವ್ಯಾಪ್ತಿಗೆ ಬರುವಂಥದು'' ಎಂಬ ವಿನಯವನ್ನು ನ್ಯಾಯಾಲಯವು ಪ್ರದರ್ಶಿಸಬೇಕೆಂಬ ನಿಯಮವೇನೂ ಇಲ್ಲ. ಜೊತೆಗೆ, ವರ್ಗ ಪಿಂಗಡಣೆಯು ಸಮಾಜದಲ್ಲಿ ಸಹಜ ಮತ್ತು ಅನಿವಾರ್ಯವೆಂಬ ಮೌಢ್ಯವು ಮನಸ್ಸುಗಳನ್ನು ಆಕ್ರಮಿಸಿರುವಾಗ 'ಸಮಾನ ಶಿಕ್ಷಣ ನೀತಿ' ಹಾಗೂ 'ಸಮಾನ ಅವಕಾಶಗಳು, ಸಮಾನ ಸೌಲಭ್ಯಗಳು' ಎಂಬ ಕೂಗು ಜಾಣಕಿವುಡರಿಗೆ ಕೇಳಿಸುವುದಿಲ್ಲ. ''ಕಿವುಡರಿಗೂ ಕೇಳುವಂತೆ'' ಹೇಳಲು ಮತ್ತೆ ಭಗತ್ ಸಿಂಗ್ ಬರಬೇಕೇನೊ !

ನಮ್ಮ ಶಿಕ್ಷಣ ಕ್ಷೇತ್ರದಲ್ಲಿ ಅಘೋಷಿತ ಅನಿಸಿಕೆಯೊಂದು ಆಳವಾಗಿ ಬೇರುಬಿಟ್ಟಿದೆ : ಸರ್ಕಾರದ ಅನುದಾನ ಇಲ್ಲದಿರುವಾಗ ಸರ್ಕಾರದ ನಿಯಮ ಅನ್ವಯಿಸುವುದಿಲ್ಲ, ಎಂಬುದು ಆ ಅನಿಸಿಕೆ. ಅಂತಹ ಸಂಸ್ಥೆಗಳು ಸರ್ವತಂತ್ರ ಸ್ವತಂತ್ರ. ಸಂಬಳ ಕೊಡದೆಯೇ ಅಧ್ಯಾಪಕರನ್ನು ದುಡಿಯಲು ನಿರ್ಬಂಧಿಸಬಹುದು, ತಮ್ಮಿಷ್ಟದಂತೆ ಪಠ್ಯವನ್ನು ಅಳವಡಿಸಿಕೊಳ್ಳಬಹುದು, ಇತ್ಯಾದಿ ''ಸೌಲಭ್ಯ''ಗಳು ಅವರಿಗೆ ಕಾನೂನಿನ ಚೌಕಟ್ಟಿನಲ್ಲಿ ಲಭ್ಯಪಿವೆ. ನ್ಯಾಯಾಲಯವು ಇದನ್ನೇ ಬೇರೆ ಮಾತುಗಳಲ್ಲಿ ಹೇಳಿದೆ: ''ಸರ್ಕಾರಿ ಶಾಲೆಗಳಿಗೆ ಅನ್ವಯಿಸಲಾಗುವ ನೀತಿಯನ್ನು ಕಡ್ಡಾಯವಾಗಿ ಖಾಸಗಿ ಶಾಲೆಗಳಿಗೆ ಅನ್ವಯಿಸುವಂತಿಲ್ಲ.'' ಅಲ್ಲಿ ಕನ್ನಡದಲ್ಲೇ ಹೇಳಿಕೊಡಿ, ಆದರೆ ಇಲ್ಲಿ ಅದನ್ನು ಪರಿಪಾಲಿಸಬೇಕೆಂದಿಲ್ಲ. ''ಮೂಲತಃ ಇದು ಶಿಕ್ಷಣ ನೀತಿ, ಆದ್ದರಿಂದ ಶಿಕ್ಷಣವನ್ನು ಯಾರೇ ಕೊಡಲಿ, ಹೀಗೆಯೇ ಕೊಡಬೇಕು, ಇದು ಮಕ್ಕಳಿಗೆ ಕಲಿಸುವ ವೈಜ್ಞಾನಿಕ ವಿಧಾನ'' ಎಂದು ಪೋಷಕರಿಗೂ ಹೇಳುವಂತಿಲ್ಲ, ನ್ಯಾಯಾಲಯಕ್ಕೂ ಹೇಳುವಂತಿಲ್ಲ. ''ಭಾರತದಲ್ಲಿ ಶಿಕ್ಷಣ ಪಡೆಯುವ ಪ್ರತಿಯೊಂದು ಅನುಕೂಲಸ್ಥ ಕುಟುಂಬದ ಮಗುವೂ ಭಾವೀ ಅಮೆರಿಕಾದ ಪ್ರಜೆ, ಆದ್ದರಿಂದ ಅದಕ್ಕೆ ಇಂಗ್ಲಿಷ್ ಶಿಕ್ಷಣವು ಮೂಲಭೂತ ಹಕ್ಕು'' ಎಂಬುದು ಒಂದು ಜನ ವಿಭಾಗದ ಮನಸ್ಸಿನಲ್ಲಿ ಬಲವಾಗಿ ನಿಂತಿದೆ. ನ್ಯಾಯಾಲಯವು ಅದನ್ನೇ ಪ್ರತಿಫಲಿಸಿದೆ. ಎಲ್ಲಾ, ಪೋಷಕರ ಮೂಲಭೂತ ಹಕ್ಕಿನ ಮಾತೇ ಆಯಿತು. ಅವರು ಮಕ್ಕಳ ಮೇಲೆ ಹಕ್ಕು ಚಲಾಯಿಸಬಹುದೆ ? ಸಮಗ್ರವಾಗಿ ಕಲಿಯುವ ಹಕ್ಕು ಮಕ್ಕಳಿಗೆ ಇರಬೇಡವೇ ? ಇರಬೇಕೆಂದಾದರೆ, ಅತ್ಯಂತ ಹೆಚ್ಚಿನ ಮತ್ತು ಉಚ್ಚಮಟ್ಟದ ತಿಳುವಳಿಕೆಯನ್ನು ಪಡೆಯಲು ಎಂತಹ ಶಿಕ್ಷಣ ನೀತಿ ಇರಬೇಕು ? ಅದು ಸರ್ಕಾರಿ ಅಥವಾ ಖಾಸಗಿ ಎಂಬ ಕಾರಣದಿಂದ ವ್ಯತ್ಯಾಸವಾಗಬಲ್ಲಂತಹ ಶಿಕ್ಷಣ ನೀತಿಯಲ್ಲ. ಇಂಗ್ಲಿಷ್ ಮಾಧ್ಯಮದಲ್ಲಿ ಪ್ರಾಥಮಿಕ ಶಿಕ್ಷಣ ಪಡೆಯುವ ಕೆಲ ಮಕ್ಕಳು ಕತೆಗಳನ್ನು ಹಾಗೂ ನಗೆ ಚಾಟಿಕೆಗಳನ್ನು ಕಂಠಸ್ಥ ಮಾಡಿಕೊಂಡು ಪಟಪಟನೆ ಹೇಳಿಬಿಡುತ್ತವೆ. ಕತೆಯ ಪರಿಚಯವೂ ಇಲ್ಲ, ನಗೆಯ ಅಂಶದ ಸುಳಿವೂ ಇಲ್ಲ. ನೀರು, ಬೆಂಕಿ, ಹೂವು, ಮಳೆ, ಹೀಗೆ ಯಾವುದರ ಬಗೆಗಾದರೂ ಆ ಮಕ್ಕಳಿಗೆ 'ಜ್ಞಾನ' ತುಂಬಿದೆ; ಆದರೆ ಆ ಜ್ಞಾನವೇನು, ಹೇಗೆ ಬಂತು ಎಂಬುದು ತಿಳಿದಿರಬೇಕೆಂದೇನೂ ಇಲ್ಲ. ಪೋಷಕರಿಗೆ ಮತ್ತು ನ್ಯಾಯಾಲಯಕ್ಕೆ ಇದೆಲ್ಲಾ ಗೌಣ. ನಾವು ನಡೆಸಲಾಗದ ಒಂದು ಪ್ರಯೋಗವಿದೆ: ಇಂಗ್ಲಿಷ್‌ನಲ್ಲಿ ಇಷ್ಟು ಕಲಿತಿರುವ ಮಗು ತನ್ನ ಭಾಷೆಯಲ್ಲೇ ಕಲಿತಿದ್ದಿದ್ದರೆ ಎಷ್ಟು ಕಲಿಯಬಹುದಾಗಿತ್ತು? ''ಹೂವು ಸುಂದರವಾಗಿದೆ'' ಎಂದು ಕಂಠಪಾಠ ಮಾಡುವ ರಂಪ ಇಲ್ಲದಿರಬಹುದಿತ್ತೇನೋ! ಮನೆಯಲ್ಲಿ ಮಕ್ಕಳಿರುವಾಗ ಇಂಗ್ಲಿಷ್‌ನಲ್ಲೇ ಮಾತನಾಡಿ, ಅವರಿಲ್ಲದಿದ್ದಾಗ ತೆವಲು ಹತ್ತಿದರೆ ಕನ್ನಡದಲ್ಲಿ ಮಾತನಾಡುವ ತಂದೆ-ತಾಯಿಯರಿಗೆ ಈ ತರ್ಕವನ್ನು ಅನ್ವಯಿಸಲಾಗುವುದಿಲ್ಲ. ಕನ್ನಡವನ್ನು ಉಳಿಸುವ ಜವಾಬ್ದಾರಿಯನ್ನು ಅವರಿಗೆ ಹೇರುವುದು ಅವರ ''ಸ್ವಾತಂತ್ರ್ಯದ ಹರಣ''ವಾಗುತ್ತದೆ !

ಇದೆಲ್ಲದರ ಪರಿಣಾಮ ಒಂದು ಸ್ತರದಲ್ಲಿ ಕಣ್ಣಿಗೆ ರಾಚುವಂತಿದೆ : ಅದೇನೆಂದರೆ ಕ್ರಮೇಣ ಸರ್ಕಾರಿ ಶಾಲೆಗಳನ್ನು ಮುಚ್ಚುವುದು, ಇಂಗ್ಲಿಷ್ ಕಲಿಸುವ ಖಾಸಗಿ ಶಾಲೆಗಳು ಮಾತ್ರವೇ ಉಳಿಯುವುದು, ಅಂತಹ ಶಾಲೆಗಳಿಗೆ ಹೋಗಲಾರದವರು 'ಕಸ', 'ಸಗಣಿ', 'ಹೊಲ', 'ಹಸಿವು', 'ಕೂಲಿ', ಮುಂತಾದ ಪದಗಳನ್ನು ಕನ್ನಡದಲ್ಲಿಯೇ ಕಲಿತು ಜೀವನದಲ್ಲಿ ಅವುಗಳೊಡನೆಯೇ ಸಂಸರ್ಗ ಇರಿಸಿಕೊಳ್ಳುವುದು ! ಸಂವಿಧಾನ, ಕಾನೂನು, ಮೂಲಭೂತ ಹಕ್ಕು, ಇತ್ಯಾದಿಗಳ ಮುಸುಕಿನಲ್ಲಿ ವರ್ಗ ವಿಭಜನೆಗೆ ತಾತ್ವಿಕ ಆಯಾಮ ರಚಿಸಿಕೊಡುವ ಧೀಮಂತರು ನಮ್ಮಲ್ಲಿದ್ದಾರೆ. ಕನ್ನಡದ ಬಗ್ಗೆ ಉದ್ದುದ್ದ ಭಾಷಣ ಮಾಡುವ ನಮ್ಮ ಪ್ರಜ್ಞಾವಂತರಿಗೆ ಇದೆಲ್ಲಾ ಬೇಕಿಲ್ಲ. ಕನ್ನಡವನ್ನು, ಮತ್ತು ಕನ್ನಡದಲ್ಲಿ, ಕಲಿತರೂ ಆರ್ಥಿಕವಾಗಿ ಉತ್ತಮ ಜೀವನವು ಸಾಧ್ಯವಾಗುವಂತೆ ಮಾಡುವ ಯೋಜನೆ ಅವರಲ್ಲಿಲ್ಲ. ಕನ್ನಡವು 'ಶಾಸ್ತ್ರೀಯ'ವಾದರೆ ಸಾಕು, ಅದು ಶಾಸ್ತ್ರ ಭಾಷೆಯಾಗಬೇಕಿಲ್ಲ ಎಂಬ ಗ್ರಹಿಕೆ ಅವರದು. ಶಾಸ್ತ್ರ ಭಾಷೆಯೆಂದರೆ ಎಲ್ಲ ಶಾಸ್ತ್ರಗಳೂ (ವಿಜ್ಞಾನ, ತಂತ್ರಜ್ಞಾನ, ಸಮಾಜ ವಿಜ್ಞಾನ, ಸಾಹಿತ್ಯ, ಇತ್ಯಾದಿ) ಆ ಭಾಷೆಯಲ್ಲಿರುವುದು ಎಂದರ್ಥ. ''ಶಾಸ್ತ್ರೀಯ ಭಾಷೆ'' ಆದರೆ ಕನ್ನಡದ ವಿದ್ವಾಂಸರಿಗೆ ಸಂಶೋಧನೆ ಮಾಡಲು ಕುರ್ಚಿಗಳ ಏರ್ಪಾಟಾಗುತ್ತದೆ; ಕನ್ನಡವು ಶಾಸ್ತ್ರಭಾಷೆಯಾದರೆ ಇಂತಹ ಅನುಕೂಲ ತಕ್ಷಣದಲ್ಲಿ ಇರುವುದಿಲ್ಲ!

ನಮ್ಮ ಶಿಕ್ಷಣ ನೀತಿಯ ಇನ್ನೊಂದು ನ್ಯೂನತೆಯು ಚರ್ಚೆಗೇ ಬರುವುದಿಲ್ಲ: ಪ್ರಾಂತೀಯ ಭಾಷೆಯ ಮಾಧ್ಯಮವು ೫ನೆಯ ತರಗತಿಯವರೆಗೆ ಕಡ್ಡಾಯವಾಗಿರಲಿ, ಆಮೇಲೆ ಬೇಕಾದರೆ ಇಂಗ್ಲಿಷ್ ಮಾಧ್ಯಮವಿರಲಿ, ಎಂಬುದು ಆ ನೀತಿ. ಪೋಷಕರಿಗೆ ಮತ್ತು ಮಕ್ಕಳಿಗೆ ಇದು ತಮಾಷೆಯೆನಿಸುತ್ತದೆ. ಐದರ ನಂತರ ಹೊಸ ಮಾಧ್ಯಮ ಆರಿಸಿಕೊಳ್ಳುವ ಬದಲು ಒಂದನೆಯ ತರಗತಿಯಿಂದಲೇ ಅದಿದ್ದರೆ ಸುಗಮವಲ್ಲವೆ ? ''ಕಲಿಯಲು ಕನ್ನಡ, ಜ್ಞಾನ ಭಂಡಾರದ ವಿಸ್ತರಣೆಗೆ ಬೇರೆ ಭಾಷೆಗಳ ಪರಿಚಯವೂ ಇರಲಿ'' ಎಂಬುದು ಶಿಕ್ಷಣ ನೀತಿಯಾಗಬೇಕು. ಹಾಗಾಗಬೇಕಾದರೆ ಕನ್ನಡವು 'ಶಾಸ್ತ್ರ ಭಾಷೆ' ಆಗಬೇಕು. ನ್ಯಾಯಾಲಯಕ್ಕೆ ಇದನ್ನೆಲ್ಲಾ ಹೇಳಲು ಶಕ್ಯವೆ ? ಅದಕ್ಕೆ ಸಂವಿಧಾನದ ವಾಕ್ಯ, ಅದಕ್ಕೆ ಕೊಡಲಾಗುವ ಬಹ್ವರ್ಥಗಳು, ಅವಷ್ಟೇ ಯಥಾರ್ಥ. ಬೇರಾವ ಹಕ್ಕುಗಳ ಬಗೆಗೂ ಕಾಳಜಿ ಇಲ್ಲದ ನಮ್ಮ ಖಾಸಗಿ ಶಿಕ್ಷಣ ಸಂಸ್ಥೆಗಳ ಮಾಲಿಕರಿಗೆ ಇಂಗ್ಲಿಷ್ ರಕ್ಷಣೆಯೇ ಪುರುಷಾರ್ಥ ಸಾಧನೆ. ರಾಜ್ಯದ ಶಿಕ್ಷಣ ನೀತಿ ಅದಕ್ಕೆ ಅಡ್ಡಿಯಾದರೆ ಚಿಂತೆಯಿಲ್ಲ, ಕೇಂದ್ರಕ್ಕೆ ಬರೆದು, ಗಲ್ಲಿಗೊಂದು ''ಕೇಂದ್ರೀಯ ಪಠ್ಯ'' ಬೋಧಿಸುವ ಅಂಗಡಿಗಳನ್ನು ತೆಗೆಯಲು ಸ್ವಾಗತವಿದೆ. ''ಜೈ ಕನ್ನಡ'' ಎನ್ನುವಾಗ ಸಿನಿಕತನದ ಛಾಯೆ ಮೂಡುವುದು ಈ ಹಿನ್ನೆಲೆಯಲ್ಲಿ. ಅದಕ್ಕೆ ಸಾಮೂಹಿಕ ಚಿಂತನೆ ಮತ್ತು ಕ್ರಿಯೆ ಔಷಧಿಯಾಗಬಲ್ಲದು.

# ವಿಜಯ್ ತೆಂಡೂಲ್ಕರ್ ಒಂದು ಅಧ್ಯಯನ

ಮೂಲ : **ಪುಷ್ಪಾ ಭಾವೆ**
ಸಂಗ್ರಹಾನುವಾದ : **ಎಸ್. ಮಾಲತಿ**

೧೯೫೦ರಲ್ಲಿ ಮರಾಠಿ ರಂಗಭೂಮಿಯಲ್ಲಿ ಮೊದಲ ಸಲ ವಿಜಯ್ ತೆಂಡೂಲ್ಕರ್ ಹೆಸರು ಕೇಳಿ ಬಂದಾಗ, ಸಾಹಿತ್ಯಿಕ ಪರಂಪರೆಯಲ್ಲಿ ಬದಲಾವಣೆಯ ಗಾಳಿ ಬೀಸಿದ್ದರೂ, ರಂಗಭೂಮಿಯಲ್ಲಿನ್ನೂ ಪುನರು ಜ್ಜೀವನ, ಹಳಹಳಿಕೆ ಹಾಗೂ ಹೊಸ ರಂಗಭಾಷೆ ಯೊಂದನ್ನು ಶೋಧಿಸುವ ಬಗ್ಗೆ ಅನಿರ್ಧಾರದ ಪರಿಸ್ಥಿತಿಯೇ ಇತ್ತು. ನಾಟಕಕ್ಕೆ ಪ್ರೇಕ್ಷಕರಾಗಬಲ್ಲ ಯುವ ಜನತೆ ಹೊಸ ಸಾಹಿತ್ಯಿಕ ಅಭಿರುಚಿಯಿಂದ ಪೋಷಿಸಲ್ಪಟ್ಟಿತ್ತು. ಇವರು, ಸಾಂಪ್ರದಾಯಿಕ ಸಂಗೀತನಾಟಕಗಳು ಹಾಗೂ ಅತ್ರೆ, ರಾಂಗ್ನೇಕರ್, ಮಾಮಾ ವಾರೇಕರ್ ಅವರ ಗದ್ಯ ನಾಟಕಗಳೆರಡರಿಂದಲೂ ಅತೃಪ್ತರಾಗಿದ್ದರು. ಅವರು ಹೊಸನಾಟಕಕಾರನೊಬ್ಬನಿಗಾಗಿ ಕಾಯುತ್ತಿದ್ದರು. ಅಂತಹ ಒಬ್ಬ ನಾಟಕಕಾರನ ಅನುಪಸ್ಥಿತಿಯಿಂದ ಹಲವು ಅನುವಾದಗಳು, ರೂಪಾಂತರಗಳು ಹುಟ್ಟಿಕೊಂಡವು. ಹಲವಾರು ರಂಗತಂಡಗಳಿಗೆ ತಮ್ಮದೇ ಆದ



ನಾಟಕಕಾರರಿರಲಿಲ್ಲ. ಇಂತಹ ಹೊತ್ತಿನಲ್ಲಿ (೧೯೫೫) ವಿಜಯ್ ತೆಂಡೂಲ್ಕರ್ ತಮ್ಮ 'ಗೃಹಸ್ಥ' ಮತ್ತು 'ಶ್ರೀಮಂತ್' ಎಂಬ ನಾಟಕಗಳನ್ನು ಬರೆದರು. ಇದೇ ಹೊತ್ತಿನಲ್ಲಿ ಆಗತಾನೇ ಹುಟ್ಟಿದ ಹವ್ಯಾಸಿ ತಂಡಗಳಿಗಾಗಿ ವಿಜಯ್ ತೆಂಡೂಲ್ಕರ್ ಏಕಾಂಕಗಳನ್ನು ಬರೆದರು. ಆ ಹೊತ್ತಿನಲ್ಲಿ ವಿಜಯ್ ತೆಂಡೂಲ್ಕರ್ ಪೂರ್ವಗ್ರಹಗಳಿಲ್ಲದ, ಅಷ್ಟೇನೂ ಹೆಸರು ಮಾಡಿರದ ಪತ್ರಕರ್ತರಾಗಿದ್ದರು. ಜೊತೆಗೆ, ಹೊಸ ರಂಗ ಚಳುವಳಿಯ ಭಾಗವಾಗಿದ್ದರು. ಇಂಥ ಪರಿಸ್ಥಿತಿ ರಂಗತಂಡಗಳಿಗೆ ಉಪಯುಕ್ತವಾಗಿದ್ದಂತೆ, ತೆಂಡೂಲ್ಕರರ ರಂಗಭಾಷೆಯ ಬೆಳವಣಿಗೆಗೂ ಉಪಯುಕ್ತವಾಗಿತ್ತು. ಮರಾಠಿಯ ಇತರ ನಾಟಕಕಾರರಂತೆ ತೆಂಡೂಲ್ಕರ್ ಕಥನ ತರ್ಕವೊಂದನ್ನೇ ಪರಿಗಣಿಸಲಿಲ್ಲ. ಅವರಿಗೆ ನೇರವಾದ ನಾಟಕೀಯ ಕಲ್ಪನಾಶಕ್ತಿ ಇತ್ತು.

೧೯೫೦ರ ನಂತರ ಆಧುನಿಕ ಮರಾಠಿ ನಾಟಕದ ಬಗ್ಗೆ ಬಹಳ ಚರ್ಚೆ ನಡೆಯುತ್ತಿದ್ದರೂ, ಸರಳವಾದ ಉತ್ತಮ ಬಂಧದ ನಾಟಕಗಳು ರಂಗಕ್ಕೆ ಬಂದಿರಲಿಲ್ಲ. ಮರಾಠಿಯ ಡ್ರಾಯಿಂಗ್ ರೂಂ ನಾಟಕಗಳು ಸರಳ ಮತ್ತು ಮೆಲೋಡ್ರಾಮಾ ಆಗಿದ್ದು, ಸಂಗೀತಮಯತೆಯ ಹಿಡಿತದಿಂದ ಹೊರಗೆ ಬಂದಿರಲಿಲ್ಲ. ತೆಂಡೂಲ್ಕರರ 'ಶ್ರೀಮಂತ್' ಒಂದು ನೇರವಾದ ನಾಟಕ. ಇದರ ಬಂಧ ರಂಗ್ನೇಕರ್ ಅವರ ಕೃತಿಗಳನ್ನು ಜ್ಞಾಪಿಸುತ್ತದೆ. ಸಾಮಾಜಿಕ ಕಟ್ಟುಪಾಡುಗಳ ವಿರುದ್ಧ ಸಿಡಿದೇಳುವ ಶ್ರೀಧರನ ಪಾತ್ರ ತೆಂಡೂಲ್ಕರರ ನಾಟಕೀಯ ಒಳನೋಟಗಳನ್ನು ತಿಳಿಯಪಡಿಸುತ್ತದೆ. ಬಹಳ ಹಳಸಲಾದ ಅವಿವಾಹಿತ ತಾಯ್ತನದ ವಸ್ತುವನ್ನು ಮಾನವ ಸಂಬಂಧಗಳಲ್ಲಿರುವ ಸ್ವಾಮ್ಯಗುಣ ಹಾಗೂ ಬಗ್ಗುಬಡೆಯುವ ಕೌಟುಂಬಿಕ ವ್ಯವಸ್ಥೆಗಳ ಬಗ್ಗೆ ತಿಳಿಸಲು ಬಳಸುವುದರಿಂದ ಹೊಸ ಅರ್ಥಗಳು ಹೊಮ್ಮಿದವು.

ಇವರ ಮೊದಲ ಕೆಲವು ನಾಟಕಗಳಲ್ಲೇ ನಾಟಕೀಯ ಪರಿಣಾಮ ಉಂಟುಮಾಡಲು ಅತ್ಯಂತ ಕಡಿಮೆ ಪದಗಳ ಬಳಕೆಯಾಗುವುದನ್ನು ಕಾಣಬಹುದು. ಅಗತ್ಯವಿರುವೆಡೆ ಸಂಭಾಷಣೆಗಳಲ್ಲಿ ಬಿಗಿ ಇತ್ತು, ಜೊತೆಗೆ ಭಾವ ತೀವ್ರತೆಯೂ ಇತ್ತು. ಅವರ 'ಚಾರ್ ದಿವಸ್' ಮತ್ತು 'ಮಾಡಿ' ಏಕಾಂಕಗಳಲ್ಲಿ ನಿಗ್ರಹಗೊಂಡ ಭಾವನೆಗಳ ಜೊತೆಗೆ ಉಬ್ಬರದ ಅಭಿವ್ಯಕ್ತಿಗಳೆರಡೂ ಇವೆ. ಈ ಏಕಾಂಕಗಳಲ್ಲಿ ವಿವಿಧ ಶೈಲಿಗಳ ಬಳಕೆಯಿದೆ. ಇವರ, ಮನುಷ್ಯ ಸಂಬಂಧಗಳ ಬಗೆಗಿನ ಸೂಕ್ಷ್ಮ ಆಸಕ್ತಿ, ಇವರ ತಂತ್ರಗಳಿಗೆ ಪೂರಕವಾಗಿತ್ತು.

ಇವರ 'ಮಾನೂಷ್ ನವಾಚೆ ಭೇಟ್' ೧೯೫೬ರಲ್ಲಿ ದಾಮೂ ಕೇಂಕ್ರೆಯವರ ನಿರ್ದೇಶನದಲ್ಲಿ ರಂಗವೇರಿತು. ಆ ಕಾಲದಲ್ಲಿ ಈ ನಾಟಕ ಹಲವು ಪ್ರಶ್ನೆಗಳನ್ನು ಹುಟ್ಟುಹಾಕಿತು. ಸಾಂಪ್ರದಾಯಿಕ ವೇದಿಕೆಯಿಲ್ಲದೆ ನಾಟಕ ಮಾಡಬಹುದೇ, ಎಂಬುದು ಅಂತಹ ಪ್ರಶ್ನೆಗಳಲ್ಲಿ ಒಂದು. ಸಾಮಾನ್ಯ ಕೌಟುಂಬಿಕ ಜೀವನವನ್ನು ಬದುಕಲು ಹೆಣಗುವ ಮೂರು ಯುವಕರ ಬಿಕ್ಕಟ್ಟುಗಳನ್ನು ಈ ನಾಟಕವು ತೆರೆದಿಡುತ್ತದೆ. ಈ ಮೂವರಲ್ಲಿ ಒಬ್ಬನ ಮದುವೆ ನಿಶ್ಚಯವಾದಾಗ ಬಿಕ್ಕಟ್ಟು ಉದ್ಭವಿಸುತ್ತದೆ. ಈ ನಾಟಕ ಮುಕ್ತಾಯವಾದಾಗ ಬಿಕ್ಕಟ್ಟು ತಾತ್ಕಾಲಿಕವಾಗಿ ಶಮನಗೊಂಡಿರುತ್ತದೆ. ಸಾಮಾನ್ಯ ಮನುಷ್ಯನ ದಿನನಿತ್ಯದ ಬದುಕನ್ನು ದಿಟ್ಟವಾಗಿ ಚಿತ್ರಿಸುವ ಈ ನಾಟಕ, ಆ ಕಾಲದಲ್ಲಿ ಪ್ರೇಕ್ಷಕರಿಂದ ಸ್ವೀಕೃತವಾಗಲಿಲ್ಲ. ಆದರೆ, ಈಗಲೂ ಈ ನಾಟಕ ಜನಮನದಲ್ಲಿ ಉಳಿದಿದೆ. ಈ ನಾಟಕದಲ್ಲಿ ತೆಂಡೂಲ್ಕರ್ ಮೂರು ಅಂಕಗಳ ಸಂಪ್ರದಾಯವನ್ನು ಮುರಿದಿದ್ದಾರೆ. ಅನುಭವಕ್ಕೆ ಅನಿವಾರ್ಯವಾದ ವಿಸ್ತಾರ ಮಾತ್ರ ಈ ನಾಟಕಕ್ಕಿದೆ.

ಮುಂದಿನ ದಿನಗಳಲ್ಲಿ ಕೊಟ್ಟ ಸಂದರ್ಶನವೊಂದರಲ್ಲಿ ತೆಂಡೂಲ್ಕರ್ ಹೀಗೆ ಹೇಳುತ್ತಾರೆ : ''ಯಾವ ಮಾಧ್ಯಮವೂ ನನ್ನ ಪ್ರಯತ್ನಗಳಿಗೊಂದು ಮಿತಿ ಎಂದು ನಾನಂದು ಕೊಂಡಿಲ್ಲ. ಈ ಭೂಮಿಯ ಮೇಲಿನ ಯಾವುದೇ ವಸ್ತುವಾದರೂ ಸರಿಯೆ, ಅದು ನಾಟಕೀಯವಾಗಿರುತ್ತದೆ. ನಾಟಕಕಾರನಿಗೆ ಕೌಶಲ್ಯ ಮತ್ತು ಒಳನೋಟಗಳಿರ ಬೇಕಷ್ಟೇ... ಮಾಧ್ಯಮವು ತಂತ್ರವನ್ನು ಒಳಗೊಳ್ಳಬೇಕು. ಆಗ ಅದು ಕಲಾವಿದನಿಗೆ ತೊಂದರೆ ಕೊಡುವುದಿಲ್ಲ. ಇರುವ ಒಂದೇ ಒಂದು ಸವಾಲೆಂದರೆ ವಸ್ತುವಿನದು''.

ಈ ಹಂತದಲ್ಲಿ, ನೀಟಾದ ಪೊಟ್ಟಣದಂತಿರುವ ನಾಟಕವನ್ನು ಅಪೇಕ್ಷಿಸುವ ಪ್ರೇಕ್ಷಕರ ಬಗ್ಗೆ ತೆಂಡೂಲ್ಕರ್ ಅವರಿಗೆ ಅಸಮಾಧಾನವಿತ್ತು. ಅವರು, ಹಲವು ಸಾಧ್ಯತೆ ಗಳಿಗೆ ತೆರೆದ ಮುಕ್ತಾಯವಿರುವ ಅಥವಾ ಪ್ರೇಕ್ಷಕರನ್ನು ತಬ್ಬಿಬ್ಬುಗೊಳಿಸುವ ಮುಕ್ತಾಯವಿರುವ ನಾಟಕ ಬರವಣಿಗೆಯ ದಾರಿಗಳನ್ನು ಶೋಧಿಸುತ್ತಿದ್ದರು. ತನ್ನ ಪಶ್ಚಿಮದ ಸಮಕಾಲೀನರಂತೆ ಇವರು ಹಿಂಸಾತ್ಮಕ ಅಥವಾ

---

ತೆಂಡೂಲ್ಕರ್ ಬರೀ ನಾಟಕಕಾರರಷ್ಟೇ ಅಲ್ಲ, ಅವರೊಬ್ಬ ಅಂಕಣಕಾರರೂ ಹೌದು. 'ಮಾನೂಸ್' ಪತ್ರಿಕೆಯಲ್ಲಿ ಅವರು ಬರೆದ 'ರಾತ್‌ರಾನಿ' ಅಂಕಣ ಮಹಾರಾಷ್ಟ್ರದ ಸಾಹಿತ್ಯಿಕ ಅಂಕಣಗಳಿಗೇ ಒಂದು ಮಹತ್ತರ ಕೊಡುಗೆ. ಇವರು ಗಿರೀಶ್ ಕಾರ್ನಾಡರ 'ತುಘಲಕ್' ಹಾಗೂ ಮೋಹನ್ ರಾಕೇಶರ 'ಆಧೇ ಅಧೂರೆ' ನಾಟಕಗಳನ್ನು ಮರಾಠಿಗೆ ಅನುವಾದಿಸಿದ್ದಾರೆ. ಇದೇ ಮೇ ತಿಂಗಳಲ್ಲಿ ಅವರು ತೀರಿಕೊಂಡರು.

ಅಸಂಗತ ಹಾದಿಯಲ್ಲಿ ಕ್ರಮಿಸಲಿಲ್ಲ. ಇವರ 'ಚಿಮಣಾಚೆ ಘರ್ ಹೋತೆ ಮೆನಾಚೆ' (೧೯೬೦) ನಾಟಕವು ಅದರ ವೈನೋದಿಕ ಅಂಶಗಳಿಂದಲೂ, ನಾದಪೂರ್ಣ ಅಂಶಗಳ ಸಮ್ಮಿಶ್ರಣದಿಂದಲೂ ಪ್ರೇಕ್ಷಕರನ್ನು ತಬ್ಬಿಬ್ಬುಗೊಳಿಸಿತು. ಈ ನಾಟಕ ಎರಡು ಮನುಷ್ಯಧೋರಣೆಗಳನ್ನು ಅಭಿವ್ಯಕ್ತಿಗೊಳಿಸುತ್ತದೆ. ಒಂದು - ಸ್ವಂತಕ್ಕೆ ಮತ್ತು ಪ್ರೀತಿಸಿದವರ ಸುತ್ತ ಪ್ರೀತಿ ಹಾಗೂ ಸಂತಸವನ್ನು ಹೆಣೆಯುವಂತಹದು; ಇನ್ನೊಂದು -ಪ್ರೀತಿ ಮತ್ತು ಸಂತಸಗಳು ಕಳೆದುಹೋದರೆ ಅದರಿಂದುಂಟಾಗುವ ದುಃಖಕ್ಕಾಗಿ ಹೆದರುವ ಧೋರಣೆ. ಈ ನಾಟಕದ ಮುನ್ನುಡಿಯಲ್ಲಿ ನಾಟಕಕಾರರು ಹೀಗೆ ಹೇಳುತ್ತಾರೆ : ''ಸಂತಸವೆನ್ನುವುದು ಒಂದು ರೀತಿಯ ಅರಿವು... ಇಂದು ನಿಜವಾದ ಸಂತಸ ಒಂದು ಮರೀಚಿಕೆಯಾಗಿದೆ. ಆದ್ದರಿಂದ ಮನುಷ್ಯ ಖೋಟಾ ಸಂತಸವನ್ನು ಒಪ್ಪಿಕೊಳ್ಳುತ್ತಾನೆ. ಇಲ್ಲವೆ ಸಂತಸದ ಭ್ರಮೆಯನ್ನು ಸೃಷ್ಟಿಸಿಕೊಳ್ಳುತ್ತಾನೆ.''



'ಕಲ್ಯಾನ್‌ಚೀ ಶಾಲಾ' (೧೯೬೩)ಎಂಬ ತಮ್ಮ ನಾಟಕದಲ್ಲಿ ತೆಂಡೂಲ್ಕರ್ ಸಂದರ್ಭಗಳನ್ನು ಉಪಯೋಗಿಸಿಕೊಂಡು ಜಯ ಸಾಧಿಸಬೇಕೆನ್ನುವ ಮಧ್ಯಮ ವರ್ಗದ ದುರಂತವನ್ನು ಪ್ರಹಸನದ ರೀತಿಯಲ್ಲಿ ಚಿತ್ರಿಸಿದ್ದಾರೆ. ನಾಟಕದ ಮುಖ್ಯಪಾತ್ರ ಬಾಳ್ಯಾ. ಪರೀಕ್ಷೆಗಾಗಿ ತಯಾರಿ ನಡೆಸಲು ಶಾಂತಮಯ ಸ್ಥಳವೊಂದರ ಹುಡುಕಾಟದಲ್ಲಿದ್ದಾನೆ. ಅವನು ಮತ್ತು ಅವನ ಗೆಳೆಯ ಸೇರಿ ಒಂದು ಸ್ಥಳವನ್ನು ವ್ಯವಸ್ಥೆ ಮಾಡಿಕೊಳ್ಳುತ್ತಾನೆ. ಆದರೆ ಅದು ಅತ್ಯಂತ ಗಲಾಟೆಯ ಜಾಗವಾಗಿರುತ್ತದೆ. ಈ ಪರಿಸ್ಥಿತಿಯನ್ನು ಎದುರಿಸುವ ಬಾಳ್ಯಾನ ಸ್ಥಿತಿ ದಾರುಣವಾಗಿದ್ದರೂ ಇಡೀ ದೃಶ್ಯ ಹಾಸ್ಯಮಯವಾಗಿ ಚಿತ್ರಿತವಾಗಿದೆ. ನಾಟಕಕಾರನ ದೃಷ್ಟಿಯಿಂದ ಮುಖ್ಯವಾದ ಸಣ್ಣ ಘಟನೆಯೊಂದು ಈ ನಾಟಕದಲ್ಲಿದೆ. ಬಾಳ್ಯಾ ಉತ್ಸಾಹದಿಂದ ತನ್ನ ಭವಿಷ್ಯದ ಕನಸುಗಳನ್ನು ಹೊರಗೆಡುಹುತ್ತಿರುವಾಗ ಅಲ್ಲೊಬ್ಬ ಮನುಷ್ಯ ನಿರ್ಭಾವುಕನಾಗಿ ಬಾಳ್ಯಾನ ಪ್ರತಿ ಮಾತಿಗೂ ಸರಿ-ಮುಂದೇನು ಎನ್ನುತ್ತಾನೆ. ಅವನ ಭಾವರಹಿತ ದನಿ ನಮ್ಮನ್ನು ಅಧೀರರನ್ನಾಗಿಸುತ್ತದೆ. ಇದು ಅಸಂಗತ ಮಾದರಿಯ ಸಂಭಾಷಣೆಯನ್ನು ನೆನಪಿಸುತ್ತದೆ.

'ಮಧಾಲ್ಯಾ ಭಿಂತಿ' (೧೯೫೮) ಮತ್ತು 'ಏಕ್ ಹಾತ್ತಿ ಮುಲ್ಗಿ' (೧೯೬೭) ಎರಡೂ ಮಧ್ಯವಯಸ್ಸಿನ ಪ್ರೇಕ್ಷಕರಿಗೆ ಇಷ್ಟವಾಗುವ ಫ್ಯಾಮಿಲಿ ಡ್ರಾಮಾಗಳು. ಆದರೂ, ಅಧಿಕಾರ ಮತ್ತು ವ್ಯಕ್ತಿಗಳ ಬಗ್ಗೆ ಇವರಿಗಿರುವ ಕಾಳಜಿ ಮತ್ತು ವ್ಯಕ್ತಿಯ ತುಳಿತದ ವಸ್ತು, ಈ ನಾಟಕಗಳಲ್ಲೂ ಸ್ಪಷ್ಟವಾಗಿದೆ. ಮೊದಲ ನಾಟಕದಲ್ಲಿ ಬಿಕ್ಕಟ್ಟು ಇರುವುದು ಅತ್ತೆ ಮತ್ತು ಸೊಸೆಯರ ನಡುವೆಯಾದರೆ, ಎರಡನೆಯದರಲ್ಲಿ ಅದು ಮಾವ ಮತ್ತು ಸೊಸೆಯ ನಡುವೆ ಇದೆ. ಈ ಎರಡು ಸಂದರ್ಭಗಳಲ್ಲೂ ಇದು ಅಹಂಕೇಂದ್ರಿತ ಕೌಟುಂಬಿಕ ವ್ಯವಸ್ಥೆಯಿಂದ ಉದ್ಭವಿಸುತ್ತದೆ. 'ಏಕ್ ಹಾತ್ತಿ ಮುಲ್ಗಿ' ನಾಟಕ ತನ್ನ ಸಂಘರ್ಷದ ಚಿತ್ರಣದಲ್ಲಿ ಅದ್ವಿತೀಯವೆನಿಸಿದೆ.

ಮನೆಯ ಸೊಸೆ ಮಂಗಳಾ ದುಡಿಮೆ, ಪ್ರಾಮಾಣಿಕತೆ, ನೈತಿಕತೆಗಳಲ್ಲಿ ನಂಬಿಕೆಯಿಟ್ಟವಳು, ತತ್‌ಕ್ಷಣದ ಲಾಭಗಳಿಗೆ ಮನಸೋಲದವಳು. ಅವಳ ಮಾವ ಮುಗ್ಧರನ್ನು ವಂಚಿಸಿ, ಲಾಭಕ್ಕಾಗಿ ಹೊಂಚುಹಾಕುತ್ತ, ಮನೆಯ ಉಸ್ತುವಾರಿ ನೋಡಿಕೊಳ್ಳುತ್ತಿರುವವನು. ಸೊಸೆ ಮನೆಯ ಜವಾಬ್ದಾರಿಯನ್ನು ಹೊತ್ತುಕೊಂಡಾಗ, ಆಕೆಗೆ ಅತ್ಯಂತ ಪರಿಶ್ರಮವಿದ್ದರೂ ಸೋಲು ಕಾಣುತ್ತಾಳೆ. ಕುಟುಂಬದವರ ದುಂದುವೆಚ್ಚಕ್ಕೆ ಅವಳು ಹಣ ಒದಗಿಸದಾದಾಗ ಇಡೀ ಕುಟುಂಬವೇ ಅವಳ ವಿರುದ್ಧ ತಿರುಗಿ ಬೀಳುತ್ತದೆ. ಒಂದು ರೀತಿಯ ಖಿನ್ನತೆಯಲ್ಲಿ ಸೊಸೆ ಮಾವನಿಗೆ ಮನೆಯ ಜವಾಬ್ದಾರಿಯನ್ನು ಪುನಃ ವಹಿಸಿಕೊಡುತ್ತಾಳೆ. ಇಲ್ಲಿ ನಾಟಕಕಾರ. ತೆಂಡೂಲ್ಕರ್ ಕೇವಲ ಒಬ್ಬ ಪ್ರಾಮಾಣಿಕ ಹುಡುಗಿಯ ಕಥೆ ಹೇಳುತ್ತಿಲ್ಲ; ಆತ್ಮರಹಿತ ಮಾನವ ಸಮೂಹದಲ್ಲಿ ಒಬ್ಬ ನೈತಿಕವ್ಯಕ್ತಿಯು ಹೇಗೆ ಅಸಹಾಯಕನಾಗುತ್ತಾನೆ ಎಂಬುದನ್ನು ಹೇಳುತ್ತಾರೆ; ಪುರುಷಪ್ರಧಾನ ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಮಹಿಳೆಯರ ಪರಿಸ್ಥಿತಿ ಏನೆಂಬುದನ್ನು ಪರಿಣಾಮಕಾರಿಯಾಗಿ ಮನಗಾಣಿಸುತ್ತಾರೆ. ಇಲ್ಲಿ ಮಂಗಳಾಳ ಸೋಲಿನಲ್ಲಿ ನಾವು ಸಮಾಜ ಮತ್ತದರ ಸಂಪ್ರದಾಯಗಳಿಗೆ ಶರಣಾಗದ ಮಹಿಳೆಯರ ಏಕಾಕಿತನ ಹಾಗೂ ಪರಾಧೀನತೆಯನ್ನು ಕಾಣುತ್ತೇವೆ.

ತೆಂಡೂಲ್ಕರ್ ಅವರ ನಾಟಕಗಳಲ್ಲಿ ಮನೋವೈಜ್ಞಾನಿಕ ವಿಶ್ಲೇಷಣೆ ಇರುತ್ತದೆ. ನಾಟಕದೊಳಗಿನ ನಾಟಕವನ್ನು ತೆಂಡೂಲ್ಕರರ 'ಶಾಂತತಾ ಕೋರ್ಟ್ ಚಾಲೂ ಅಹೆ' (೧೯೬೮) ನಾಟಕದಲ್ಲಿ ನೋಡಬಹುದು. ಈ ನಾಟಕ ವಿವಿಧ ಭಾರತೀಯ ಭಾಷೆಗಳಿಗೆ ಅನುವಾದವಾಗಿದೆ ಮತ್ತು ವಿವಿಧೆಡೆ ಪ್ರಯೋಗಗೊಂಡಿದೆ. (ಕನ್ನಡದಲ್ಲಿ 'ಸದ್ದು, ವಿಚಾರಣೆ ನಡೆಯುತ್ತಿದೆ' ಎಂಬ ಹೆಸರಿನಲ್ಲಿ ಪ್ರಯೋಗಗೊಂಡಿದೆ – ಅನುವಾದಕಿ)

ಈ ನಾಟಕದಲ್ಲಿ ಮತ್ತೊಂದು ನಾಟಕವಿದೆ. ಒಳಗಿನ ನಾಟಕ - ಒಂದು ಅಣಕದ ನ್ಯಾಯಾಲಯ. ನ್ಯಾಯಾಲಯದ ಒಳಗಡೆಯ ವಾಸ್ತವತೆ ಒಂದಾದರೆ, ಪಾತ್ರಗಳು ನ್ಯಾಯಾಲಯದ ಹೊರಗಡೆ ಪರಸ್ಪರ ಚರ್ಚಿಸುವುದು ಇನ್ನೊಂದು ವಾಸ್ತವತೆ. ಮಿಸ್ ಬೆಣಾರೆ ಇಲ್ಲಿ ಆರೋಪಿ. ಆಕೆ ಗರ್ಭಪಾತ ಮಾಡಿಸಿಕೊಂಡು ಅಜಾತ ಶಿಶುವಿನ ಹತ್ಯೆ ಮಾಡಿರುವ ಆರೋಪಕ್ಕೆ ಒಳಗಾಗಿದ್ದಾಳೆ. ಆಕೆ ಒಂದು ಶಾಲೆಯಲ್ಲಿ ಅಧ್ಯಾಪಕಿ. ಅವಳೂ ಲವಲವಿಕೆಯ, ಹಾಸ್ಯ ಪ್ರವೃತ್ತಿಯ ವ್ಯಕ್ತಿಯಾಗಿ ಕಾಣುತ್ತಾಳೆ. ಇದು ಅವಳ ಮುಖವಾಡವೇ ? ಅಥವಾ ತಾನು ಹಾಗೆ ಕಾಣಿಸಿಕೊಳ್ಳಲು ಪ್ರಯತ್ನಿಸುತ್ತಿರುವಳೇ ? ಕೋರ್ಟಿನಲ್ಲಿ ಎಲ್ಲ ಪಾತ್ರಗಳೂ ಆಕೆಯನ್ನು ಎಷ್ಟು ತೀವ್ರವಾಗಿ ನಿಂದಿಸುತ್ತಾರೆಂದರೆ, ಇದು ನಿಜವೇ ಅಥವಾ ಅಣಕದ ನ್ಯಾಯಾಲಯವೇ ಎಂಬ ಅನುಮಾನ ಬರುತ್ತದೆ. ಮಿಸ್ ಬೆಣಾರೆ ಒಂದೋ ಸಮರ್ಥಿಸಿಕೊಳ್ಳಬೇಕು. ಇಲ್ಲವೇ ಕ್ಷಮೆ ಕೇಳಬೇಕು. ಇಂತಹ ಪರಿಸ್ಥಿತಿ ಉದ್ಭವಿಸುತ್ತದೆ. ನಾಟಕದ ಪಾತ್ರಗಳಲ್ಲಿ ಹೆಚ್ಚಿನವು ತಮ್ಮ ನಿಜ ಜೀವನದಲ್ಲಿ ಸೋಲು ಕಂಡವರು ಈಗ ಅಣಕದ ನ್ಯಾಯಾಲಯದಲ್ಲಿನ ತಮ್ಮ ಪಾತ್ರಗಳಿಂದ ಉಬ್ಬಿಬಿಟ್ಟಿದ್ದಾರೆ.

ಇವರು ಮಿಸ್ ಬೆಣಾರೆಯ ಮೇಲೆ ಅಜಾತ ಶಿಶುವಿನ ಹತ್ಯೆಯ ಆರೋಪ ಹೊರಿಸುವಾಗ, ಸಮಾಜದ ಮನಃಸಾಕ್ಷಿಗಳಾಗುವ ಪಾತ್ರ ನಿರ್ವಹಿಸುತ್ತಿದ್ದಾರೆ. ನಿಧಾನವಾಗಿ ಅವರೆಲ್ಲರ ಮುಖಗಳು ತಮ್ಮ ಬೇಟೆಗಾಗಿ ಕಾಯುತ್ತಿರುವ ಕಾಡುಮೃಗಗಳಂತಾಗುತ್ತವೆ. ಶಿಕ್ಷಿತ ಗಂಡಸರು ಮತ್ತು ಹೆಂಗಸರಲ್ಲಿರುವ ಈ ಗುಪ್ತ ಹಿಂಸೆ, ತೆಂಡೂಲ್ಕರರ ಮುಂದಿನ ನಾಟಕಗಳಲ್ಲಿ ಮತ್ತೆ ಮತ್ತೆ ಮರುಕಳಿಸುತ್ತದೆ. ಇದೆಲ್ಲ ನಡೆಯುವಾಗ ಮಿಸ್ ಬೆಣಾರೆ ಒಂದು ಮಾತನ್ನೂ ಕೋರ್ಟಿನೆದುರಿಗೆ ಆಡುವುದಿಲ್ಲ. ಆದರೆ, ರಂಗದಲ್ಲಿ ಆಕೆಯದೊಂದು ಸ್ವಗತವಿದೆ. ಈ ಸ್ವಗತದಲ್ಲಿ ಹಲವು ಛಾಯೆಗಳಿವೆ. ಆಕೆ ಪ್ರಪಂಚವನ್ನು ಪ್ರೀತಿಸುತ್ತಾಳೆ; ತನ್ನ ದೇಹವನ್ನು ಪ್ರೀತಿಸುತ್ತಾಳೆ; ಪ್ರೀತಿಗಾಗಿ ಕೊಡುವುದರಲ್ಲೂ, ತೆಗೆದುಕೊಳ್ಳುವುದರಲ್ಲೂ ಸುಖ ಪಡೆಯಬಲ್ಲ ಭಾವನಾತ್ಮಕ ಶಕ್ತಿಯನ್ನು ಹೊಂದಿದ್ದಾಳೆ. ಆದರೆ, ಆಕೆಯ ಬದುಕಿನಲ್ಲಿ ಪ್ರವೇಶ ಪಡೆದಿರುವ ಎರಡು ಗಂಡುಗಳೂ ಕ್ಷಣಿಕ ಆಸಕ್ತಿಯುಳ್ಳವರು. ಅವರಿಗೆ ಸಂಬಂಧಗಳೂ ಅರ್ಥವಾಗುವುದಿಲ್ಲ, ಬದುಕಿನ ಎಲ್ಲ ಬಣ್ಣಗಳ ಪರಿಚಯವಿಲ್ಲ.




'ಶಾಂತತಾ ಕೋರ್ಟ್ ಚಾಲೂ ಆಹೆ' ನಂತರ 'ಗಿಧಾಡೆ' (೧೯೭೧) ಬರೆದರು. ತೆಂಡೂಲ್ಕರರ ಪ್ರಕಾರ ಇದು ಹದ್ದುಗಳ ನಡುವೆ ಸಿಕ್ಕಿಕೊಂಡ ಗುಬ್ಬಚ್ಚಿಯ ಕಥೆ. 'ಶಾಂತತಾ...' ಕೂಡ, ಒಂದು ಗುಂಪಿನ ನಡುವೆ ಸಿಕ್ಕಿಹಾಕಿಕೊಂಡ ವ್ಯಕ್ತಿಯ ಚಿತ್ರಣ ನೀಡುತ್ತದೆ. ಆದರೆ, 'ಗಿಧಾಡೆ', 'ಶಾಂತತಾ...' ಗಿಂತ ಭಿನ್ನವಾಗಿದೆ. ಗಿಧಾಡೆಯ ಪಾತ್ರಗಳು ಅಶ್ಲೀಲ ಭಾಷೆಯಿಂದ, ವಿಚಿತ್ರ ನಡವಳಿಕೆಯಿಂದ ಪ್ರೇಕ್ಷಕರನ್ನು ದಿಗ್ಭ್ರಮೆಗೊಳಿಸುತ್ತವೆ. ಒಬ್ಬ ವಿಧುರ, ಇಬ್ಬರು ಸಹೋದರರು, ಒಬ್ಬ ತಂಗಿ ಇರುತ್ತಾರೆ. ಇವರೆಲ್ಲರಿಗೂ ತೀವ್ರವಾದ ಹಣದ ದಾಹ. ಎಲ್ಲರಲ್ಲೂ ಕ್ರೌರ್ಯ ಇದೆ. ಪ್ರಾಣಿಗಳಂತೆ ಕಚ್ಚಾಡಿ ಒಬ್ಬರನ್ನೊಬ್ಬರು ಘಾಸಿಗೊಳಿಸುತ್ತಾರೆ. ಒಬ್ಬ ಸಹೋದರನ ಹೆಂಡತಿ ರಮಾಗೆ ಸಹಜವಾದ ಬದುಕನ್ನು ಬದುಕಬೇಕೆಂಬ ಆಸೆ. ಅವಳು ಗಂಡನ ಕಿರಿಯ ಸಹೋದರನೊಂದಿಗೆ ಮಾತ್ರ ಸಂವಾದ ಮಾಡಬಲ್ಲಳು. ಆ ಕಿರಿಯ ಸಹೋದರ ಕವಿ. ಅವನು ಮನೆಯ ಔಟ್‌ಹೌಸಿನಲ್ಲಿ ವಾಸವಾಗಿರುತ್ತಾನೆ. ಇಡೀ ಕುಟುಂಬ ವಿನಾಶದತ್ತ ಸಾಗುತ್ತಿದ್ದರೂ, ರಮಾಳಿಗೊಂದು ಮಗುವಾಗಲೆಂದು ಕಾಯುತ್ತಿದೆ. ಆದರೆ, ಹದ್ದುಗಳ ನಡುವೆ ಬದುಕೆಲ್ಲಿ ಚಿಗುರೀತು ? ರಮಾ ಕಿರಿಯ ಸಹೋದರನಲ್ಲಿಗೆ ಹೋಗುತ್ತಾಳೆ. ಅಲ್ಲಿ ಅವಳು ಗರ್ಭಿಣಿಯಾದಾಗ ಅವಳ ಗಂಡ ಗರ್ಭಪಾತ ಮಾಡಿಸುತ್ತಾನೆ. ಶ್ರೀರಾಮ ಲಾಗೂ ಹಾಗೂ ಏಕನಾಥ್ ಹಟ್ಟಂಗಡಿಯವರು ಮುಖ್ಯಪಾತ್ರಗಳಲ್ಲಿ ನಟಿಸಿದ ಈ ನಾಟಕ ಅಸಾಮಾನ್ಯ ಪ್ರಭಾವ ಬೀರಿತು.

ಇದು ಸೆನ್ಸಾರ್ ಬೋರ್ಡ್‌ನಿಂದ ಹಿಡಿದು, ರಂಗಭೂಮಿಯ ಕೆಲವು ಸಂಪ್ರದಾಯಸ್ಥರ ಬಹಿಷ್ಕಾರಕ್ಕೆ ಒಳಗಾಯಿತು.

೧೯೭೨ರಲ್ಲಿ 'ಸಖಾರಾಮ್ ಬೈಂಡರ್' ರಚಿಸಿದರು. ಈ ನಾಟಕ ಮನುಷ್ಯನ ಹಿಂಸೆ ಮತ್ತು ಭಯೋತ್ಪಾದಕತೆಗಳ ಒಂದು ಅಧ್ಯಯನ ಮತ್ತು ಅವಕಾಶ ಸಿಕ್ಕಾಗಲೆಲ್ಲಾ ಮನುಷ್ಯರು ಒಬ್ಬರನ್ನೊಬ್ಬರು ಸದೆಬಡಿಯಲು ಹೇಗೆ ಪ್ರಯತ್ನಿಸುತ್ತಾರೆ ಎಂಬುದರ ಚಿತ್ರಣ. ಸಖಾರಾಮ್, ಚಂಪಾ, ಲಕ್ಷ್ಮಿ ಈ ಮೂರು ಪಾತ್ರಗಳಲ್ಲಿ ಇದು ವ್ಯಕ್ತವಾಗಿದೆ. ಚಂಪಾ ಸಖಾರಾಮ್ ತಂದಿಟ್ಟುಕೊಂಡಿರುವ ಕಾಮೋದ್ದೀಪಕ; ಬೀದಿ ಹೆಂಗಸು. ಲಕ್ಷ್ಮಿ ಗಂಡನ ಪ್ರೀತಿಯನ್ನು ಕಳೆದುಕೊಂಡಿರುವ ಮಕ್ಕಳಿಲ್ಲದ ಹೆಂಗಸು. ಇಬ್ಬರೂ ತಮ್ಮ ಅಸ್ತಿತ್ವಕ್ಕಾಗಿ ಹೋರಾಡುತ್ತಿದ್ದಾರೆ. ಸಖಾರಾಮ್, ಚಂಪಾಳಿಂದ ಆಕರ್ಷಿತನಾಗಿದ್ದರೂ ಲಕ್ಷ್ಮಿಗೆ ಅವನ ಮೇಲೆ ವಿಚಿತ್ರವಾದ ಹಿಡಿತವಿದೆ. ಸಖಾರಾಮನಿಗೆ ತನ್ನದೇ ಆದ ಸಂಹಿತೆ ಇದೆ. ಅವನಿಗೆ ಯಾವ ಗೊಂದಲವೂ ಬೇಡ. ದೇಹವೆಂಬುದು ದೇವರ ವರದಾನವೆಂದು ಆತ ನಂಬುತ್ತಾನೆ. ಲಕ್ಷ್ಮಿಯ ಆಗಮನ ಸಖಾರಾಮ-ಚಂಪಾರ ಸಂಬಂಧಗಳಲ್ಲಿ ವ್ಯತ್ಯಯವನ್ನು ತರುತ್ತದೆ.

ಎಲ್ಲರೂ ಗುರುತಿಸುವಂತೆ, ಇಲ್ಲಿ ಚಂಪಾ ಸೆಕ್ಸ್ ಸಿಂಬಲ್ ಅಲ್ಲ. ಅವಳು ತನ್ನ ಬಾಲ್ಯದಿಂದಲೇ ಬಲಿಯಾದ ಒಂದು ಬಿಕರಿ ವಸ್ತು. ಅವಳು ಮದ್ಯವಿಲ್ಲದೇ ಸಂಭೋಗ ಮಾಡಲಾರಳು. ಆದರೆ, ಲಕ್ಷ್ಮಿ ಸಂಪ್ರದಾಯಸ್ಥೆ, ದೈವಭಕ್ತಿ ಉಳ್ಳವಳು, ತನ್ನ ಲೈಂಗಿಕ ಆಕರ್ಷಣೆಯನ್ನೂ ತೋರಬಲ್ಲಳು. ನಾಟಕದ ಕೊನೆಯಲ್ಲಿ, ಸಖಾರಾಮ್ ಚಂಪಾಳನ್ನು ಕೊಲ್ಲುತ್ತಾನೆ. ಲಕ್ಷ್ಮಿ ಇದನ್ನು ಪ್ರಚೋದಿಸುತ್ತಾಳೆ. ತನ್ನ ಕ್ರಿಯೆಯಿಂದ ಅವನೇ ದಿಗ್ಭ್ರಾಂತ ನಾದಾಗ, ಲಕ್ಷ್ಮಿ ಆತನ ಕ್ರಿಯೆಯನ್ನು ಸಮರ್ಥಿಸುತ್ತಾಳೆ. ಇಲ್ಲಿ, ''ಜೀವನದಲ್ಲಿ ಪವಿತ್ರಾತ್ಮರಾಗಿ, ಇಮೇಜ್ ಇಟ್ಟು ಕೊಂಡಿರುವ ಜನರಿಗಿಂತ ಜೀವನದಲ್ಲಿ ಕೆಳಗೆ ಬಿದ್ದವರು ನನ್ನ ಆಸಕ್ತಿಯನ್ನು ಕೆರಳಿಸುತ್ತಾರೆ'' ಎಂಬ ತೆಂಡೂಲ್ಕರರ ಮಾತು ನೆನಪಾಗುತ್ತದೆ.

'ಘಾಶೀರಾಮ್ ಕೊತ್ವಾಲ್'(೧೯೭೨) ಒಂದು ಸಂಗೀತ ನಾಟಕ. ವಾಸ್ತವವಾದಕ್ಕೆ ಮೀರಿದ ನಾಟಕೀಯ ಅಭಿವ್ಯಕ್ತಿ ಇದರಲ್ಲಿದೆ. 'ಘಾಶೀರಾಮ್' ಒಂದು ಪರಿಪೂರ್ಣ ರಂಗಭೂಮಿ ಪ್ರಯೋಗ. ಮನುಷ್ಯದೇಹಗಳನ್ನೇ ರಂಗಸಜ್ಜಿಕೆಯಾಗಿ ಬಳಸುವ ತಂತ್ರ ಇದರಲ್ಲಿದೆ.

ಪೇಶ್ವೆಗಳ ಕೊನೆಯ ದಿನಗಳ ಚಿತ್ರಣ ಇದರಲ್ಲಿದೆ. ಆದರೆ, ಇದು ಐತಿಹಾಸಿಕ ನಾಟಕವಲ್ಲ. ನಾನಾ ಫಡ್ನವೀಸ್ ಥರದವರೂ ಹೇಗೆ ಕ್ಷಯಿಸುತ್ತಾರೆಂಬುದು ಇದರ ವಸ್ತು. ಅಧಿಕಾರ ಹೇಗೆ ಮನುಷ್ಯನಲ್ಲಿ ರಾಕ್ಷಸನ ಆವಾಹನೆ ಯಾಗುವಂತೆ ಮಾಡುತ್ತದೆ. ಅದೂ ಒಬ್ಬ ಸಾಮಾನ್ಯ ಸಂಸಾರಿಯಲ್ಲಿ ಮತ್ತು ಹೇಗೆ ಫ್ಯೂಡಲ್ ಸಮಾಜ ಮಹಿಳೆಯರನ್ನು ಶೋಷಣೆ ಮಾಡುತ್ತದೆ ಎಂಬುದನ್ನು ನಾಟಕ ತೆರೆದಿಡುತ್ತದೆ. ಈ ನಾಟಕ, ಜಬ್ಬಾರ್ ಪಟೇಲರ ನಿರ್ದೇಶನದಲ್ಲಿ ಪ್ರಪಂಚದಾದ್ಯಂತ ಪ್ರದರ್ಶನಗೊಂಡಿದೆ.

ತೆಂಡೂಲ್ಕರ್ ನಾಟಕಕಾರರಾಗಿ ಎಂದೂ ವಿರಮಿಸಲಿಲ್ಲ. 'ಘಾಶೀರಾಮ್' ನಂತರ, ಸಮಕಾಲೀನ ವಸ್ತುಗಳನ್ನೊಳಗೊಂಡ ಎರಡು ವಾಸ್ತವವಾದೀ ನಾಟಕಗಳನ್ನು ರಚಿಸಿದರು. ಕಮಲ (೧೯೮೧) ಮತ್ತು ಕನ್ಯಾದಾನ (೧೯೮೩)- ಇವು ತೆಂಡೂಲ್ಕರರ ಬಹುಮುಖ್ಯ ನಾಟಕಗಳು. 'ಕಮಲ' ಸತ್ಯ ಘಟನೆಯನ್ನಾಧರಿಸಿದ ನಾಟಕ. ಇದು ಸಾಂಪ್ರದಾಯಿಕ ನಾಟಕದಂತಿರದೆ, ಸತ್ಯಘಟನೆಯಲ್ಲಿ ಹಲವು ಅರ್ಥಗಳನ್ನು ತೆಂಡೂಲ್ಕರರು ಹುಡುಕಿದ್ದಾರೆ. ಆಧುನಿಕ ಹೆಂಗಸಿನ ವೈವಾಹಿಕ ನೆಲೆಯ ಕುರಿತು ಈ ನಾಟಕವನ್ನು ಹೆಣೆಯಲಾಗಿದೆ. ಇಲ್ಲಿ ತನಿಖಾ ವರದಿಗಳ ಹಿಂದಿನ ಉದ್ದೇಶಗಳನ್ನೂ ಅಧ್ಯಯನ ಮಾಡಲಾಗಿದೆ. ಶೋಷಣೆಯ ವಿವಿಧ ಮಜಲುಗಳನ್ನು ಚಿತ್ರಿಸಲಾಗಿದೆ. ಇದರಲ್ಲಿ ಆಧುನಿಕ ಹೆಣ್ಣಿನ ಬಗ್ಗೆ ಮರುಪರಿಶೀಲನೆ ಆಗಬೇಕೆಂಬ ಒತ್ತಾಸೆಯಿದೆ.

'ಕನ್ಯಾದಾನ' ಒಂದು ಸಂಕೀರ್ಣ ನಾಟಕ. ಒಂದು ಕುಟುಂಬದ ಸಾಂಸ್ಕೃತಿಕ ಮತ್ತು ಭಾವನಾತ್ಮಕ ಸ್ಥಿತ್ಯಂತರಗಳನ್ನು ಇದು ಚಿತ್ರಿಸುತ್ತದೆ. ಇದು, ತೆಳು ನಿಲುವಿನ ಸಮಾಜವಾದಿ ಯೊಬ್ಬನ ಮಗಳನ್ನು ಮದುವೆಯಾದ ದಲಿತನೊಬ್ಬನ ಸುಪ್ತ ಪ್ರಜ್ಞೆಯಲ್ಲಿರುವ ಹಿಂಸೆಯ ಚಿತ್ರಣ. ಈ ನಾಟಕದ ಅಂತ್ಯವನ್ನು ಹಲವರು ಒಪ್ಪದಿರಬಹುದು. ಆದರೆ, ದಲಿತ ಅಹಂನ ಮನೋವೈಜ್ಞಾನಿಕ ಚಿತ್ರಣ, ನೋವಿಗೆ ಬರಿ ಮಾತಿನಲ್ಲೇ ಸ್ಪಂದಿಸುವ ವೈಚಿತ್ರ್ಯ - ಇವು ಈ ನಾಟಕದಲ್ಲಿ ಗಮನಾರ್ಹವಾಗಿ ಚರ್ಚಿತವಾಗಿವೆ.

ದೇಶದಲ್ಲಿ ನಡೆದ ಹಲವು ಚಳುವಳಿಗಳಿಗೆ ತೆಂಡೂಲ್ಕರ್ ಪ್ರೇಕ್ಷಕರಾಗಿದ್ದರು. ಅವರ ರಾಜಕೀಯ ನಾಟಕ - 'ದಾಂಬ್‌ದ್ವಿಪ್ಚಾ ಮುಖಾಬ್ಲಾ' ಇಂದಿರಾ ಗಾಂಧಿ-ಮುರಾರ್ಜಿ ದೇಸಾಯಿಯರ ಸಂಘರ್ಷವನ್ನು ಕುರಿತಾಗಿದ್ದರೂ, ಅದನ್ನು ಮೀರಿದ ನಾಟಕದ ವಸ್ತುವನ್ನು ಹೊಂದಿತ್ತು.

ತೆಂಡೂಲ್ಕರ್ ಬರೀ ನಾಟಕಕಾರರಷ್ಟೇ ಅಲ್ಲ ಅವರೊಬ್ಬ ಅಂಕಣಕಾರರೂ ಹೌದು. 'ಮಾನೂಸ್' ಪತ್ರಿಕೆಯಲ್ಲಿ ಅವರು ಬರೆದ 'ರಾತ್‌ರಾನಿ' ಅಂಕಣ, ಮಹಾರಾಷ್ಟ್ರದ ಸಾಹಿತ್ಯಿಕ ಅಂಕಣಗಳಿಗೇ ಒಂದು ಮಹತ್ತರ ಕೊಡುಗೆ. ಇವರು ಗಿರೀಶ್ ಕಾರ್ನಾಡರ 'ತುಘಲಕ್' ಹಾಗೂ ಮೋಹನ್ ರಾಕೇಶರ 'ಆಧೇ ಅಧೂರೆ' ನಾಟಕಗಳನ್ನು ಮರಾಠಿಗೆ ಅನುವಾದಿಸಿದ್ದಾರೆ.

*(ಕಂಟೆಂಪೊರರಿ ಇಂಡಿಯನ್ ಥಿಯೇಟರ್'ನಲ್ಲಿ ಪ್ರಕಟವಾದ ಲೇಖನ)*

ಸಂಗ್ರಹಾನುವಾದ : **ಎಸ್. ಮಾಲತಿ**
ಮಹಾಲಸ ನಿಲಯ, ಜೋಗ್ ರಸ್ತೆ
ಸಾಗರ - ೫೭೭೪೦೧

# ದುಡಿಯುವ ವರ್ಗದ ದಣಿವರಿಯದ ದನಿ

# ಸಂಗಾತಿ ಬಿ. ವಿ. ಕಕ್ಕಿಲ್ಲಾಯರ ೯೦ರ ಹೊಸ್ತಿಲಲ್ಲಿ

ಮ. ಶ್ರೀ. ಮುರಳಿಕೃಷ್ಣ




ಸಾರ್ವಜನಿಕ ಜೀವನದಲ್ಲಿರುವ ಕೆಲವು ರಾಜಕೀಯ ನಾಯಕರ ವಿಜೃಂಭಣೆಯ ಹುಟ್ಟುಹಬ್ಬಗಳ ಆಚರಣೆಯ ವಿಕೃತ ಮುಖವನ್ನು ನಮ್ಮ ರಾಜ್ಯದಲ್ಲಿರುವ ಪ್ರಮುಖ ನಗರಗಳಲ್ಲಿನ ಕಟೌಟ್‌ಗಳು ಸಾರುತ್ತಿವೆ. ಆದರೆ ಹಿರಿಯ ಸ್ವಾತಂತ್ರ್ಯ ಹೋರಾಟಗಾರ, ಭಾರತ ಕಮ್ಯುನಿಸ್ಟ್ ಪಕ್ಷದ ಧುರೀಣ, ಕರ್ನಾಟಕ ಏಕೀಕರಣ ಚಳವಳಿಯ ಮುಂದಾಳು, ರಾಜ್ಯಸಭೆಯ ಹಾಗೂ ಕರ್ನಾಟಕ ವಿಧಾನಸಭೆಯ ಮಾಜಿ ಸದಸ್ಯ, ದುಡಿಯುವ ವರ್ಗದ ಗಟ್ಟಿ ದನಿ ಸಂಗಾತಿ ಬಿ. ವಿ. ಕಕ್ಕಿಲ್ಲಾಯರ ೯೦ನೇ ವರ್ಷದ ಹುಟ್ಟುಹಬ್ಬದ ಆಚರಣೆ ಅರ್ಥಪೂರ್ಣವಾಗಿ ಮಂಗಳೂರಿನ 'ಕರ್ನಾಟಕ ಬ್ಯಾಂಕ್ ಎಂಪ್ಲಾಯೀಸ್ ಅಸೋಸಿಯೇಶನ್' ಸಭಾಂಗಣದಲ್ಲಿ ಮೇ ೩೦, ೩೧ ಮತ್ತು ಜೂನ್ ೧, ೨೦೦೮ರಂದು ಸರಳ ರೀತಿಯಲ್ಲಿ ಜರುಗಿತು. ಇದನ್ನು ಎಂ.ಎಸ್. ಕೃಷ್ಣನ್ ಸ್ಮರಣ ಸಂಸ್ಥೆ, ಬೆಂಗಳೂರು, 'ಹೊಸತು' ಮಾಸಪತ್ರಿಕೆ, ಬೆಂಗಳೂರು ಹಾಗೂ ಸಮದರ್ಶಿ ವೇದಿಕೆ, ಮಂಗಳೂರು, ಜಂಟಿಯಾಗಿ ಆಯೋಜಿಸಿದ್ದವು. ಹಾರ, ತುರಾಯಿ, ಗೌಜು, ಗದ್ದಲಗಳಿಂದ ಗಾವುದ ದೂರವಿದ್ದ ಈ ಕಾರ್ಯಕ್ರಮದಲ್ಲಿ ಸಂಗಾತಿ ಬಿ. ವಿ. ಕಕ್ಕಿಲ್ಲಾಯರ ಸಾಧನೆಗಳು, ಕೊಡುಗೆಗಳು, ದುಡಿಯುವ ವರ್ಗದ ಹೋರಾಟಗಳ ಬಗೆಗೆ ಅವರು ವಹಿಸುತ್ತ ಬಂದಿರುವ ಆಸ್ಥೆ, ಬದ್ಧತೆ, ಇತ್ಯಾದಿಗಳ ಕುರಿತು ವಿಷಯ ವಿನಿಮಯಗಳ ಜೊತೆಗೆ ಮುಂಬರುವ ದಿನಗಳಲ್ಲಿ ದುಡಿಯುವ ವರ್ಗದ ಜನಪರ ಹೋರಾಟಗಳ ಮುಂದಿರುವ ಸವಾಲುಗಳು, ಹೋರಾಟಗಳ ಮಾರ್ಗ ಕುರಿತು ಸಂವಾದ ಜರುಗಿತು. ವಿಚಾರಪ್ರಚೋದಕ ವಿಚಾರ ಸಂಕಿರಣಗಳು ಈ ಕಾರ್ಯಕ್ರಮಕ್ಕೆ ವಿಶೇಷ ಆಯಾಮ ನೀಡಿದವು.

ಮೇ ೩೦, ೨೦೦೮ರಂದು ಸಂಜೆ ನಡೆದ ಕಾರ್ಯಕ್ರಮದಲ್ಲಿ ಉಡುಪಿ, ಮಂಗಳೂರು ಹಾಗೂ ನಮ್ಮ ರಾಜ್ಯದ ಇತರ ಜಿಲ್ಲೆಗಳಿಂದ ಆಗಮಿಸಿದ್ದ ಭಾರತ ಕಮ್ಯುನಿಸ್ಟ್ ಪಕ್ಷದ ನಾಯಕರು, ಕಾರ್ಯಕರ್ತರು, ಎ.ಐ.ಟಿ.ಯು.ಸಿ. ನೇತಾರರು ಹಾಗೂ ಇತರರು ಸಂಗಾತಿ ಕಕ್ಕಿಲ್ಲಾಯರ ಜೊತೆಗಿನ ತಮ್ಮ ಅನುಭವವನ್ನು ಹಂಚಿ ಕೊಂಡರು. ಆ ಸಂದರ್ಭದಲ್ಲಿ ಮಾತನಾಡುತ್ತ ಕಕ್ಕಿಲ್ಲಾಯರು ಕರ್ನಾಟಕದಲ್ಲಿ ಪಕ್ಷ ಬೆಳೆಸಿದ ರೀತಿ, ಎದುರಿಸಿದ ಸಮಸ್ಯೆಗಳು ಮುಂತಾದುವುಗಳ ಬಗೆಗೆ ಪ್ರಸ್ತಾಪಿಸಿ ಸಮಾಜವಾದವೇ ಬಂಡವಾಳಶಾಹಿ ವ್ಯವಸ್ಥೆಗೆ ಸೂಕ್ತ ಪರ್ಯಾಯ ಎಂಬ ಅಂಶದ ಬಗೆಗೆ ಒತ್ತು ನೀಡಿದರು.

'ಕನ್ನಡ ಸಾಹಿತ್ಯದಲ್ಲಿ ಪ್ರತಿರೋಧದ ನೆಲೆಗಳು' ಎಂಬ ವಿಷಯದ ಬಗೆಗೆ ನಡೆದ ಗೋಷ್ಠಿಯಲ್ಲಿ (ಮೇ ೩೧) ವಿಮರ್ಶಕ ಹಾಗೂ ಚಿಂತಕ ಶ್ರೀ ಜಿ. ರಾಜಶೇಖರ್, ಅಧ್ಯಕ್ಷತೆ ವಹಿಸಿದ್ದರು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ವಿಮೋಚನೆಯ ಪ್ರಶ್ನೆಗಳ ಬಗೆಗೆ ವಿಮರ್ಶಕಿ ಹಾಗೂ ಲೇಖಕಿ ಡಾ|| ಸುಮಿತ್ರಾ ಬಾಯಿ ಅವರು ಮಾತನಾಡುತ್ತ, ಶಿವರಾಮ ಕಾರಂತರ ಹಾಗೂ ಕುವೆಂಪು ಅವರ ಕೆಲವು ಕಾದಂಬರಿಗಳಲ್ಲಿ ಈ ವಿಷಯವು ಅಡಕವಾಗಿರುವುದನ್ನು ಪ್ರಸ್ತಾಪಿಸಿದರು.

'ಕನ್ನಡ ಸಾಹಿತ್ಯ ಮತ್ತು ಕರ್ನಾಟಕ ಚಳುವಳಿಗಳು' ಎಂಬ ವಿಚಾರದ ಬಗೆಗೆ ಪ್ರೊ|| ಲಿಂಗದೇವರು ಹಳೆಮನೆ ಭಾಷಣ ಮಾಡಿದರು. ಹಳೆಗನ್ನಡ ಸಾಹಿತ್ಯದಲ್ಲಿ ಪ್ರಥಮವಾಗಿ ಚಳುವಳಿಯ ಪ್ರಸ್ತಾಪವಾಗಿರುವುದು ವಚನಗಳಲ್ಲಿ, ೧೯ನೇ ಶತಮಾನದಲ್ಲಿ ಘಟಿಸಿದ ಸಿಪಾಯಿ ದಂಗೆ (ಇದನ್ನು ಭಾರತ ವಿಮೋಚನೆಯ ಪ್ರಥಮ ಸಮರವೆಂದು ಅನೇಕ ವಿಶ್ಲೇಷಕರು ಗುರುತಿಸುತ್ತಾರೆ) ಅನೇಕ ಚಳುವಳಿಗಳಿಗೆ ಚಾಲಕ ಶಕ್ತಿಯಾಯಿತು. ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ, ದಲಿತ ಸಾಹಿತ್ಯ ಚಳುವಳಿಗಳ ಜೊತೆಗೆ ಏಕೀಕರಣ, ಹಿಂದಿ ವಿರೋಧಿ, ಗೋಕಾಕ್ ಮುಂತಾದ ಚಳುವಳಿಗಳ ಬಗೆಗೆ ಅವರು ಪ್ರಸ್ತಾಪಿಸಿದರು. ೧೯೭೪ರಲ್ಲಿ ಮೈಸೂರಿನಲ್ಲಿ ಅಖಿಲ ಕರ್ನಾಟಕ ಬರಹಗಾರರ ಹಾಗೂ ಕಲಾವಿದರ ಒಕ್ಕೂಟದ ವತಿಯಿಂದ ಒಂದು ಸಭೆ ಏರ್ಪಡಿಸಲಾಗಿತ್ತು. ಅದರಲ್ಲಿ ಕುವೆಂಪು ಹಾಗೂ ರಾಜ್ಯ ಸರ್ಕಾರದ ಸಚಿವರಾಗಿದ್ದ ಬಸವಲಿಂಗಪ್ಪನವರ ಭಾಷಣಗಳು ಭಾರಿ ಪರಿಣಾಮವನ್ನು ಬೀರಿದವು. ಕನ್ನಡ ಸಾಹಿತ್ಯವನ್ನು ಬೂಸಾ ಸಾಹಿತ್ಯವೆಂದು ಶ್ರೀ ಬಸವಲಿಂಗಪ್ಪ ವಿಶ್ಲೇಷಿಸಿದ್ದು ಆ ಒಂದು ಸಭೆಯಲ್ಲೇ. ಇಂಥಾ ರ್‍ಯಾಡಿಕಲ್ ಹೇಳಿಕೆಗಳು ದಲಿತ ಹಾಗೂ ಬಂಡಾಯ ಸಾಹಿತ್ಯ ಚಳುವಳಿಗಳಿಗೆ ಬಹುಮಟ್ಟಿಗೆ ಪೂರಕವಾದವು ಎಂದು ಅಭಿಪ್ರಾಯಪಟ್ಟರು.

'ಕನ್ನಡ ಸಾಹಿತ್ಯದಲ್ಲಿ 'ರಾಷ್ಟ್ರ' ಮತ್ತು 'ರಾಜ್ಯ'ದ ಸಂರಚನೆಗಳು' ಎಂಬ ವಿಷಯದ ಬಗೆಗೆ ಡಾ|| ರಹಮತ್ ತರೀಕೆರೆ ಅವರು ಉಪನ್ಯಾಸ ನೀಡಿದರು. ಕವಿರಾಜಮಾರ್ಗ, ಪಂಪನ ಆದಿಪುರಾಣ, ಆಲೂರು ವೆಂಕಟರಾಯರ 'ಕರ್ನಾಟಕತ್ವದ ವಿಕಾಸ', ದ. ರಾ. ಬೇಂದ್ರೆಯವರ 'ಐದು ತಾಯಿಯರ ಕಲ್ಪನೆ', ಡಾ|| ಚಿದಾನಂದ ಮೂರ್ತಿಯವರ ವಿಚಾರಗಳಲ್ಲಿ ಅಡಗಿರುವ ಈ ವಿಷಯದ ಕಲ್ಪನೆಗಳನ್ನು ಎಳೆಎಳೆಯಾಗಿ ಬಿಡಿಸಿಟ್ಟರು. ಇಂದು ಚಾಲ್ತಿಯಲ್ಲಿರುವ ಮಾರುಕಟ್ಟೆ ಆಧಾರಿತ ವ್ಯವಸ್ಥೆಯಲ್ಲಿ ಹಾಗೂ ಸಮ್ಮಿಶ್ರ ಸರ್ಕಾರಗಳ ಯುಗದಲ್ಲಿ 'ರಾಷ್ಟ್ರ' ಹಾಗೂ 'ರಾಜ್ಯ'ದ ಪರಿಕಲ್ಪನೆಗಳ ರೂಪುರೇಷೆಗಳ ಬಗೆಗೆ ಬೆಳಕನ್ನು ಚೆಲ್ಲಿದರು.

'ಆಧುನಿಕ ಕನ್ನಡ ಸಾಹಿತ್ಯದಲ್ಲಿ ಜಾತಿ ಮತ್ತು ಲಿಂಗ ತಾರತಮ್ಯಗಳ ನಿರೂಪಣೆ' ಕುರಿತು ಡಾ|| ಸಿ.ಹಾ ಭೂಮೀಗೌಡ ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದರು.

ಅಂದು ಮಧ್ಯಾಹ್ನ ಜರುಗಿದ 'ಭಾರತದ ಸ್ವಾತಂತ್ರ್ಯ ಚಳುವಳಿಗೆ ಏನಾಯ್ತು?' ಎಂಬ ಗೋಷ್ಠಿಯ ಅಧ್ಯಕ್ಷತೆಯನ್ನು ಪ್ರೊ|| ಸುರೇಂದ್ರ ರಾವ್ ವಹಿಸಿದ್ದರು.

ಭಾರತ ಕಮ್ಯುನಿಸ್ಟ್ ಪಕ್ಷದ ಲೋಕಸಭಾ ಸದಸ್ಯರಾದ ಕಾಂ|| ಸಿ. ಕೆ. ಚಂದ್ರಪ್ಪನ್ 'ಸ್ವಾತಂತ್ರ್ಯ ಚಳುವಳಿಯ ಆಶಯಗಳು, ಸ್ವಾತಂತ್ರ್ಯೋತ್ತರ ಅನುಭವಗಳು' ಎಂಬ ವಿಷಯ ಕುರಿತು ಮಾತನಾಡುತ್ತ ಆಶಯಗಳಿಗೂ ಹಾಗೂ ಆದ ಅನುಭವಗಳ ಬಗೆಗಿನ ವ್ಯತ್ಯಾಸಗಳ ಚಿತ್ರಣ ನೀಡಿದರು. "ನಮ್ಮ ರಾಷ್ಟ್ರದ ವಿಮೋಚನೆಯ ಆಂದೋಳನದಲ್ಲಿ ಮುಕ್ತ ಭಾರತದಲ್ಲಿರಬೇಕಾದ ಅಭಿವೃದ್ಧಿ ಪಥ, ಸಾಮಾಜಿಕ ನ್ಯಾಯ, ಸಮಾನತೆ ಮುಂತಾದವುಗಳ ಬಗೆಗೆ ಕಲ್ಪನೆಗಳಿದ್ದವು. ಆದರೆ, ಸ್ವಾತಂತ್ರ್ಯ ಗಳಿಸಿ ೬೧ ವರ್ಷಗಳಾದರೂ ಅದು ಸಾಕಾರಗೊಂಡಿಲ್ಲ, ಪ್ರಗತಿಯೇನೋ ಆಗಿದೆ. ಆದರೆ ಅದು ಸಮಾಜದ ಕೆಳಸ್ತರಗಳ ಮಂದಿಗೆ ತಲುಪಿಲ್ಲ. ಎಡಪಕ್ಷಗಳು ಹಾಗೂ ಇತರ ಪ್ರಗತಿಪರ ಶಕ್ತಿಗಳು ಡಾ|| ಸ್ವಾಮಿನಾಥನ್ ವರದಿ (ಕೃಷಿಕ್ಷೇತ್ರಕ್ಕೆ ಸಂಬಂಧಿಸಿದ)ಯನ್ನು ಜಾರಿಮಾಡಿರೆಂದು ಆಗ್ರಹಿಸಿದಾಗ ವಿತ್ತಮಂತ್ರಿ ಚಿದಂಬರಂ ಹಣದ ಮುಗ್ಗಟ್ಟಿನ ವಿಚಾರವನ್ನು ದೊಡ್ಡದುಮಾಡಿ ತೋರಿಸುತ್ತಾರೆ. ಈ ವರದಿ ಜಾರಿಯಾಗಿದ್ದರೆ, ಸಾಲಮನ್ನಾ ಕಾರ್ಯಕ್ರಮವೇ ಬೇಕಾಗಿರಲಿಲ್ಲ' ಎಂದು ಅಭಿಪ್ರಾಯಪಟ್ಟರು.

'ಅಲಿಪ್ತ ಚಳುವಳಿಯ ನಾಯಕತ್ವದಿಂದ ಸಾಮ್ರಾಜ್ಯಶಾಹಿಯ ತೆಕ್ಕೆಗೆ' ಎಂಬ ವಿಚಾರದ ಬಗೆಗೆ ತಮ್ಮ





ಅಭಿಮತಗಳನ್ನು ಪ್ರೊ|| ಕಮಲ್ ಚಿನಾಯ್, ಜಾಗತೀಕರಣ ಪ್ರಕ್ರಿಯೆಯು ಹೇಗೆ ಜಗತ್ತಿನ ಎಲ್ಲ ದೇಶಗಳ ಮೇಲೆ, ಅದರಲ್ಲೂ ಮುಖ್ಯವಾಗಿ ತೃತೀಯ ಜಗತ್ತಿನ ದೇಶಗಳ ಮೇಲೆ ನಕಾರಾತ್ಮಕ ಪರಿಣಾಮಗಳನ್ನು ಬೀರಿದೆ ಎಂದು ವಿವರಿಸಿದರು. ಒಮ್ಮೆ ಅಲಿಪ್ತ ಚಳುವಳಿಯ ಮುಂಚೂಣಿಯಲ್ಲಿದ್ದ ಭಾರತ ಹೇಗೆ ಅಮೆರಿಕಾದ ಕೈಗೊಂಬೆಯಾಗಿದೆ ಎಂದು ತಿಳಿಸಿದರು. ಪ್ರೊ|| ಮುಜಾಫರ್ ಆಸ್ಸಾದಿ 'ಸಾಂವಿಧಾನಿಕ ಭದ್ರತೆಯ ಭವಿಷ್ಯ' ಎಂಬ ವಿಷಯ ಕುರಿತು ಮಾತನಾಡಿದರು. ಸಂವಿಧಾನದ ಆಶಯಗಳಿಗೆ ಹೇಗೆ ಸರ್ಕಾರಗಳು ವರ್ಷಗಳು ಉರುಳುತ್ತಿರುವಂತೆ ಧಕ್ಕೆ ತಂದು ಉಳ್ಳವರ ಪರವಾಗಿ ವರ್ತಿಸುತ್ತಿವೆಯೆಂದು ಬಣ್ಣಿಸಿದರು.

ಸಂಜೆ ಪ್ರೊ|| ಜಿ. ವಿ. ಜೋಶಿಯವರ ಅಧ್ಯಕ್ಷತೆಯಲ್ಲಿ 'ಆರ್ಥಿಕ ವಿಕಾಸ ಪ್ರಕ್ರಿಯೆಯಲ್ಲಿ ಹೊರಗುಳಿದವರು ಮತ್ತು ಒಳಗೊಂಡವರನ್ನು ಕುರಿತ ಮುಗಿಯದ ಚರ್ಚೆ' ಎಂಬ ವಿಚಾರ ಕುರಿತು ಭಾರತ ಕಮ್ಯುನಿಸ್ಟ್ ಪಕ್ಷದ ಕರ್ನಾಟಕ ರಾಜ್ಯ ಸಮಿತಿಯ ಕಾರ್ಯದರ್ಶಿ ಡಾ|| ಸಿದ್ದನಗೌಡ ಪಾಟೀಲ, 'ಹೊಸತು' ಪತ್ರಿಕೆಯ ಸಹ ಸಂಪಾದಕರಾದ ಶ್ರೀ ಕೆ. ಎಸ್. ಪಾರ್ಥಸಾರಥಿ ಹಾಗೂ ಪ್ರೊ|| ಸಂಜಯ್ ಬಿಸ್ವಾಸ್ ತಮ್ಮ ವಿಚಾರಸರಣಿಯನ್ನು ಸಭೆಯ ಮುಂದಿಟ್ಟರು. ರಾತ್ರಿ 'ಆಯನ ನಾಟಕ ಮನೆ' ತಂಡದವರಿಂದ ಸಾಂಸ್ಕೃತಿಕ ಕಾರ್ಯಕ್ರಮ ಭಾರತದ ಚರಿತ್ರೆಯ ಕೆಲವು ಪ್ರಮುಖ ಅಂಶಗಳನ್ನೊಳಗೊಂಡಿತ್ತು.

ಜೂನ್ ೧ರಂದು ಮೂರನೇ ಗೋಷ್ಠಿಯಲ್ಲಿ 'ಕೋಮುವಾದ ಮತ್ತು ಭಯೋತ್ಪಾದನೆ' ಎಂಬ ವಿಚಾರಸಂಕಿರಣದಲ್ಲಿ 'ಭಾರತದಲ್ಲಿ ಪ್ರಭುತ್ವ, ನಾಗರಿಕ ಸಮಾಜ ಹಾಗೂ ಕೋಮುವಾದದ ರಾಜಕೀಯ' ಕುರಿತು 'ನ್ಯೂ ಏಜ್' ಪತ್ರಿಕೆಯ ಸಂಪಾದಕರಾದ ಶ್ರೀ ಶಮೀಮ್ ಫೈಜಿ ಮಾತನಾಡಿದರು. ಧರ್ಮನಿರಪೇಕ್ಷತೆ ಎಂಬುದನ್ನು ಭಾರತದಲ್ಲಿ ಹೇಗೆ ವಿಶ್ಲೇಷಿಸಲಾಗುತ್ತಿದೆ ಹಾಗೂ ದಿನ ಕಳೆದಂತೆ ಅದು ಯಾವ ರೀತಿಯ ಆಕ್ರಮಣಗಳಿಗೆ ತುತ್ತಾಗುತ್ತಿದೆ ಎಂಬುದರ ಕುರಿತು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಕೋಮುವಾದದ ರಾಜಕೀಯ ಇಡೀ ಸಮಾಜಕ್ಕೆ ತಂದೊಡ್ಡುವ ಸಂಚಕಾರಗಳ ಬಗೆಗೆ ಗಮನ ಸೆಳೆದರು. ಶ್ರೀ ಪ್ರಫುಲ್ ಬಿದ್ವಾಯ್ ('ಫ್ರಂಟ್‌ಲೈನ್' ಪಾಕ್ಷಿಕದ ಅಂಕಣಕಾರ), 'ಕೋಮುವಾದದ ಆರ್ಥಿಕ ಹಾಗೂ ರಾಜಕೀಯ ನೆಲೆಗಳು' ಎಂಬ ವಿಚಾರದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತ ಕೋಮುವಾದದ ರಾಜಕೀಯ ಹಾಗೂ ಸಾಮಾಜಿಕ ಆಯಾಮಗಳ ಕುರಿತು ಕ್ಷ-ಕಿರಣ ಬೀರಿದರು. ಕೋಮುವಾದವು ಸಾಮಾಜಿಕ ಬದಲಾವಣೆ/ಸುಧಾರಣೆಗಳನ್ನೂ ವಿರೋಧಿಸುತ್ತ ಜಾತಿ, ಲಿಂಗ ಹಾಗೂ ಶ್ರೇಣೀಕೃತ ಅಧಿಕಾರದ ಆಧಾರದ ಮೇಲೆ ಹೇಗೆ ದಬ್ಬಾಳಿಕೆ ನಡೆಸುತ್ತದೆ ಎಂಬುದನ್ನು ಪ್ರಸ್ತಾಪಿಸಿದರು.

ಕರ್ನಾಟಕದಲ್ಲಿರುವ ಬಹುತ್ವ ಹಾಗೂ ಶತಮಾನಗಳಿಂದ ಜರುಗುತ್ತ ಬಂದಿರುವ ಹಿಂದೂ-ಮುಸಲ್ಮಾನ ಸಂವಾದಗಳ ಬಗೆಗೆ ಪ್ರಸ್ತಾಪಿಸಿದರು. ಡಾ|| ಕೆ. ಫಣಿರಾಜ್ 'ಕರ್ನಾಟಕದಲ್ಲಿ ಕೋಮುಗಲಭೆಯ ಸ್ವರೂಪ' ಎಂಬ ವಿಷಯದ ಬಗೆಗೆ ಮಾತನಾಡುತ್ತ ಕರಾವಳಿಯಲ್ಲಿ ಜರುಗುತ್ತ ಬಂದಿರುವ ಕೋಮುವಾದದ ಘಟನೆಗಳ ಪಂಚಾಂಗವನ್ನೇ ತೆರೆದಿಟ್ಟರು. 'ಕೋಮುವಾದ ಕುರಿತ ನಮ್ಮ ಮೌನ'ದ ಬಗೆಗೆ ಕಾಂ|| ಬಿ. ವಿ. ಕಕ್ಕಿಲ್ಲಾಯ ಮಾತನಾಡುತ್ತ ಮತೀಯ ಸಂಘರ್ಷಗಳನ್ನು ತಡೆಗಟ್ಟಿ ಸಾಮರಸ್ಯವನ್ನು ಕಟ್ಟುವಲ್ಲಿ ಕಮ್ಯುನಿಸಂ ದಾರಿದೀಪವಾಗಬಲ್ಲದು ಎಂದು ಬಣ್ಣಿಸಿದರು.

ನಾಲ್ಕನೆಯ ಗೋಷ್ಠಿಯಲ್ಲಿ 'ಸಾಮಾಜಿಕ ಪರಿವರ್ತನೆಯಲ್ಲಿ ಮಹಿಳಾ ಅಧ್ಯಯನ ಮತ್ತು ಮಹಿಳಾ ಚಳುವಳಿಗಳ ಪಾತ್ರ' ಎಂಬ ವಿಚಾರ ಸಂಕಿರಣವಿತ್ತು. ಅದರ ಅಧ್ಯಕ್ಷತೆಯನ್ನು ಡಾ|| ವಿಜಯಾ ವಹಿಸಿದ್ದರು. ಪ್ರಸ್ತಾವನೆಯನ್ನು ಡಾ|| ಎನ್. ಗಾಯತ್ರಿ ಮಾಡಿದರು. ಡಾ|| ಟಿ. ಆರ್. ಚಂದ್ರಶೇಖರ್ ಸರ್ಕಾರಗಳ ಅಭಿವೃದ್ಧಿ ಯೋಜನೆಗಳಲ್ಲಿ ಮಹಿಳೆಯರನ್ನು ಕೇವಲ ಫಲಗಳನ್ನು ಸ್ವೀಕರಿಸುವ ಗ್ರಾಹಕರೆಂದು, ಅನುಭೋಗಿಗಳೆಂದು ಪರಿಭಾವಿಸಿಕೊಳ್ಳಲಾಗುತ್ತಿದೆ ಎಂಬ ಅಂಶದ ಬಗೆಗೆ 'ಮಹಿಳೆಯರನ್ನು ಕುರಿತ ಸರ್ಕಾರಿ ಯೋಜನೆಗಳು ಮತ್ತು ಕಾರ್ಯಕ್ರಮಗಳು' ಎಂಬ ತಮ್ಮ ಉಪನ್ಯಾಸದಲ್ಲಿ ಹೇಳಿದರು. ಡಾ|| ಸುಧಾ ಸೀತಾರಾಮ್ 'ಶಿಕ್ಷಣ ಕ್ಷೇತ್ರದಲ್ಲಿ ಮಹಿಳಾ ಅಧ್ಯಯನ' ಎಂಬ ವಿಷಯದ ಬಗೆಗೆ ತಮ್ಮ ವಿಚಾರಗಳನ್ನು ಮಂಡಿಸಿದರು. ಕಾಲೇಜುಗಳಲ್ಲಿ ಹಾಗೂ ವಿಶ್ವವಿದ್ಯಾನಿಲಯಗಳಲ್ಲಿ ಮಹಿಳಾ ಅಧ್ಯಯನವನ್ನು ಆಯ್ಕೆ ಮಾಡಿಕೊಳ್ಳುತ್ತಿರುವ ಮಹಿಳೆಯರು ಅದನ್ನೊಂದು ಪಠ್ಯದ ವಿಷಯಕ್ಕೆ ಮಾತ್ರ ಸೀಮಿತಗೊಳಿಸಿದ್ದಾರೆ. ಅದು ಮಹಿಳಾ ಚಳುವಳಿಗಳ ಮೂಲಕ ಮಹಿಳೆಯ ಒಟ್ಟಾರೆ ಬೆಳವಣಿಗೆಗೆ ಪೂರಕವಾದಾಗ ಮಾತ್ರ ಸಾಫಲ್ಯ ಹೊಂದುತ್ತದೆ ಎಂದು ಅಭಿಪ್ರಾಯಪಟ್ಟರು.

ಸಂಜೆ 'ಸಾಮಾಜಿಕ ನ್ಯಾಯ, ಕಾನೂನು ವ್ಯವಸ್ಥೆ ಮತ್ತು ಪ್ರಜಾಸತ್ತಾತ್ಮಕ ಅಭಿವ್ಯಕ್ತಿಗೆ ಕಿರಿದಾಗುತ್ತಿರುವ ಅವಕಾಶಗಳು' ಎಂಬ ವಿಷಯ ಕುರಿತು ಎ.ಐ.ಟಿ.ಯು.ಸಿ.ಯ ಕರ್ನಾಟಕ ಘಟಕದ ಅಧ್ಯಕ್ಷರು ಹಾಗೂ ಹಿರಿಯ ವಕೀಲರೂ ಆದ ಶ್ರೀ ಎಂ. ಸಿ. ನರಸಿಂಹನ್ ಮಾತನಾಡಿದರು. ರಾಷ್ಟ್ರದ ಎಲ್ಲ ನ್ಯಾಯಾಲಯಗಳಿಂದ ಕ್ರಮೇಣ ಜನವಿರೋಧಿ ನೀತಿಗಳನ್ನು ಪುಷ್ಟೀಕರಿಸುವಂಥ ತೀರ್ಪುಗಳು ಹೊರಬರುತ್ತಿರುವುದೊಂದು ಆತಂಕಕಾರಿ ಬೆಳವಣಿಗೆಯೆಂದು ತಿಳಿಸಿದರು. ಸಭೆಯ ಅಧ್ಯಕ್ಷತೆಯನ್ನು ಡಾ|| ಜಿ. ರಾಮಕೃಷ್ಣ ವಹಿಸಿದ್ದರು.

ಮೂರು ದಿನಗಳ ಕಾಲ ಜರುಗಿದ ಈ ಕಾರ್ಯಕ್ರಮದಲ್ಲಿ ಹತ್ತುಹಲವು ವಿಷಯಗಳ ಬಗೆಗೆ ಚಿಂತನ-ಮಂಥನ ಜರುಗಿದವು. ಅವು ವಿಶ್ಲೇಷಣಾ ಶಕ್ತಿಯನ್ನು ವೃದ್ಧಿಸಿಕೊಳ್ಳುವ ಅನೇಕ ಒಳನೋಟಗಳನ್ನು ನೀಡಿವೆ. ಇವೆಲ್ಲಾ ಇತ್ಯಾತ್ಮಕ ಕ್ರಿಯಾಶೀಲತೆಗೆ ದಾರಿದೀಪವಾಗಿ, ಜನಪರ ಹೋರಾಟಗಳ ದಿಕ್ಸೂಚಿಗಳಾದರೆ, ಅದಕ್ಕಿಂತ ಮಿಗಿಲಾದ ಸಾಫಲ್ಯವುಂಟೆ ?

ಗೋಷ್ಠಿಗಳ ಎಲ್ಲ ಪ್ರಬಂಧಗಳನ್ನೂ ಮುಂದೆ ಪ್ರಕಟಿಸಲಾಗುತ್ತದೆಂಬ ನಿರೀಕ್ಷೆ ಇದೆ.




ಮ. ಶ್ರೀ. ಮುರಳಿಕೃಷ್ಣ
ನಂ. ೩೮, ೩ನೇ ಕ್ರಾಸ್, ರಾಜ್ ಗಾರ್ಡನಿಯ ಲೇಔಟ್, ತುರಹಳ್ಳಿ, ಉತ್ತರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು - ೫೬೦ ೦೬೧

# ಜಿ. ಟಿ. ಎನ್. ಅವರಿಗೆ ನಮನ



**ಕ**ನ್ನಡದ ಖ್ಯಾತ ವಿಜ್ಞಾನ ಲೇಖಕರೂ, ಮೈಸೂರು ವಿಶ್ವವಿದ್ಯಾನಿಲಯದ ವಿಶ್ವಕೋಶ ವಿಜ್ಞಾನ ವಿಭಾಗದ ಸಂಪಾದಕರೂ, ನವಕರ್ನಾಟಕ ವಿಜ್ಞಾನ ಪದವಿವರಣ ಕೋಶದ ಪ್ರಧಾನ ಸಂಪಾದಕರೂ, ಪ್ರಾಧ್ಯಾಪಕರೂ ಆಗಿದ್ದ ಹಿರಿಯ ಚೇತನ ಜಿ. ಟಿ. ನಾರಾಯಣರಾವ್ ತಮ್ಮ ೮೩ನೇ ವಯಸ್ಸಿನಲ್ಲಿ ೨೨-೬-೨೦೦೮ರಂದು ನಿಧನರಾದರೆಂದು ಪ್ರಕಟಿಸಲು ವಿಷಾದಿಸುತ್ತೇವೆ. ಅವರಿಗೆ 'ಹೊಸತು' ಬಳಗ ತನ್ನ ವಿನಮ್ರ ಗೌರವವನ್ನು ಸೂಚಿಸುತ್ತದೆ. ಮೃತರ ಕುಟುಂಬ ವರ್ಗದವರಿಗೆ ಸಂತಾಪವನ್ನು ಅರುಹುತ್ತದೆ.

ಜಿ.ಟಿ.ಎನ್. ಎಂದೇ ಗೆಳೆಯರಿಗೆ ಪರಿಚಿತರಾಗಿದ್ದ ಈ ಹಿರಿಯರು ನೇರ ನುಡಿಯ, ನುಡಿದಂತೆ ನಡೆಯುತ್ತಿದ್ದ ನಿಷ್ಠುರವ್ಯಕ್ತಿ. ಒಬ್ಬ ಅಪರೂಪದ ಮನುಷ್ಯ. ಗಣಿತದ ಪ್ರಾಧ್ಯಾಪಕ, ವಿಜ್ಞಾನ ವಿಷಯಗಳಲ್ಲಿ ಆಸಕ್ತ, ನಕ್ಷತ್ರಲೋಕದಲ್ಲಿ ತಲ್ಲೀನತೆ, ಖಗೋಳ ವಿಜ್ಞಾನದಲ್ಲಿ ಪರಿಣತ, ವಿಜ್ಞಾನ ವಿಷಯಗಳ ಪ್ರಚಾರಕ, ಒಳ್ಳೆಯ ಬರಹಗಾರ, ಸಂಗೀತಾಸಕ್ತ, ಸಂಗೀತ ವಿಮರ್ಶಕ ಹೀಗೆ ಹಲವು ಮುಖಗಳ ವ್ಯಕ್ತಿತ್ವ ಅವರದು. ಮುಖ್ಯವಾದ ಸಂಗತಿ ಎಂದರೆ ಮೂಢನಂಬಿಕೆಗಳ ವಿರುದ್ಧ ಸೆಟೆದೆದ್ದು ನಿಲ್ಲುತ್ತಿದ್ದ ಜಿ.ಟಿ.ಎನ್. ಫಲಜ್ಯೋತಿಷದ ಪೊಳ್ಳನ್ನು ನಿರ್ಭೀತರಾಗಿ ಬಯಲು ಮಾಡುತ್ತಿದ್ದರು. ವೈಜ್ಞಾನಿಕ ಮನೋಧರ್ಮವನ್ನು ರೂಢಿಸಿಕೊಂಡು ಪ್ರಚುರಪಡಿಸುತ್ತಿದ್ದ ಅವರು ತಮ್ಮ ಜೀವಿತದಲ್ಲಿ ಕೊನೆಯವರೆಗೂ ಅದನ್ನು ಅನುಷ್ಠಾನಕ್ಕೆ ತಂದರು. ಅವರ ಅಪೇಕ್ಷೆಯಂತೆ ಮೃತದೇಹವನ್ನು ಮೈಸೂರಿನ ಜೆ.ಎಸ್.ಎಸ್. ಆಸ್ಪತ್ರೆಗೆ ದಾನಮಾಡಿದ್ದು ಅದಕ್ಕೆ ಸಾಕ್ಷಿ. ಉತ್ತಮ ಅಧ್ಯಾಪಕರೆಂದು ಹೆಸರು ಗಳಿಸಿದ್ದ ಜಿ.ಟಿ.ಎನ್. ಶಿಸ್ತಿನ ಸಿಪಾಯಿ. ಅಂತೆಯೇ ಅವರು ಕಾಲೇಜಿನಲ್ಲಿ ಎನ್.ಸಿ.ಸಿ. ಅಧಿಕಾರಿಯಾಗಿ ಖ್ಯಾತನಾಮರಾಗಿದ್ದರು. ಈ ಬಗ್ಗೆ ಅವರ 'ಎನ್.ಸಿ.ಸಿ. ದಿನಗಳು' ಕೃತಿ ಒಂದು ಒಳ್ಳೆಯ ಓದು.

ಯಾವಾಗಲೂ ಶುಭ್ರ ಬಿಳಿ ಉಡುಪಿನಲ್ಲಿ ಕಾಣಿಸಿಕೊಳ್ಳುತ್ತಿದ್ದ ಜಿ.ಟಿ.ಎನ್. ಬದುಕೂ ಅಷ್ಟೇ ಶುಭ್ರ. ಯಾರ ದಾಕ್ಷಿಣ್ಯಕ್ಕೂ ಒಳಗಾಗದೆ, ಯಾವ ಆಮಿಷಗಳಿಗೂ ಒಳಗಾಗದೆ ತಮ್ಮ ಅಭಿಪ್ರಾಯವನ್ನು ಮಂಡಿಸುತ್ತಿದ್ದ ಅವರಿಗೆ ಸಲ್ಲಬೇಕಾಗಿದ್ದ ಪುರಸ್ಕಾರಗಳು ತಾವಾಗಿಯೇ ಅರಸಿ ಬಂದವು. ವಿಜ್ಞಾನ ಲೇಖನಗಳ ಬರಹದಲ್ಲೂ ಅಷ್ಟೇ, ಅವರದು ರಾಜಿಯಾಗದ ನಿಲುವು. ವಿಜ್ಞಾನ ಬರಹಗಳಲ್ಲಿ ಸರಳತೆ ಮುಖ್ಯವಲ್ಲ, ಸ್ಪಷ್ಟತೆ ಮತ್ತು ಖಚಿತತೆ ಮುಖ್ಯ ಎಂಬುದು ಅವರ ನಿಲುವು. ಹಾಗಾಗಿ ಅವರ ಬರಹಗಳು ಕ್ಲಿಷ್ಟವೆನಿಸಿದರೂ ಅಸ್ಖಲಿತ ಯುವ ವಿಜ್ಞಾನ ಬರಹಗಾರರನೇಕರಿಗೆ ಅವರು ಸಾಕಷ್ಟು ಪ್ರೋತ್ಸಾಹ ನೀಡುತ್ತಿದ್ದರು. ಕನ್ನಡದಲ್ಲಿ ಪಾರಿಭಾಷಿಕ ಪದಗಳನ್ನು ಟಂಕಿಸಿರುವವರಲ್ಲಿ ಜಿ.ಟಿ.ಎನ್. ಪ್ರಮುಖರು. ಹಿಡಿದ ಕೆಲಸವನ್ನು ಮುಗಿಸುವ ಛಲವಾದಿ. ಹಾಗೆಯೇ ಕೆಲಸದಲ್ಲಿ ಶಿಸ್ತನ್ನು ಪಾಲಿಸಿಕೊಂಡು ಬಂದವರು. ಸಮಯಪ್ರಜ್ಞೆಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತಿದ್ದ ವ್ಯಕ್ತಿ. 'ವೈಜ್ಞಾನಿಕ ಮನೋಧರ್ಮ', 'ನೋಡು ಬಾ ನಕ್ಷತ್ರ', 'ಸುಬ್ರಹ್ಮಣ್ಯನ್ ಚಂದ್ರಶೇಖರ್' ಮತ್ತು 'ರಾಮಾನುಜನ್' ಜೀವನ ಚರಿತೆ, 'ಐನ್‌ಸ್ಟೈನ್ ಬಾಳಿದರಿಲ್ಲಿ', 'ಕೋಪರ್ನಿಕಸ್ ಕ್ರಾಂತಿ' ಅವರ ಕೃತಿಗಳಲ್ಲಿ ಕೆಲವು. ಎಪ್ಪತ್ತರ ಹರೆಯದಲ್ಲೂ ಸೈಕಲ್ ಹತ್ತಿ ಓಡಾಡುತ್ತಿದ್ದ ಜಿ.ಟಿ.ಎನ್. ಮೈಸೂರು ನಗರದ ಸಾಂಸ್ಕೃತಿಕ ಜೀವನದಲ್ಲಿ ವಿಶಿಷ್ಟರು. ಸಂಗೀತಪ್ರಿಯರಾದ ಅವರು ಯಾವ ಕಚೇರಿಯನ್ನೂ ತಪ್ಪಿಸಿಕೊಂಡವರಲ್ಲ. ಮೈಸೂರಿನಲ್ಲಿ ಸ್ಥಾಪಿತವಾಗಿರುವ ವೀಣೆ ಶೇಷಣ್ಣ ಭವನ ಅವರ ಶ್ರಮದ ಫಲ.

ನವಕರ್ನಾಟಕ ಪ್ರಕಾಶನ ಸಂಸ್ಥೆ ಹಾಗೂ 'ಹೊಸತು' ಪತ್ರಿಕೆಯೊಂದಿಗೆ, ಜಿ.ಟಿ.ಎನ್. ನಿಕಟವಾದ ಸಂಬಂಧ ಇರಿಸಿಕೊಂಡಿದ್ದರು. 'ಹೊಸತು' ಪತ್ರಿಕೆಗೆ ಲೇಖನಗಳನ್ನು ತಪ್ಪದೇ ಬರೆಯುತ್ತಿದ್ದ ಅವರು ಅಮೂಲ್ಯವಾದ ಸಲಹೆಗಳನ್ನು ನೀಡುತ್ತಿದ್ದರು. 'ಹೊಸತು'ಗೆ ಲೇಖನವನ್ನು ಬರೆಯಲು ಹಲವು ಯುವ ಲೇಖಕರನ್ನು ಪ್ರೋತ್ಸಾಹಿಸುತ್ತಿದ್ದರು. ನವಕರ್ನಾಟಕದ ಹಲವು ಯೋಜನೆಗಳಲ್ಲಿ ಅವರು ಪಾಲ್ಗೊಂಡಿದ್ದರು. ಅವರೊಂದಿಗೆ ಕಲೆತು ಕೆಲಸ ಮಾಡುವುದೇ ಒಂದು ಅಪೂರ್ವ ಅನುಭವ. ಅಂಚೆ ಕಾರ್ಡು ಮತ್ತು ಅಂತರ್‌ ದೇಶೀಯಪತ್ರ ಇವು ಅವರು ಸಂಪರ್ಕಕ್ಕಾಗಿ ಬಳಸುತ್ತಿದ್ದ ಸಾಧನ. ತಮ್ಮ ಅನಿಸಿಕೆಯನ್ನು ತಕ್ಷಣ ಬರೆದು ತಿಳಿಸುತ್ತಿದ್ದರು ತಪ್ಪದೆ. ಈ ಬಗೆಯ ಶಿಸ್ತನ್ನು ಇನ್ನೊಬ್ಬರಲ್ಲಿ ಕಾಣುವುದು ಕಷ್ಟ. ಎಲ್ಲರಿಗೂ ಆತ್ಮೀಯರಾಗಿದ್ದು ಸರಳ ಜೀವನ ನಡೆಸಿದ ವ್ಯಕ್ತಿ ಇಂದು ನಮ್ಮೊಡನೆ ಇಲ್ಲ, ಆದರೆ ಅವರ ಆದರ್ಶದ ಬದುಕು, ನಡೆದ ದಾರಿ ನಮಗೆ ಮಾರ್ಗದರ್ಶಿ. ಅವರ ಕಾರ್ಯವೈಖರಿ ಸದಾ ನಮ್ಮ ನೆನಪಿನಲ್ಲಿರುವುದು.

'ಹೊಸತು' ಬಳಗ






[illegible]ರಂದು 'ಹೊಸತು' ಕಚೇರಿಯಲ್ಲಿ ನಡೆದ ಜಿ.ಟಿ.ಎನ್. ನೆನಪು ಸಭೆಯಲ್ಲಿ ಹಲವು ಮಂದಿ ಕನ್ನಡ ವಿಜ್ಞಾನ ಬರಹಗಾರರು ಭಾಗವಹಿಸಿದ್ದರು. ಪ್ರೊ|| ಜಿ. ವೆಂಕಟಸುಬ್ಬಯ್ಯ ಅವರು ಅಧ್ಯಕ್ಷತೆ ವಹಿಸಿದ್ದರು.

ಹಿಂದೆ ಮಧ್ಯ ಏಷಿಯಾದ ಬ್ರುನೈ ಎಂಬ ರಾಷ್ಟ್ರದ ದೊರೆಯೊಬ್ಬನಿದ್ದ. ವಿಶ್ವದ ಅತಿ ಶ್ರೀಮಂತರ ಹತ್ತು ಹೆಸರುಗಳಲ್ಲಿ ಅವನದೂ ಒಂದಾಗಿರುತ್ತಿತ್ತು. ಅವನು ಕೆಲಸವನ್ನೇನು ಮಾಡುತ್ತಿರಲಿಲ್ಲ. ಅವನೊಬ್ಬ ಅರೇಬಿಯಾದ ದೊರೆ. ತಿಂದುಂಡು ಮಲಗುವುದಷ್ಟೆ ಅವನ ಕೆಲಸ. ಆದರೆ ಆಸ್ತಿ ಸಂಪತ್ತು ರಾಷ್ಟ್ರದ ಪ್ರಜೆಗಳು ದುಡಿದದ್ದು. ಅವರ ಮನೆಯಂಗಳದಲ್ಲಿರುತ್ತಿದ್ದ ಎಣ್ಣೆ ಬಾವಿಗಳದ್ದು. ಹೆಸರು ಮಾತ್ರ ಇವನದು. ಕಾರ್ಲ್ ಮಾರ್ಕ್ಸ್ ಓದಿಕೊಂಡವನು ಅಲ್ಲಿ ವಕ್ಕರಿಸಿರಬೇಕು. ಈಗ ದೊರೆಯ ಹೆಸರು ನಾಪತ್ತೆಯಾಗಿದೆ! ಇಂಥ ಶ್ರೀಮಂತಿಕೆ ಅಂಬೇಡ್ಕರರ ಕನಸಿನಲ್ಲಿ ಜಾಗಪಡೆಯಲು ಸಾಧ್ಯವೇ ಇಲ್ಲ.

# ಬಾಬಾ ಸಾಹೇಬರ ಭಗ್ನಕನಸು

ಡಾ|| ಮೂಡ್ನಾಕೂಡು ಚಿನ್ನಸ್ವಾಮಿ

ಮತ್ತೊಂದು ಏಪ್ರಿಲ್ ೧೪, ಉರುಳಿದೆ. ರಜೆ ದಿನ ಅಂದರೆ ಸರ್ಕಾರಿ ಹಬ್ಬ. ಸಮಾಜ ಕಲ್ಯಾಣ ಇಲಾಖೆ ಸಂಪ್ರದಾಯದಂತೆ ನನ್ನಂಥ ಒಬ್ಬ ಲೇಖಕನನ್ನೋ, ಸಮಾಜ ಸೇವಕನನ್ನೋ ಹಿಡಿದು ತಂದು ಬಾಬಾಸಾಹೇಬ ಅಂಬೇಡ್ಕರ್ ಫೋಟೋ ಅನಾವರಣ ಮಾಡಿಸಿ, ನಾಲ್ಕು ಮಾತಾಡಿಸುತ್ತದೆ, ಅಲ್ಲಿಗೆ ಮುಗಿಯಿತು. ಮುಂದೆ ಪರಿಶಿಷ್ಟರಿಗೆ ಮೀಸಲಾಗಿರುವ ಹಣವನ್ನು ಖರ್ಚು ಮಾಡುವ, ಲೆಕ್ಕ ತೋರಿಸುವ ಕೆಲಸ. ಆರ್ಥಿಕ ವರ್ಷ ಮುಗಿಯುತ್ತಿದ್ದಂತೆ ಮತ್ತೊಂದು ಅಂಬೇಡ್ಕರ್ ಜಯಂತಿ ಬರುತ್ತದೆ. ಮತ್ತೆ ಆಚರಣೆ,ಲೆಕ್ಕದ ಪುಸ್ತಕ ತೆರೆದುಕೊಳ್ಳುತ್ತದೆ. ದೇಶದಲ್ಲಿ ಅಸ್ಪೃಶ್ಯತೆ ಒಂದಂಶವೂ ಕಡಿಮೆಯಾಗಿರುವುದಿಲ್ಲ, ದಲಿತ ಮಹಿಳೆಯರ ಅತ್ಯಾಚಾರ, ಕೊಲೆ, ಹಸಿವಿನಿಂದ ಸತ್ತವರು ಇತ್ಯಾದಿ ದಲಿತರ ಮೇಲಿನ ದೌರ್ಜನ್ಯಗಳು ಅವ್ಯಾಹತವಾಗಿ ನಡೆದಿರುತ್ತವೆ. ಸ್ವಾತಂತ್ರ್ಯಾನಂತರದ ಕಳೆದ ೬೦ ವರ್ಷಗಳ ಗ್ರಾಫ್ ನೋಡಿದರೆ ಈ ಪ್ರಕರಣಗಳು ಏರುಮುಖದಲ್ಲೇ ಇವೆ. ನಮ್ಮನ್ನು ಆಳುವವರಿಗೆ ಇವೆಲ್ಲ ತಿಳಿದಿಲ್ಲವೆಂದಲ್ಲ. ಆಡಳಿತ ಚಕ್ರ ಉರುಳುತ್ತಿದೆ. ಅಭಿವೃದ್ಧಿಯಂತೂ ವೇಗವಾಗಿಯೆ ಇದೆ ಎಂಬ ವರದಿಗಳನ್ನು ಮಾಧ್ಯಮಗಳು ನೀಡುತ್ತವೆ. ಇಂಡಿಯಾದ ಅಭಿವೃದ್ಧಿ ಎಂದರೆ ವಿಕಲಾಂಗನೊಬ್ಬನ ಬೆಳವಣಿಗೆಯಂತೆ; ಊನವಾದ ಅಂಗ ಇದ್ದಷ್ಟೇ ಇರುತ್ತದೆ. ಮತ್ಯಾವುದೋ ಅಂಗ ವಿಪರೀತ ಬೆಳೆಯುತ್ತದೆ. ಆದ್ದರಿಂದ ಈ ದೇಶದ ಅಭಿವೃದ್ಧಿ ಮಾಪನ ಮತ್ತು ಅಭಿಪ್ರಾಯ ಮಾಪನ ಎರಡನ್ನೂ ಮರು ಪರಿಶೀಲಿಸಬೇಕಾದ ಅಗತ್ಯವಿದೆ. ನನ್ನ ಮಾತನ್ನು ಈ ಕೆಳಗಿನ ಅಂಕಿಅಂಶಗಳಿಂದ ಸ್ಪಷ್ಟೀಕರಿಸಬಯಸುತ್ತೇನೆ..



**ಅಭೀವೃದ್ಧಿ ಮಾಪನವು ಸಮರ್ಥನೀಯವೇ ?**

ವಿಶ್ವದ ಶೇ.೪೦ರಷ್ಟು ಬಡವರು ಭಾರತದಲ್ಲಿದ್ದಾರೆ (ಇವರ ಸಂಖ್ಯೆ ಇಡೀ ಆಫ್ರಿಕ ಖಂಡದ ಜನಸಂಖ್ಯೆಗಿಂತ ಹೆಚ್ಚು). ವಿಶ್ವದ ೧೧೯ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಭಾರತ ಅತ್ಯಂತ ಕೆಳಗೆ ಅಂದರೆ ೯೬ನೇ ಸ್ಥಾನದಲ್ಲಿದೆ. ಪ್ರತಿ ೧೦ ಜನರಲ್ಲಿ ೬ ಜನರು ಹಳ್ಳಿಯಲ್ಲಿ ವಾಸಿಸುತ್ತಾರೆ. ಹಳ್ಳಿಗಳೆಂದರೆ ಕನಿಷ್ಠ ಮೂಲಭೂತ ಸೌಕರ್ಯವಿರುವ ಬಡತನದ ಗೂಡುಗಳು. ಜನಸಂಖ್ಯೆಯ ಶೇ.೩೪.೭ರಷ್ಟು ಜನ ಕೇವಲ ೧ ಅಮೆರಿಕನ್ ಡಾಲರ್ ಅಂದರೆ ೩೮ ರೂ. ಗಳಿಗಿಂತಲೂ ಕಡಿಮೆ ಆದಾಯದಲ್ಲಿ ಬದುಕುತ್ತಾರೆ ಮತ್ತು ಶೇ.೭೯.೯ರಷ್ಟು ಜನ ಶೇ.೨ ಡಾಲರ್‌ನ ಹಣದಲ್ಲಿ ಅಂದರೆ ಸುಮಾರು ೭೮ ರೂ.ಗಳಿಗಿಂತ ಕಡಿಮೆ ಹಣದಲ್ಲಿ ಬದುಕುತ್ತಾರೆ. ಭಾರತ ಅಳವಡಿಸಿಕೊಂಡ ಮಾನದಂಡಗಳ ಪ್ರಕಾರ ದೇಶದ ಶೇ.೨೬.೧ ರಷ್ಟು ಜನ ಬಡತನರೇಖೆಯ ಕೆಳಗಿದ್ದಾರೆ. ಅಂದರೆ ಅವರ ಮಾಸಿಕ ಆದಾಯ ರೂ.೩೬೦. ದಿನವೊಂದಕ್ಕೆ ಕೇವಲ ೧೨ ರೂ. ಗಳಲ್ಲಿ ಬದುಕಿದರೆ ಮಾತ್ರ ಅವರು ಬಡವರು.

ದೇಶದ ೧೦೨.೮ ಕೋಟಿ ಜನಸಂಖ್ಯೆಯಲ್ಲಿ ೮೨.೭ ಕೋಟಿ ಹಿಂದೂಗಳಿದ್ದಾರೆ. ಅವರಲ್ಲಿ ಶೇ.೨೫ ಅಂದರೆ ೨೪ ಕೋಟಿ ಜನರು ದಲಿತರು ಮತ್ತು ಶೇ.೪೦, ಅಂದರೆ ೪೦ ಕೋಟಿ ಜನರು ಇತರೆ ಹಿಂದುಳಿದ ವರ್ಗ. ಶೇ.೧೫ರಷ್ಟಿರುವ ಹಿಂದೂ ಮೇಲ್ಜಾತಿ ಜನ ನಾಗರಿಕ ಸೇವೆ,ಆರ್ಥಿಕ ಮತ್ತು ರಾಜಕೀಯದಂತಹ ಆಯಕಟ್ಟಿನ ಸ್ಥಳಗಳನ್ನು ಬ್ರಿಟಿಷರಿಂದ ನೇರವಾಗಿ ಬಳುವಳಿಯಾಗಿ ಪಡೆದಿದ್ದಾರೆ. ಆದ್ದರಿಂದ ಈ ಜಾತಿ ವ್ಯವಸ್ಥೆಯಲ್ಲಿ ದಲಿತ ಮತ್ತು ಕೆಳಜಾತಿಗಳು ಅತ್ಯಂತ ಶೋಷಿತ ಬಹುಸಂಖ್ಯಾತ ಸಮುದಾಯವಾಗಿಯೆ ಉಳಿದುಕೊಂಡು ಬಂದಿವೆ.

ಅನಕ್ಷರತೆಯಲ್ಲೂ ಭಾರತ ಹಿಂದೆ ಬಿದ್ದಿಲ್ಲ. ವಿಶ್ವದ ಶೇ.೩೫ರಷ್ಟು ಜನ ಅನಕ್ಷರಸ್ಥರು ಭಾರತದಲ್ಲೇ ಇದ್ದಾರೆ (ಯುನೆಸ್ಕೋ ವರದಿ, ೨೦೦೮). ಶಿಕ್ಷಣ ಮೂಲಭೂತ ಹಕ್ಕಾಗಿಯೂ ಭಾರತದ ಶೇ.೯೨ರಷ್ಟು ಮಕ್ಕಳು ಪ್ರೌಢಶಾಲಾ ಶಿಕ್ಷಣವನ್ನು ದಾಟಿ ಮುಂದೆ ಹೋಗುವುದಿಲ್ಲ. ಜಪಾನ್ ತನ್ನ ೧೨.೭ ಕೋಟಿ ಜನಸಂಖ್ಯೆಗೆ ೪೦೦೦, ಅಮೆರಿಕ ೪೦ ಕೋಟಿ ಜನಸಂಖ್ಯೆಗೆ ೩೬೫೦ ವಿಶ್ವವಿದ್ಯಾನಿಲಯಗಳನ್ನು ಹೊಂದಿದೆ. ಆದರೆ ಭಾರತ ೧೦೨ ಕೋಟಿ ಜನಸಂಖ್ಯೆಗೆ ಕೇವಲ ೩೪೮ ವಿ.ವಿ.ನಿಲಯಗಳನ್ನು ಹೊಂದಿದೆ. ವಿಷಾದದ ಮಾತು ಬೇರೆಯೆ ಇದೆ. ಇಷ್ಟು ಕಡಿಮೆ ಸಂಖ್ಯೆಯ ವಿಶ್ವವಿದ್ಯಾನಿಲಯಗಳ ಪದವೀಧರರು ತಮ್ಮ ಕನಸುಗಳ ಬೀಜವನ್ನು ಅಮೆರಿಕೆಯಲ್ಲಿ ಬಿತ್ತಿರುತ್ತಾರೆ. ಹೋಗಲಾಗದೆ ಉಳಿದವರೆ ಸ್ವದೇಶ ಸೇವಾಕಾಂಕ್ಷಿಗಳು. ಆದರೂ ನಮ್ಮ ವಿದ್ಯುನ್ಮಾನ ಮಾಧ್ಯಮಗಳು ಸಾರುವುದು ಏನನ್ನು? ನಂಬಲಸಾಧ್ಯವಾದ ಇಂಡಿಯಾ ! ತಡೆ ಹಿಡಿಯಲಾಗದ ಭಾರತೀಯರು !

ಜಾಗತೀಕರಣದ ನೆರಳಲ್ಲಿ ಭಾರತ ಬಂಡವಾಳಶಾಹಿಯಾಗಿ ತನ್ನ ಆರ್ಥಿಕ ನೀತಿ ನಿಯಮಗಳನ್ನು ರೂಪಿಸಿಕೊಳ್ಳುತ್ತಿದೆ. ಹೊಸ ಹೊಸ ಟಾಟಾ ಬಿರ್ಲಾಗಳ ಉದಯವಾಗುತ್ತಿದೆ.

ಫೋರ್ಬ್ಸ್ ನಿಯತಕಾಲಿಕೆ ನಡೆಸಿದ ಸರ್ವೆಯ ಪ್ರಕಾರ ಪ್ರಪಂಚದ ೧೦ ಶ್ರೀಮಂತರಲ್ಲಿ ಮೂವರು ಭಾರತೀಯರಿದ್ದಾರೆ. ಇದೇ ಕುಳಗಳು ಯೂರೋಪಿನ ಉಕ್ಕು ಕಾರ್ಖಾನೆ, ಕಾರು ಉತ್ಪಾದನೆಯ ಮೂಲ ಘಟಕಗಳನ್ನು ಅಸಾಧಾರಣ ಬೆಲೆಗೆ ಕೊಂಡು ಸುದ್ದಿ ಮಾಡುತ್ತಾರೆ. ಬಹುಶಃ ರಾಜಕಾರಣಿಗಳು ಇವರನ್ನು ದೇಶದ ಆಸ್ತಿ ಎಂದು ತಿಳಿದುಕೊಂಡಂತಿದೆ. ಆದರೆ ಕನಿಷ್ಠ ಬೆಲೆಗೆ ಇಲ್ಲಿ ದೊರಕುವ ಶ್ರಮವನ್ನು, ಶ್ರಮಿಕರನ್ನು ಕೊಳ್ಳೆಹೊಡೆದು ಇವರು ಶ್ರೀಮಂತಿಕೆ ಗಳಿಸಿರುತ್ತಾರೆ ಎಂಬ ಅರಿವು ಮಾರ್ಕ್ಸ್‌ವಾದಿಗೆ ಮಾತ್ರ ಬರಲಿಕ್ಕೆ ಸಾಧ್ಯ. ಆಶ್ಚರ್ಯವೆಂದರೆ, ಇಂಡಿಯಾದ ೩೩ ಕುಟುಂಬಗಳಲ್ಲಿ ಅಡಕವಾಗಿರುವ ಸಂಪತ್ತು ೧೯೧ ಬಿಲಿಯನ್ ಡಾಲರ್‌ಗಳಷ್ಟು. ಅಂದರೆ ಭಾರತದ ಒಟ್ಟು ಜಿಡಿಪಿ ಯ ಕಾಲು ಭಾಗ. ಈ ಸಮೂಹದಲ್ಲಿ ದಲಿತ ಹಿಂದುಳಿದವರು ಇರಲಿಕ್ಕೆ ಸಾಧ್ಯವಿಲ್ಲ ಎಂಬುದನ್ನು ಹೇಳುವ ಅವಶ್ಯಕತೆ ಇಲ್ಲ.

ಹಿಂದೆ ಮಧ್ಯ ಏಷಿಯಾದ ಬ್ರೂನಿ ಎಂಬ ರಾಷ್ಟ್ರದ ದೊರೆಯೊಬ್ಬನಿದ್ದ. ವಿಶ್ವದ ಅತಿ ಶ್ರೀಮಂತರ ಹತ್ತು ಹೆಸರುಗಳಲ್ಲಿ ಅವನದೂ ಒಂದಾಗಿರುತ್ತಿತ್ತು. ಅವನು ಕೆಲಸವನ್ನೇನು ಮಾಡುತ್ತಿರಲಿಲ್ಲ. ಅವನೊಬ್ಬ ಅರೇಬಿಯಾದ ದೊರೆ; ತಿಂದುಂಡು ಮಲಗುವುದಷ್ಟೆ ಅವನ ಕೆಲಸ. ಆದರೆ ಅಷ್ಟೂ ಸಂಪತ್ತು ರಾಷ್ಟ್ರದ ಪ್ರಜೆಗಳು ದುಡಿದದ್ದು. ಅವರ ಮನೆಯಂಗಳದಲ್ಲಿರುತ್ತಿದ್ದ ಎಣ್ಣೆ ಬಾವಿಗಳದ್ದು. ಹೆಸರು ಮಾತ್ರ ಇವನದು. ಕಾರ್ಲ್ ಮಾರ್ಕ್ಸ್ ಓದಿಕೊಂಡವನು ಅಲ್ಲಿ ವಕ್ಕರಿಸಿರಬೇಕು. ಈಗ ದೊರೆಯ ಹೆಸರು ನಾಪತ್ತೆಯಾಗಿದೆ! ಇಂಥ ಶ್ರೀಮಂತಿಕೆ ಅಂಬೇಡ್ಕರರ ಕನಸಿನಲ್ಲಿ ಜಾಗಪಡೆಯಲು ಸಾಧ್ಯವೇ ಇಲ್ಲ.

**ಅಭಿಪ್ರಾಯ ಮಾಪನ ಸಮಂಜಸವೆ ?**

ಇನ್ನು ಭಾರತದ ಬಗ್ಗೆ ಅಭಿಪ್ರಾಯ ರೂಪಿಸುವ ವರ್ಗ ಯಾವುದು ? ಈಗಷ್ಟೆ ಒಬಿಸಿ ಮೀಸಲಾತಿಯ ನೀತಿ (ಉನ್ನತ ಶಿಕ್ಷಣದಲ್ಲಿ) ಪರಮೋಚ್ಚ ನ್ಯಾಯಾಲಯದಿಂದ ಹೊರಬಿದ್ದಿದೆ. ಕೆಲವು ತಿಂಗಳುಗಳ ಹಿಂದೆ ಅದರ ಪರ, ವಿರೋಧಿ ಚಳುವಳಿಗಳು ವಿಶ್ವವಿದ್ಯಾಲಯದ ಮಟ್ಟದಲ್ಲಿ ನಡೆಯುತ್ತಿದ್ದವು. ಆದರೆ ವರದಿಯಾಗುತ್ತಿದ್ದವು ಕೇವಲ ವಿರೋಧಿ ಚಳುವಳಿಗಳೆ! ಈ ತೀರ್ಪನ್ನು ಕುರಿತು ಎನ್.ಡಿ.ಟಿ.ವಿ.ಯ ಕಾರ್ಯಕ್ರಮವೊಂದರಲ್ಲಿ (೧೨.೪.೦೮) ಚರ್ಚೆ ನಡೆಯುತ್ತಿತ್ತು. ಚರ್ಚೆಯಲ್ಲಿದ್ದ ಕೆಲವರು ಅದನ್ನು ಈ ದೇಶವನ್ನು ಹಿಂದಕ್ಕೆಳೆಯುವ ತೀರ್ಪು ಎಂದರು. ಕೆಲವರು ಭಾರತ ಪ್ರತಿಭೆಯನ್ನು ಕಳೆದುಕೊಳ್ಳುತ್ತಿದೆ ಎಂದು ಬೊಬ್ಬೆ ಹೊಡೆಯುತ್ತಿದ್ದರು. ಆಗ ವಿಪರೀತ ಚಪ್ಪಾಳೆ ಬೀಳುತ್ತಿತ್ತು. ಸುಮಾರು ೧೦೦ ಜನರಿದ್ದ ಸಭಾಂಗಣ ಅದು. ಚರ್ಚೆಯಲ್ಲಿ ಭಾಗವಹಿಸಿ ಮಾತನಾಡುತ್ತಿದ್ದ ಪ್ರೊ|| ಕಾಂಚ ಇಲಯ್ಯ, ಇಲ್ಲಿ ಇಷ್ಟೊಂದು ಒಬಿಸಿ ವಿರೋಧಿ ಅಲೆ ಇದೆ, ನಿಮ್ಮಲ್ಲಿ ಎಷ್ಟು ಜನ ಒಬಿಸಿಗಳಿದ್ದಾರೆ ಕೈಯೆತ್ತಿ ಎಂದರು. ಕೈ ಎತ್ತಿದವರು ಕೇವಲ ೩ ಮಂದಿ. ನಮ್ಮ ಅಭಿಪ್ರಾಯ ಮಾಪನ ಹೇಗಿದೆ ನೋಡಿ. ಶೇ.೪೦ರಷ್ಟಿರುವ ಅತಿ ಹಿಂದುಳಿದ ಜಾತಿಗಳ ಭವಿಷ್ಯವನ್ನು ನಿರ್ಧರಿಸುವವರೂ ಅಲ್ಪಸಂಖ್ಯಾತ ಬಲಿಷ್ಠ ಕೋಮಿನವರೆ! ಕೆಲವು ತಿಂಗಳುಗಳ ಹಿಂದೆ ಸಿದ್ದಾರ್ಥ

## ಸರಿವ ಮರಳ ಕಣಗಳ ನಡುವೆ



ನಡೆಯುತ್ತಿದೆ ಯುದ್ಧದ ಹಾಗೆ
ಶತಶತಮಾನದಿಂದಲೂ
ಈ ಕ್ಷಣದವರೆಗೂ
ನಿರಂತರವಾಗಿ
ನಮ್ಮಲ್ಲೆ ನಾವು
ಗತಿಹೀನರಾಗಿ ದಿಕ್ಕೆಡಲು
ಸ್ಥಿತಿಹೀನರಾಗಿ ದುಡಿಯಲು
ಮುಖವಿದ್ದೂ ಮುಖೇಡಿಯಾಗಲು

ಮೊದಲು ಸಿಂಧೂ ದಾಟಿದ ಯೋಗ
ಪರಮ ಪದದಲ್ಲಿ ಒರಗಿರುತ್ತ
ನಮ್ಮ ಮನೆಯಲ್ಲೆ ಸೇವಕತನಕ್ಕಟ್ಟಿದೆ
ಮಂತ್ರ ದಂಡ ಹಿಡಿದು
ಬಾಗಿಲಲ್ಲೆ ಇರಿಸಿ, ನಡು ಬಗ್ಗಿಸಿದೆ
ನೆಲ ತಗ್ಗಿಸಿ, ತಳ ಊರಿಸಿದೆ
ಸನಾತನವಾಗಿ

ನಂತರ ಪೃಥ್ವಿಯನ್ನೆ ಗೆದ್ದು
ಮುಂದಡಿಯಿಟ್ಟು
ಅಲ್ಪಪಡೆ ಬಹುತರ ಹಿಗ್ಗಿಸುವ
ಹುಚ್ಚು ದರಬಾರಿನಲ್ಲಿ
ನಮ್ಮೊಳಗಿದ್ದೂ ನಮ್ಮಂತಾಗದೆ
ಭಯಂಕರ ಹತಾರ ಹಿಡಿದು
ಬೆನ್ನಲ್ಲೆ ನಿಂತಿದೆ ಸದಾಕಾಲ

ಕೊನೆಗೆ ಹಡಗನ್ನೇರಿ ಬಂದು
ವ್ಯಾಪಾರ ಮಾಡಿ ನಮ್ಮನ್ನು
ನಷ್ಟಕ್ಕೆ ಗುರಿಪಡಿಸಿದೆ, ಮೇಲಾಳಿಕೆ ನಡೆಸಿದೆ
ಕರುಣೆಯ ಹಣ ಹರಿಸಿದೆ
ಹಸಿದೊಡಲ ಖರೀದಿ ಮಾಡಿದೆ
ಸಂಪತ್ತಿನ ಮೂಲ ಜಗದ ಒಡೆತನಕ್ಕಾಗಿ
ಮಾನವನ ನೇಣಿಗೇರಿಸಿದೆ
ಬೆಳವಣಿಗೆಯ ಹರಿತ ಅಲುಗು ಹಿರಿದು
ಯಾವಾಗಲೂ ತಣ್ಣಗೆ

ಈ ಬಣ್ಣ ಬಣಗಳ
ಬಲಾಬಲ
ತುರುಸಿನ ತಿಕ್ಕಾಟದಲ್ಲಿ –
ಹಂಚಿಹೋಗಿ
ಹಲವು ದಿರಿಸುಗಳಲ್ಲಿ –
ನಮ್ಮ ವಿರುದ್ಧ ನಿಂತ ಹಗೆ ನಾವೇ
ಕೈ ಎತ್ತಿದ್ದೇವೆ
ಪರರಿಗೆ ಮೈ ಮರೆತು

ನಮ್ಮತನ
ರಾಶಿ ಬಿದ್ದಿದೆ ಬರಿದು

ಜೀವಂತ ದೇಶಿ
ಸತತ ಮಸಣವಾಸಿ

ಡಾ|| ಶ್ರೀಧರ ಪಿಸ್ಸೆ, [illegible]

ವರದರಾಜನ್ ಎಂಬ ದಲಿತ ಪತ್ರಕರ್ತರೊಬ್ಬರು ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯಲ್ಲಿ ನಡೆಯುತ್ತಿದ್ದ ಅಸ್ಪೃಶ್ಯತೆಯ ಆಚರಣೆಯನ್ನು ಹೊರಗೆಳೆಯಲು ಒಂದು ಲೇಖನವನ್ನು ಬರೆದರೆ ಅವರು ಆಗ ಕೆಲಸ ಮಾಡುತ್ತಿದ್ದ ಇಂಗ್ಲಿಷ್ ಪತ್ರಿಕೆ ಒಲ್ಲೆ ಎಂದಿತು. ಅವಕಾಶ ವಂಚಿತರು ಆಯಕಟ್ಟಿಗೆ ಬರುವವರೆಗೂ ಇದು ಹೀಗೆಯೆ ಸಾಗುತ್ತಿರುತ್ತದೆ.

**ಪ್ರಜಾಪ್ರಭುತ್ವವೆಂಬ ಪ್ರಹಸನ**

ಬಾಬಾಸಾಹೇಬರು ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡ ಅನಿವಾರ್ಯತೆಯನ್ನು ನಾನು ಬೇರೊಂದೆಡೆ ಚರ್ಚಿಸಿದ್ದೇನೆ. ಅವರ ಕಾಲಮಾನದಲ್ಲಿ ಸಮಾಜವಾದಿ ರಾಷ್ಟ್ರಗಳು ಅಭಿವೃದ್ಧಿ ಕಾಣದೆ ಬಣಗುಟ್ಟುತ್ತಿದ್ದವು.ಪಾಶ್ಚಾತ್ಯದೇಶಗಳ ಪ್ರಜಾಸತ್ತೆಯನ್ನು, ಅಭಿವೃದ್ಧಿ ನೀತಿಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದ ಅಂಬೇಡ್ಕರ್ ಸ್ವತಂತ್ರ ಭಾರತಕ್ಕೆ ಒಂದು ಒಳ್ಳೆಯ ಸಂವಿಧಾನವನ್ನು ನೀಡುವಲ್ಲಿ ಸಫಲರಾದರು. ದೇಶ ಒಪ್ಪಿಕೊಂಡರೂ ಜಾತಿಪದ್ಧತಿಯು ಪ್ರಜಾಪ್ರಭುತ್ವವನ್ನು ಸಾರಾಸಾಗಟು ತಿರಸ್ಕರಿಸಿಬಿಟ್ಟಂತೆ ಕಾಣುತ್ತದೆ. ಜಾತಿಪದ್ಧತಿಗೂ ಪ್ರಜಾಪ್ರಭುತ್ವಕ್ಕೂ ಎಣ್ಣೆ ನೀರಿನ ಸಂಬಂಧ. ಸಮಾನ ಅವಕಾಶ, ಸಮಾನತೆ ಇಂಥವು ಜಾತಿ ಪದ್ಧತಿಗೆ ಅಪರಿಚಿತ ಶಬ್ದಗಳು. ಅಧಿಕೃತವಾಗಿ ಅಂಥ ಅವಕಾಶಗಳು ಲಭಿಸಿದರೂ ಕೆಳಜಾತಿಯವರು ಆ ಅವಕಾಶಗಳನ್ನು ಮೇಲ್ಜಾತಿಯವನಿಗೆ ಒತ್ತೆ ಇಡಬೇಕಾದ ಅನಿವಾರ್ಯತೆ ಇದೆ. ಇದಕ್ಕೆ ಒಳ್ಳೆಯ ಉದಾಹರಣೆ ಎಂದರೆ, ಪಂಚಾಯತ್ ರಾಜ್ಯ ವ್ಯವಸ್ಥೆಯಲ್ಲಿ ನೀಡಿರುವ ಮೀಸಲಾತಿಯಿಂದ ದಲಿತ ಪುರುಷ ಅಥವಾ ಮಹಿಳೆ ಪಂಚಾಯತಿಯ ಅಧ್ಯಕ್ಷರಾಗಬೇಕು. ನಿಯಮದಂತೆ ನಡೆಯುತ್ತದೆ ಕೂಡ. ಆದರೆ ಕ್ರೂರ ಫ್ಯೂಡಲ್ ಹಳ್ಳಿಗಳಲ್ಲಿ ಅಲ್ಲಿನ ಜಮೀನುದಾರನೊ, ಗೌಡನೋ ಆ ಕುರ್ಚಿಯಲ್ಲಿ ಕುಳಿತಿರುತ್ತಾನೆ. ಅಧ್ಯಕ್ಷನಾಗಿ ಆಯ್ಕೆಯಾದವನು ಬಾಗಿಲು ಕಾಯುತ್ತಿರುತ್ತಾನೆ. ತಮಿಳುನಾಡು, ಉತ್ತರ ಪ್ರದೇಶದ ಹಳ್ಳಿಗಳಲ್ಲಿ ಇಂಥ ಘಟನೆಗಳು ವರದಿಯಾಗಿರುವುದುಂಟು.

ಅಂಬೇಡ್ಕರ್ ದಲಿತರಿಗೆ ಪ್ರತ್ಯೇಕ ಚುನಾಯಿಕಗಳನ್ನು ಬೇಡಿದ್ದು ಈ ಕಾರಣಕ್ಕಾಗಿಯೆ. ದಲಿತರೇ ಆರಿಸಿದ ದಲಿತ ಪ್ರತಿನಿಧಿಯೊಬ್ಬ ಬಡವರೇ ಆರಿಸಿದ ಬಡವನೊಬ್ಬ ಮೇಲ್ಜಾತಿಯ ಕೈಗೊಂಬೆಯಾಗುವ ಪ್ರಮೇಯವೇ ಬರುತ್ತಿರಲಿಲ್ಲ. ಯಾಕೆಂದರೆ ಅವರ ಉತ್ತರದಾಯಿತ್ವ ದಲಿತರಿಗೆ ಮಾತ್ರ. ಹಾಗೆಯೆ ಮುಸ್ಲಿಮ್ ಮತ್ತಿತರ ಅಲ್ಪಸಂಖ್ಯಾತರಿಗೂ ಈ ಅವಕಾಶವಿತ್ತು. ಜಾತಿಪದ್ಧತಿಯ ಊಳಿಗಮಾನ್ಯ ಸಮಾಜಕ್ಕೆ ಪ್ರಜಾಪ್ರಭುತ್ವದ ಬೆನ್ನೆಲುಬಾಗಿ ಪ್ರತ್ಯೇಕ ಚುನಾಯಿಕಗಳಿರುತ್ತಿದ್ದವು. ಇದು ಜಾತಿ ವ್ಯವಸ್ಥೆಗೆ ಮದ್ದು ಎಂದು ಬ್ರಿಟಿಷರೇ ಒಪ್ಪಿದ ವ್ಯವಸ್ಥೆ. ಗಾಂಧೀಜಿ ಮತ್ತು ಅವರ ಹಿಂಬಾಲಕರು ಅದನ್ನು ಸರ್ವನಾಶ ಮಾಡಿ ಬಿಟ್ಟರು. ಈ ನಷ್ಟವನ್ನು ತುಂಬಿಕೊಳ್ಳುವುದಿರಲಿ ಮರೆಯಲೂ ಸಾಧ್ಯವಾಗದ ಸ್ಥಿತಿಯಲ್ಲಿ ಇಂದು ದಲಿತ, ಮುಸಲ್ಮಾನ ಮತ್ತು ಮತ್ತಿತರ ಅಲ್ಪಸಂಖ್ಯಾತ ವರ್ಗದವರಿದ್ದಾರೆ. ಈಗ ನಡೆಯುತ್ತಿರುವುದು ಒಂದು ಪ್ರಹಸನ. ಅನಕ್ಷರಸ್ಥರಿಗೆ, ಅವಿದ್ಯಾವಂತರಿಗೆ ಒಂದು ಸೀರೆ, ಕುಪ್ಪಸ, ಷರ್ಟು, ಪಂಚೆ, ಟೀವಿಗಳನ್ನು ನೀಡಿ ಓಟು ಪಡೆದು ಐದು ವರ್ಷ ಕೊಳ್ಳೆಹೊಡೆಯುವ ರಾಜಕಾರಣಿ ಮಾಡುವ ಪ್ರಹಸನ. ಇಂಥ ಪ್ರಜಾಪ್ರಭುತ್ವವನ್ನು ಅಂಬೇಡ್ಕರ್ ಖಂಡಿತ ಒಪ್ಪುತ್ತಿರಲಿಲ್ಲ. ಪ್ರಜಾಸತ್ತೆಯಲ್ಲಿ ವ್ಯಕ್ತಿ ನೀಡುವ ಮೌಲ್ಯವೆಂದರೆ ತನ್ನ 'ಮತ', ಮತವೆಂದರೆ ಅಭಿಮತ. ಅದು ಆತ್ಮಸಾಕ್ಷಿಯಿಂದ ನೀಡುವಂಥದ್ದು. ಆದರೆ ಭಾರತದ ಪರಿಸ್ಥಿತಿಯಲ್ಲಿ ಇಂಥ ಅಮೂಲ್ಯ ಮತ ಮಲಿನವಾಗಿದೆ. ಚುನಾವಣೆಯಲ್ಲಿ ಮಾರಾಟಕ್ಕಿದೆ. ಅಂದರೆ ಆತ್ಮಸಾಕ್ಷಿಗಳು ಇಲ್ಲಿ ಮಾರಾಟಕ್ಕಿವೆ.

**ಅಸ್ಪೃಶ್ಯತೆಯ ತಾಂಡವ ನೃತ್ಯ - ಮಾನವ ಹಕ್ಕುಗಳ ಉಲ್ಲಂಘನೆ**

ಭಾರತದಲ್ಲಿ ಪ್ರತಿ ೨೦ ನಿಮಿಷಗಳಿಗೊಮ್ಮೆ ದಲಿತರ ವಿರುದ್ಧ ಒಂದು ಅಪರಾಧ ದಾಖಲಾಗುತ್ತದೆ. ಪ್ರತಿ ದಿನವೂ ಮೂವರು ದಲಿತ ಮಹಿಳೆಯರ ಮೇಲೆ ಅತ್ಯಾಚಾರವಾಗುತ್ತದೆ,ಇಬ್ಬರು ದಲಿತರ ಕೊಲೆಯಾಗುತ್ತದೆ, ದಲಿತರ ಎರಡು ಮನೆಗಳು ಸುಡಲ್ಪಡುತ್ತವೆ. ಇವುಗಳು 'ಹಿಮಗಡ್ಡೆಯ ಕುಡಿ' ಎಂದು ಎಲ್ಲರಿಗೂ ತಿಳಿದ ವಿಷಯವೆ. ಯಾಕೆಂದರೆ ಬಹಳಷ್ಟು ಸ್ಥಳಗಳಲ್ಲಿ ದಲಿತರು ಮೇಲ್ಜಾತಿಯ ವಿರುದ್ಧ ದೂರು ದಾಖಲಿಸಲು ಸಾಧ್ಯವೇ ಇಲ್ಲದ ಮಾತು. ಕಾರಣ, ತಮ್ಮ ಹೊಟ್ಟೆಪಾಡಿಗಾಗಿ ದಿನವೂ ಕೂಲಿಗಾಗಿ ಮೇಲ್ಜಾತಿಯವರನ್ನೇ ಅವಲಂಬಿಸ ಬೇಕಾಗಿರುವಾಗ ಜಾತಿಪದ್ಧತಿಯ ಕಟ್ಟುಪಾಡುಗಳೇ ಅಲ್ಲಿ ನಿಯಮಗಳು, ಶಾಸನಗಳು. ಶೋಷಣೆ ರಾಜಾರೋಷವಾಗಿಯೆ ನಡೆಯುವುದರಿಂದ ಅದು ಮಾನವ ಹಕ್ಕುಗಳ ಉಲ್ಲಂಘನೆ ಎಂದು ಪರಿಗಣಿಸುವ ಅವಶ್ಯಕತೆಯಿದೆ. ಅತ್ಯಂತ ಕಠೋರ ಮಾನವ ಹಕ್ಕಿನ ಉಲ್ಲಂಘನೆಯೆಂದರೆ ಅಸ್ಪೃಶ್ಯತೆಯ ಆಚರಣೆ. ಇದನ್ನು ಮಾನವ ಹಕ್ಕುಗಳ ಆಯೋಗ ಗಂಭೀರವಾಗಿ ಪರಿಗಣಿಸಬೇಕಾದ ಅಗತ್ಯವಿದೆ. ಅನೇಕ ವೇಳೆ ಪೊಲೀಸರೇ ದಲಿತರ ದೂರುಗಳನ್ನು ದಾಖಲಿಸಿಕೊಳ್ಳದಿರುವ ಪ್ರಕರಣಗಳು ಪತ್ರಿಕಾ ವರದಿಗಳಲ್ಲಿವೆ. ಅಧಿಕೃತ ದಾಖಲಾತಿಗಳ ಪ್ರಕಾರವೇ ದೇಶದಾದ್ಯಂತ ಮಲ ಹೊರುವವರ ಅಥವಾ ಬರಿಗೈಯಿಂದ ಪಾಯಿಖಾನೆಗಳನ್ನು ತೊಳೆಯುವವರ ಸಂಖ್ಯೆ ೩೪.೩ ಲಕ್ಷ ಎಂದು ತಿಳಿದುಬಂದಿದೆ. ಇದಕ್ಕಿಂತಲೂ ಹೇಯವಾದ ಬರ್ಬರವಾದ ಪದ್ಧತಿ ಬೇರೆಲ್ಲೂ ಇರಲು ಸಾಧ್ಯವಿಲ್ಲ. ಅಂತರರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಇತ್ತಕಡೆ ಗಮನ ಹರಿಸಬೇಕಾದ ಅವಶ್ಯಕತೆ ಇದೆ. ದೇಶದ ೧೬.೫ ಕೋಟಿಗೂ ಹೆಚ್ಚಿನ ಜನರು ಕೇವಲ ತಮ್ಮ ಹುಟ್ಟಿನ ಕಾರಣಕ್ಕಾಗಿ ಮೇಲ್ಜಾತಿ ಜನರಿಂದ ಇಂಥ ಹೀನಾಯವಾದ ಶಿಕ್ಷೆಗೆ ಗುರಿಯಾಗುತ್ತಿದ್ದಾರೆ.

ಭಾರತ ಹಳ್ಳಿಗಳ ದೇಶ. ಹಳ್ಳಿಗಳಲ್ಲಿ ಜಾತಿಪದ್ಧತಿಯ ಅಲಿಖಿತ ಕಾನೂನು ಚಾಲ್ತಿಯಲ್ಲಿರುತ್ತದೆ. ಜಾತ್ಯಸ್ಥ ಕೇರಿಗಳನ್ನು ಒಡೆಯುವ ಕೆಲಸ ಮಾಡುವ ಬದಲು ಜಾತಿವಾರು ಸೈಟು ಹಂಚಿಕೆ ಮಾಡಿ ಅಸ್ಪೃಶ್ಯತೆಯನ್ನು ಪ್ರೋತ್ಸಾಹಿಸುವ ಕೆಲಸ ನಡೆಯುತ್ತಿದೆ. ಕಾಟಾಚಾರಕ್ಕೆ ಎಂಬಂತೆ ಅಸ್ಪೃಶ್ಯತೆ ನಿವಾರಣ ಕಾರ್ಯಕ್ರಮ ಎಂದು ವರ್ಷದಲ್ಲಿ ಒಂದು ದಿನ ಭಾಷಣ ಮಾಡಿಸಿದರೆ ಏನೂ ಆಗುವುದಿಲ್ಲ. ಶಾಲೆಗಳಲ್ಲಿ ಚಾಲ್ತಿಯಲ್ಲಿರುವ ಮಧ್ಯಾಹ್ನದ ಬಿಸಿಯೂಟದ ಕಾರ್ಯಕ್ರಮವೂ ಜಾತಿಕಾರಣದಿಂದ ನೂರಕ್ಕೆ ನೂರು ಅನುಷ್ಠಾನಗೊಂಡಿಲ್ಲ. ದಲಿತ ಅಡಿಗೆ ಮಾಡುವುದಿರಲಿ, ನಾಯಕ ಅಡಿಗೆ ಮಾಡಿದರೆ ಉಪ್ಪಾರ ತಿನ್ನುವುದಿಲ್ಲ, ಉಪ್ಪಾರ ಮಾಡಿದರೆ ಕುಂಬಾರ ತಿನ್ನುವುದಿಲ್ಲ, ಇಂಥ ಹಾಸ್ಯಾಸ್ಪದ ವರದಿಗಳು ಬರುತ್ತಿವೆ. ಅದಕ್ಕಾಗಿ ಮೀಸಲಿಡಲ್ಪಟ್ಟ ಶೇ.೪೦ರಷ್ಟು ಹಣ ಸರ್ಕಾರಕ್ಕೆ ವಾಪಸು ಹೋಗುತ್ತದೆ ಎಂದು ತಿಳಿದುಬಂದಿದೆ.

ಇನ್ನೊಂದು ಕುತೂಹಲಕರ ವಿಷಯವಿದೆ. ಇಂಡಿಯಾದಲ್ಲಿ ಏಡ್ಸ್ ಸಮಸ್ಯೆ ಇಲ್ಲವೆಂದಲ್ಲ; ಇದೆ. ಆದರೆ ಆಫ್ರಿಕಾದಷ್ಟು ಇರಲಾರದು. ಈಗ ಸರ್ಕಾರ ಹಳ್ಳಿಹಳ್ಳಿಗಳಲ್ಲಿ ಏಡ್ಸ್ ಪ್ರಚಾರ ನಡೆಸುತ್ತಿದೆ. ಅದರಲ್ಲಿ ಒಂದು ವಿಧಾನ, ನ್ಯಾಯಬೆಲೆ ಅಂಗಡಿಗಳಲ್ಲಿ ಪಡಿತರ ಮಾರಾಟ ಮಾಡುವಾಗ ಜತೆಗೆ ಕಾಂಡೋಮ್‌ಗಳನ್ನು ಉಚಿತವಾಗಿ ಹಂಚುವುದು. ಹೀಗೆ ಹಂಚಲು ಶುರುಮಾಡಿದ ಮೇಲೆ ಹಳ್ಳಿಯ ಮುಗ್ಧ ಹೆಂಗಸರು ನ್ಯಾಯಬೆಲೆ ಅಂಗಡಿಗೆ ಬರುವುದನ್ನೇ ನಿಲ್ಲಿಸಿಬಿಟ್ಟಿದ್ದರು ಎಂದು ತಿಳಿದುಬಂದಿದೆ. ಸಂಪ್ರದಾಯಸ್ಥ ಸಮಾಜದಲ್ಲಿ ಲೈಂಗಿಕ ತಿಳಿವಳಿಕೆಯನ್ನು ಹರಡಲು ಸೂಕ್ತ ಮಾರ್ಗಗಳನ್ನು ಹುಡುಕುವ ಅಗತ್ಯವಿದೆ. ಅಸ್ಪೃಶ್ಯತೆ ನಿವಾರಣೆ ಕಾರ್ಯಕ್ರಮಗಳನ್ನು ಕದ್ದುಮುಚ್ಚಿ ಮಾಡುವ ಅಗತ್ಯವಿಲ್ಲ. ಗಾಂಧೀಜಿ ಹೇಳುವಂತೆ ಮೇಲ್ಜಾತಿಯವರ ಮನ ಪರಿವರ್ತನೆಗೆ ರಾಜಮಾರ್ಗಗಳನ್ನು ಹುಡುಕಬಹುದು. ಇದೇ ನ್ಯಾಯಬೆಲೆಯ ಅಂಗಡಿಗಳನ್ನು ಅಸ್ಪೃಶ್ಯರ ಕೇರಿಗಳಲ್ಲಿ ಸ್ಥಾಪಿಸಿ ಉಳಿದ ಜಾತಿಯ ಜನ ಅಲ್ಲಿಗೆ ಬರುವಂತೆ ಮಾಡುವುದು ಒಂದು ವಿಧಾನ. ಆಂಧ್ರಪ್ರದೇಶದಲ್ಲಿ ಪ್ರಾಥಮಿಕ ಶಾಲೆಗಳೂ ಕೆಲವು ಹಳ್ಳಿಗಳಲ್ಲಿ ದಲಿತರಿಗೆ ಬೇರೆಯೆ ಇವೆ ಎಂದು ತಿಳಿದು ಆಘಾತವಾಯಿತು.

ಬಹಳ ಮುಖ್ಯವಾಗಿ ಹಳ್ಳಿಗಳಲ್ಲಿ ಜನಸಂಖ್ಯೆ ಏರುತ್ತಲೇ ಇದೆ. ಆಯಾ ಜಾತಿಯ ಕೇರಿಗಳನ್ನು ಹಿಗ್ಗಿಸುವ ಬದಲು ಕೇರಿಗಳನ್ನು ಒಡೆಯುವ ಕೆಲಸ ಮಾಡಬೇಕಾಗಿದೆ. ಎಲ್ಲಾ ಕೇರಿಗಳಲ್ಲು ಎಲ್ಲಾ ಜಾತಿಯವರು ಇದ್ದರೆ ಬೇರೆ ನಳ, ಬೇರೆ ಸಾರ್ವಜನಿಕ ಶೌಚಾಲಯ, ಬೇರೆ ಕ್ಷೌರಿಕರು ಇರುವಂತಹ ವ್ಯವಸ್ಥೆ ತಪ್ಪಿಸಿದರೆ ಬಹಿಷ್ಕಾರದಂತಹ ಶಿಕ್ಷೆಯನ್ನೇ ಬಹಿಷ್ಕಾರ ಮಾಡಬಹುದು. ಭಾರತದ ಸ್ವಾತಂತ್ರ್ಯ ೬೦ ವಸಂತಗಳನ್ನು ಕಂಡಿದ್ದರೂ ಅಸ್ಪೃಶ್ಯತೆಯ ಆಚರಣೆಗೆ ಕಡಿವಾಣವೆ ಇಲ್ಲದಿರುವಾಗ ಮೇಲ್ಜಾತಿಯವರಲ್ಲಿ ಪಾಪಪ್ರಜ್ಞೆ ಮೂಡುವುದು ದೂರವೇ ಉಳಿಯಿತು. ಎಲ್ಲಾ ಅಸಹನೆಗಳಿಗಿಂತಲು ಜಾತಿ ಅ[illegible]ನೆ ಕ್ರೂರವಾದದ್ದು ಎಂಬ ಅರಿವು ಎಲ್ಲರಲ್ಲೂ ಮೂಡುವವರೆಗೂ ಭಾರತೀಯರಿಗೆ ನಿಜವಾದ ಸ್ವಾತಂತ್ರ್ಯದ ಆನಂದ ಲಭಿಸಲಾರದು. ಮಾಧ್ಯಮಗಳ ಮುಖಾಂತರ ಏಡ್ಸ್‌ಗಾಗಿ ಖರ್ಚು ಮಾಡುವ ಹಣದಲ್ಲಿ ಶೇ. ೧೦ರಷ್ಟನ್ನು ಅಸ್ಪೃಶ್ಯತೆ ನಿವಾರಣೆಗೆ ಖರ್ಚುಮಾಡಿದರೆ, ಕೇರಿಗಳನ್ನು ಒಂದುಗೂಡಿಸಿದರೆ ಸ್ವಲ್ಪಮಟ್ಟಿಗಾದರೂ ಹಳ್ಳಿಗರಲ್ಲಿ ಪಾಪ ಪ್ರಜ್ಞೆಯನ್ನು ಬೆಳೆಸಬಹುದು. ಅಂಬೇಡ್ಕರ್ ಚಿಂತನೆಗಳನ್ನು ಬಡವರು, ಶ್ರೀಮಂತರು ಎನ್ನದೆ ಎಲ್ಲ ಜಾತಿಯ ಜನರೂ ಮನನಮಾಡಿಕೊಂಡಾಗಲೇ ಈ ಸಮಾಜ ಕಳಂಕ ಮುಕ್ತವಾಗುತ್ತದೆ.

---

**ಡಾ|| ಮೂಡ್ನಾಕೂಡು ಚಿನ್ನಸ್ವಾಮಿ**
ಮುಖ್ಯ ಲೆಕ್ಕಾಧಿಕಾರಿ, ಕೆ.ಎಸ್.ಆರ್.ಟಿ.ಸಿ. ಸೆಂಟ್ರಲ್ ಆಫೀಸ್
ಕೆ.ಎಚ್.ರಸ್ತೆ, ಶಾಂತಿನಗರ, ಬೆಂಗಳೂರು -೫೬೦೦೨೭

# ಅಸಂಘಟಿತ ಕಾರ್ಮಿಕರಿಗಾಗಿ ರಚಿಸಲಾಗಿರುವ ಕಾನೂನುಗಳು

ಯುಪಿಎ ಸರ್ಕಾರದ ಆದೇಶದ ಮೇರೆಗೆ ಡಾ॥ ಅರ್ಜುನ್ ಸೇನ್‌ಗುಪ್ತ ಆಯೋಗವು ಅಸಂಘಟಿತ ಕಾರ್ಮಿಕರ ಸಮಸ್ಯೆಗಳನ್ನು ಅಧ್ಯಯನಮಾಡಿ ಆ ಸಮುದಾಯದ ಕ್ಷೇಮಾಭಿವೃದ್ಧಿಗಾಗಿ ಸಮಗ್ರ ವರದಿಯೊಂದನ್ನು ಮಂಡಿಸುವುದರ ಮೂಲಕ ಹಲವಾರು ಸಲಹೆಗಳನ್ನು ನೀಡಿದೆ. ಈ ವರದಿಯ ಆಯ್ದ ಭಾಗಗಳನ್ನು ಹೊಸತುವಿನ ಏಪ್ರಿಲ್ ೨೦೦೮ರ ಸಂಚಿಕೆಯಿಂದ ಮೊದಲ್ಗೊಂಡು ಪ್ರತಿ ತಿಂಗಳೂ ಪ್ರಕಟಿಸಲಾಗುತ್ತಿದೆ. ಈ ಬಾರಿ ಅಸಂಘಟಿತ ಕಾರ್ಮಿಕರಿಗಾಗಿ ರಚಿಸಲಾಗಿರುವ ಕಾನೂನುಗಳ ಸಾಧಕಬಾಧಕಗಳ ಬಗ್ಗೆ ವರದಿಯಲ್ಲಿ ಚರ್ಚಿತವಾಗಿರುವ ಮುಖ್ಯಾಂಶಗಳನ್ನು ಓದುಗರ ಗಮನಕ್ಕೆ ತರಲಾಗಿದೆ.



## ಅರ್ಜುನ್ ಸೇನ್‌ಗುಪ್ತ ವರದಿ

ಅಸಂಘಟಿತ ಕಾರ್ಮಿಕರಿಗಾಗಿ ಕೆಲವು ಕಾನೂನುಗಳನ್ನು ರಚಿಸಲಾಗಿದೆ. ಆದರೆ ಅವುಗಳನ್ನು ಜಾರಿಗೊಳಿಸುವ ದಿಶೆಯಲ್ಲಿ ಸರ್ಕಾರವು ಸಂಪೂರ್ಣವಾಗಿ ಹಿಂದೆ ಬಿದ್ದಿದೆ. ಆ ನಿಟ್ಟಿನಲ್ಲಿ ಕೆಲವು ಅನುಭವಗಳು ಹೀಗಿವೆ :

**ಕನಿಷ್ಠ ವೇತನಗಳು:** ಅಸಂಘಟಿತ ಕಾರ್ಮಿಕರಿಗಾಗಿ ರಚಿಸಲಾಗಿರುವ ಕಾನೂನುಗಳಲ್ಲಿ ಕನಿಷ್ಠ ವೇತನಕ್ಕೆ ಸಂಬಂಧಪಟ್ಟ ಕಾನೂನು ಪ್ರಮುಖವಾದುದು. ವಿಷಾದದ ಸಂಗತಿ ಎಂದರೆ ಬಹುತೇಕ ರಾಜ್ಯಗಳಲ್ಲಿ ಆ ಬಡ ಕಾರ್ಮಿಕರ ಕೂಳಿಗೆ ಒಂದಷ್ಟು ಪರಿಹಾರವನ್ನೊದಗಿಸಬಹುದಾದ ಈ ಕಾನೂನು ಸರ್ಕಾರದ ಮತ್ತು ಅದರ ಇಲಾಖೆಗಳ ತೀವ್ರ ಉಪೇಕ್ಷೆಗೆ ಗುರಿಯಾಗಿದೆ. ಸಾಮಾನ್ಯವಾಗಿ, ರಾಜ್ಯ ಸರ್ಕಾರಗಳು ಈ ಕಾನೂನುಗಳನ್ನು ಜಾರಿಗೊಳಿಸುವ ಹೊಣೆಗಾರಿಕೆಯನ್ನು ಕಾರ್ಮಿಕ ಇಲಾಖೆಯ ಸಿಬ್ಬಂದಿವರ್ಗದವರಿಗೆ ಒಪ್ಪಿಸಿವೆ. ಇನ್ನು ಕೆಲವು ರಾಜ್ಯ ಸರ್ಕಾರಗಳು ಗ್ರಾಮ ಪಂಚಾಯಿತಿಯ ಅಧಿಕಾರಿಗಳು ಮತ್ತು ಕಂದಾಯ ಇಲಾಖೆ ಸಿಬ್ಬಂದಿವರ್ಗದವರಿಗೆ ಅಧಿಕಾರ ನೀಡಿವೆ. ಆದರೆ, ಬಹಳಷ್ಟು ಕಡೆ ಕಾರ್ಮಿಕರಿಗೆ ನ್ಯಾಯಯುತವಾಗಿ ದೊರಕಬೇಕಿದ್ದ ವೇತನವನ್ನು ನೀಡಲಾಗಿಲ್ಲ ಹಾಗೂ ಅನೇಕ ಅವ್ಯವಹಾರಗಳು ಜರುಗಿವೆ ಎಂಬ ವರದಿಗಳಿವೆ.

೨೦೦೪-೦೫ರ ಅವಧಿಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಾಗೂ ಕೇಂದ್ರಾಡಳಿತ ಪ್ರದೇಶದ ಸರ್ಕಾರಗಳು ಕನಿಷ್ಠ ವೇತನ ಕಾಯದೆಯಡಿ ವಿವಿಧ ರಾಜ್ಯಗಳಲ್ಲಿ ೫,೮೭,೩೯೭ ತನಿಖೆಗಳನ್ನು ಕೈಗೊಂಡಿವೆ ಎಂದು ಭಾರತ ಸರ್ಕಾರದ ಕಾರ್ಮಿಕ ಸಚಿವಾಲಯ ವರದಿ ಮಾಡಿದೆ. ಈ ತನಿಖೆಗಳಲ್ಲಿ ಮಿಜೋರಾಂ, ಸಿಕ್ಕಿಂ ಮತ್ತು ಲಕ್ಷದ್ವೀಪ ರಾಜ್ಯಗಳನ್ನು ಹೊರತುಪಡಿಸಲಾಗಿತ್ತು. ಅವುಗಳಲ್ಲಿ ೬,೨೨,೬೭೩ ಕಾರ್ಮಿಕರು ಅವ್ಯವಹಾರಗಳಿಗೆ ಗುರಿಯಾಗಿ ತಮಗೆ ಸಲ್ಲಬೇಕಾಗಿದ್ದ ಸೌಲಭ್ಯಗಳಿಂದ ವಂಚಿತರಾಗಿದ್ದರು ಎಂಬ ಅಂಶವು ಗಮನಕ್ಕೆ ಬಂದು ೩,೯೯,೯೨೧ ಕಾರ್ಮಿಕರಿಗೆ ನ್ಯಾಯ ಒದಗಿಸಲಾಯಿತು. ಆ ಕುರಿತ ಪರಿಹಾರಕ್ಕಾಗಿ ಒಟ್ಟು ೯ ಕೋಟಿ ರೂ.ಗಳ ಬೇಡಿಕೆಗಳನ್ನು ಸಲ್ಲಿಸಲಾಗಿದ್ದು, ಕೇವಲ ೫೦,೫೯೯ ರೂ.ಗಳಷ್ಟು ಮೊತ್ತದ ಪರಿಹಾರವನ್ನು ನೀಡಲಾಯಿತು. ಇದೇ ೨೦೦೪-೦೫ರ ಅವಧಿಯಲ್ಲಿ ೯,೫೭೨ ಮೊಕದ್ದಮೆಗಳನ್ನು ಹೂಡಲಾಗಿತ್ತು. ಆ ಹೊತ್ತಿಗಾಗಲೇ ೫೬,೦೮೯ ಖಟ್ಲೆಗಳು ಬಾಕಿಯಿದ್ದವು. ಇವುಗಳಲ್ಲಿ ಪರಿಹಾರ ಕಂಡದ್ದು ೫,೯೨೫ ಮಾತ್ರ. ನೀಡಿದ ಪರಿಹಾರದ ಮೊತ್ತ ೭ ಕೋಟಿ ೫೦ ಲಕ್ಷ ರೂ.ಗಳು. ಈ ಪ್ರಕ್ರಿಯೆಯಲ್ಲಿ ೧ ಕೋಟಿ ೯೦ ಲಕ್ಷ ರೂ.ಗಳಷ್ಟು ದಂಡ ವಿಧಿಸಲಾಗಿದ್ದು, ವಸೂಲಾದ ಮೊತ್ತ ೧ ಕೋಟಿ ೬೦ ಲಕ್ಷ ರೂ.ಗಳು ಮಾತ್ರ.

ಅಸಂಘಟಿತ ಕಾರ್ಮಿಕರ ಕಾನೂನನ್ನು ಉಲ್ಲಂಘಿಸಲಾದ ಅತಿ ಹೆಚ್ಚಿನ ಪ್ರಕರಣಗಳು ಮಹಾರಾಷ್ಟ್ರ ಮತ್ತು ಚಂಡೀಗಢಗಳಲ್ಲಿ ಜರುಗಿವೆ. ಇತ್ಯರ್ಥವಾದ ಖಟ್ಲೆಗಳ ಸಂಖ್ಯೆ ಗುಜರಾತಿನಲ್ಲೇ ಹೆಚ್ಚು (೨೫,೬೯೦). ಅತಿ ಹೆಚ್ಚಿನ ಮೊತ್ತದ ದಂಡ ವಸೂಲಾದದ್ದು ಮಹಾರಾಷ್ಟ್ರದಲ್ಲಿ. ಆಡಳಿತವರ್ಗದವರು ಸಂಧಾನದ ಮೂಲಕ, ಮನವೊಲಿಸುವುದರ ಮೂಲಕ ಉದ್ಯಮಿಗಳು, ಗುತ್ತಿಗೆದಾರರು ಕಾಯಿದೆಯಲ್ಲಿ

ನಿಗದಿಪಡಿಸಿರುವ ವಿಧಿಗಳು, ಕಟ್ಟಳೆಗನುಸಾರವಾಗಿ ವ್ಯವಹರಿಸುವಂತೆ ನೋಡಿಕೊಂಡದ್ದು ಗಮನಿಸಬೇಕಾದ ಸಂಗತಿ. ಹಾಗೊಮ್ಮೆ ಕಾಯಿದೆ ಉಲ್ಲಂಘನೆಯಾದ ಸಂದರ್ಭಗಳಲ್ಲಿ ಕಾನೂನು ಕ್ರಮ ಜರುಗಿಸಿದ ಪ್ರಕರಣಗಳೂ ಇವೆ. ಕೂಲಿ, ಬೋನಸ್ಸು, ಓವರ್‌ಟೈಮ್ ವೇತನಗಳನ್ನು ನೀಡದೆ ಇರುವುದು, ಸೂಕ್ತ ದಾಖಲೆಗಳನ್ನು ವ್ಯವಸ್ಥಿತವಾಗಿ ಇಡದೆ ಇರುವುದು, ನೋಟಿಸುಗಳನ್ನು ಪ್ರದರ್ಶಿಸದೆ ಇರುವುದು, ನಿಗದಿತ ವೇಳೆಗಿಂತ ಹೆಚ್ಚಾಗಿ ದುಡಿಸಿಕೊಳ್ಳುವುದು, ವಾರದ ರಜೆ ನಿರಾಕರಿಸುವುದು ಇವೇ ಮೊದಲಾದ ಲೋಪದೋಷಗಳು ಈ ವರದಿಯನ್ನು ತಯಾರಿಸುವ ಅವಧಿಯಲ್ಲಿ ಕಂಡುಬಂದಿವೆ. ಈ ಆಯೋಗವು ಆಯಾ ಕಾರ್ಮಿಕ ಇಲಾಖೆಗಳೊಡನೆ ನಡೆಸಿದ ಮಾತುಕತೆಗಳ ಮೂಲಕ ಮೇಲ್ಕಾಣಿಸಿದ ಕೆಲವು ಲೋಪದೋಷಗಳನ್ನು ಸರಿಪಡಿಸಲು ಪ್ರಯತ್ನಿಸಲಾಗಿದೆ.

**ವಲಸೆ ಕಾರ್ಮಿಕರು:** ವಲಸೆ ಕಾರ್ಮಿಕರ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಕೆಲವು ಕಾನೂನುಗಳನ್ನು ರಚಿಸಲಾಗಿದೆ. ಆದರೆ, ಅವುಗಳನ್ನು ಸರಿಯಾಗಿ ಜಾರಿಗೊಳಿಸಲಾಗುತ್ತಿಲ್ಲ. ಇದರಿಂದಾಗಿ ಯಾವುದೇ ಒಂದು ನಿರ್ದಿಷ್ಟ ನೆಲೆ ಇಲ್ಲದ ಈ ಅಮಾಯಕ ಜನರು ತೀವ್ರ ಆರ್ಥಿಕ ಶೋಷಣೆಗೆ ಗುರಿಯಾಗಿದ್ದಾರೆ. ಈಗಾಗಲೇ ಜಾರಿಯಲ್ಲಿರುವ ಕನಿಷ್ಠ ವೇತನ ಕಾಯಿದೆ (೧೯೪೮), ಗುತ್ತಿಗೆ ಕಾರ್ಮಿಕರ ಕಾಯಿದೆ (೧೯೭೦), ಸಮಾನ ವೇತನ ಕಾಯಿದೆ (೧೯೭೬), ಕಟ್ಟಡ ಕಾರ್ಮಿಕರ ಕಾಯಿದೆ (೧೯೯೬), ಕಾರ್ಮಿಕರ ಪರಿಹಾರ ಕಾಯಿದೆ (೧೯೨೩), ವೇತನ ಪಾವತಿ ಕಾಯಿದೆ(೧೯೩೬) ಮತ್ತು ಜೀತದಾಳುಗಳ ಕಾಯಿದೆ(೧೯೭೬), ಇವು ವಲಸೆ ಕಾರ್ಮಿಕರಿಗೂ ಅನ್ವಯವಾಗುತ್ತವೆ.

ಒಂದು ರಾಜ್ಯದಿಂದ ಇನ್ನೊಂದು ರಾಜ್ಯಕ್ಕೆ ವಲಸೆ ಹೋಗುವ ಕಾರ್ಮಿಕರನ್ನು ಕೆಲಸಕ್ಕೆ ನೇಮಕ ಮಾಡಿಕೊಳ್ಳುವ ಸಂದರ್ಭಗಳಲ್ಲಿ ಹಲವಾರು ಬಗೆಯ ದುರ್ವ್ಯವಹಾರಗಳು ಜರುಗುವುದು ಸಾಮಾನ್ಯವಾಗಿಬಿಟ್ಟಿದೆ. ಇವುಗಳನ್ನು ತಡೆಗಟ್ಟಲು ಪ್ರತ್ಯೇಕವಾಗಿ ಅಂತರರಾಜ್ಯ ವಲಸೆ ಕಾರ್ಮಿಕರ ಕಾಯಿದೆ (೧೯೭೯)ಯೂ ಇದೆ. ಆದರೆ ಈ ಕಾಯಿದೆಯ ವ್ಯಾಪ್ತಿಯನ್ನು ಐದು ಅಥವಾ ಅದಕ್ಕಿಂತ ಹೆಚ್ಚಿನ ಸಂಖ್ಯೆಯ ವಲಸೆ ಕಾರ್ಮಿಕರನ್ನು (ಅಂತರರಾಜ್ಯ) ನೇಮಿಸಿಕೊಳ್ಳುವ ಮಧ್ಯವರ್ತಿಗಳು ಮತ್ತು ಗುತ್ತಿಗೆದಾರರ ವ್ಯವಹಾರಗಳಿಗೆ ಮಾತ್ರ ಮಿತಿಗೊಳಿಸಲಾಗಿದೆ. ಈ ಅಂತರರಾಜ್ಯ ವಲಸೆ ಕಾರ್ಮಿಕರ ಕಾಯಿದೆಯ ನಿಬಂಧನೆಗಳು: (೧) ಸಂಬಂಧಪಟ್ಟ ಸರ್ಕಾರಿ ಕಛೇರಿಗಳಲ್ಲಿ ಗುತ್ತಿಗೆದಾರರು ಮತ್ತವರ ಸಂಸ್ಥೆಗಳ ಹೆಸರನ್ನು ನೋಂದಾಯಿಸಿಕೊಳ್ಳಬೇಕು. (೨) ಆ ಕಛೇರಿಯ ಅಧಿಕಾರಿಗಳು ಅವರಿಗೆ ಪರವಾನಗಿ ನೀಡಿರಬೇಕು. (೩) ಗುತ್ತಿಗೆದಾರರು ತಾವು ನೀಡುವ ಕೂಲಿ, ಬಡ್ತಿ, ಪ್ರಯಾಣ ಭತ್ಯಗಳಂತಹ ವಿವರಗಳುಳ್ಳ ಪಾಸ್‌ಬುಕ್ಕನ್ನು ಕಾರ್ಮಿಕರಿಗೆ ನೀಡಬೇಕು. (೪) ಗುತ್ತಿಗೆದಾರರು ಕನಿಷ್ಠ ಅಥವಾ ಒಪ್ಪಂದಕ್ಕೆ ತಕ್ಕಂತೆ ಇಲ್ಲವೆ ಅದಕ್ಕೂ ಹೆಚ್ಚಿನ ವೇತನವನ್ನು ನಿಗದಿತ ತಾರೀಖಿಗೆ ನೀಡಬೇಕು. ಅಂತೆಯೇ ವೈದ್ಯಕೀಯ ಸೌಲಭ್ಯ, ವಸತಿ, ಉಡುಗೆಗಳಂತಹ ದಿನನಿತ್ಯ ಅಗತ್ಯತೆಗಳನ್ನು ಸೂಕ್ತ ರೀತಿಯಲ್ಲಿ ಒದಗಿಸಬೇಕು. ಕೆಲಸದ ವೇಳೆಯಲ್ಲಿ ಸಮಸ್ಯೆಗಳು, ಬಿಕ್ಕಟ್ಟುಗಳು ತಲೆದೋರಿದರೆ ಸಂಬಂಧಪಟ್ಟ ಸ್ಥಳೀಯ ಸರ್ಕಾರಿ ಇಲಾಖೆಯೊಂದಿಗಾಗಲಿ ಇಲ್ಲವೇ ಕಾರ್ಮಿಕರು ತಮ್ಮ ಸ್ವಂತ ರಾಜ್ಯಕ್ಕೆ ಹಿಂತಿರುಗಿಹೋಗಿದ್ದರೆ, ಅಲ್ಲಿನ ಸರ್ಕಾರಿ ಇಲಾಖೆಯೊಡನೆ ಕಾರ್ಮಿಕರು ಸಂಧಾನ ನಡೆಸಿ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಈ ಕಾಯಿದೆ ಅವಕಾಶ ಮಾಡಿಕೊಟ್ಟಿದೆ. ಈ ಯಾವುದೇ ವಿಧಿ ನಿಯಮಗಳ ಉಲ್ಲಂಘನೆಯಾದಲ್ಲಿ ತಪ್ಪಿತಸ್ಥರಿಗೆ ದಂಡ ವಿಧಿಸಲೂ ಈ ಕಾಯಿದೆಯಡಿ ಅವಕಾಶವಿದೆ.

ಇಷ್ಟಾದರೂ ಈ ಕಾಯಿದೆಯಲ್ಲಿರುವ ಧನಾತ್ಮಕ ಅಂಶಗಳಿಂದ ಅಸಂಖ್ಯಾತ ಕಾರ್ಮಿಕರು ವಂಚಿತರಾಗಿ ಇರುವುದು ಒಂದು ದುರಂತವೇ ಸರಿ. ಈ ಪರಿಸ್ಥಿತಿಗೆ ಒಂದು ಕಡೆ ಸರ್ಕಾರಿ ಇಲಾಖೆಗಳ ಅದಕ್ಷತೆಯು ಒಂದು ಕಾರಣವಾದರೆ, ತಮ್ಮ ಏಳಿಗೆಗಾಗಿಯೇ ಇರುವ ಕಾನೂನುಗಳ ಬಗ್ಗೆ, ತಮ್ಮ ಹಕ್ಕುಬಾಧ್ಯತೆಗಳ ಬಗ್ಗೆ ಕಾರ್ಮಿಕರಿಗೆ ತಿಳುವಳಿಕೆ ಇಲ್ಲದಿರುವುದು ಇನ್ನೊಂದು ಕಾರಣವಾಗಿದೆ. ತಮ್ಮದೇ ನೆಲೆಯಿಲ್ಲದೆ ಅತಿ ಕಡಿಮೆ ಕೂಲಿಗಾಗಿ ಊರಿಂದ ಊರಿಗೆ ರಾಜ್ಯದಿಂದ ರಾಜ್ಯಕ್ಕೆ ವಲಸೆ ಹೋಗುವ ಈ ಜನವಿಭಾಗದವರಿಗೆ ಪೊಲೀಸ್ ಇಲಾಖೆ ಮತ್ತು ಅಂಚೆ ಇಲಾಖೆಗಳ ಸಿಬ್ಬಂದಿಯವರು ದೊಡ್ಡ ದೊಡ್ಡ ವ್ಯಾಪಾರಸ್ಥರು, ರೈಲ್ವೇ ಪೊಲೀಸರು ಮುಂತಾದವರು ಕಿರುಕುಳ ನೀಡುತ್ತಿದ್ದು, ಇವರ ಬದುಕು ನರಕಸದೃಶವಾಗಿದೆ.

**ಬಾಲ ಕಾರ್ಮಿಕರು :** ಬಾಲ ಕಾರ್ಮಿಕರ ಕುರಿತ ಅಧ್ಯಯನಗಳು, ಅದರಲ್ಲೂ ಬಾಲ ಕಾರ್ಮಿಕರ ಕಾಯಿದೆಯನ್ನು ಜಾರಿಗೆ ತಂದ ನಂತರ, ರಾಜ್ಯ ಸರ್ಕಾರಗಳು ಈ ದಿಶೆಯಲ್ಲಿ ತೆಗೆದುಕೊಂಡ ಕ್ರಮಗಳು ಅಲ್ಪ ಸ್ವಲ್ಪ ಯಶಸ್ಸು ಕಂಡಿವೆ ಎಂದು ಸರ್ಕಾರದ ಅಂಕಿಅಂಶಗಳು ತಿಳಿಸುತ್ತವೆ. ಕೈಗಾರಿಕಾ ಕ್ಷೇತ್ರವನ್ನು ಕೇಂದ್ರೀಕರಿಸಿ ಕೆಲವು ದಿಟ್ಟ ಕ್ರಮಗಳನ್ನು ತೆಗೆದುಕೊಂಡ ಪರಿಣಾಮವಾಗಿ ೧೯೮೦-೯೦ರ ಅವಧಿಯಲ್ಲಿ ಬಾಲ ಕಾರ್ಮಿಕರ ಸಮಸ್ಯೆಯು ಇಳಿಮುಖ ಕಂಡಿದೆ ಎಂದು ಅದೇ ಅಂಕಿಅಂಶಗಳಿಂದ ತಿಳಿದುಬರುತ್ತದೆ. ಅದೇ ವೇಳೆ ಕೆಲವು ಮೂಲಗಳಿಂದ ಸಂಗ್ರಹಿಸಿದ ಅಂದಾಜಿನಂತೆ ಈ ಸಮಸ್ಯೆಯು ಅಸಂಘಟಿತ ಕ್ಷೇತ್ರದ ಸಣ್ಣ ಪ್ರಮಾಣದ ಕಾರ್ಖಾನೆಗಳು ಮತ್ತು ಗೃಹ ಕೈಗಾರಿಕೆಗಳಲ್ಲಿ ಸಾಕಷ್ಟು ಉಲ್ಬಣಗೊಂಡಿದೆ ಎಂದು ಹೇಳಬಹುದು. ಇವು ಹೆಚ್ಚಾಗಿ ಅಧಿಕಾರಿಶಾಹಿಯ ಕಣ್ಣಿಗೆ ಬೀಳುವುದಿಲ್ಲ; ಇಲ್ಲವೇ ಈ ಕುರಿತು ಅವರು ನಿರ್ಲಿಪ್ತರಾಗಿರುತ್ತಾರೆ. ಹಲವಾರು ತಜ್ಞರು ಇಂತಹ ಬೆಳವಣಿಗೆಗೆ ಸ್ವಲ್ಪ ಮಟ್ಟಿಗೆ ಕಾಯಿದೆಯಲ್ಲಿರುವ ಕೆಲವು ನ್ಯೂನತೆಗಳೇ ಕಾರಣ ಎಂದು ಅಭಿಪ್ರಾಯಪಡುತ್ತಾರೆ.

**ಜೀತ ಕಾರ್ಮಿಕರ ಸಮಸ್ಯೆ:** ಜೀತ ಕಾರ್ಮಿಕ ವ್ಯವಸ್ಥೆ (ರದ್ದತಿ/ನಿರ್ಮೂಲನ) ಕಾಯಿದೆಯು ಇಂತಹ ಮಾನವ ವಿರೋಧಿ ಪದ್ಧತಿಯನ್ನು ಕಿತ್ತೊಗೆಯಲು ೧೯೭೬ರಲ್ಲಿ ಶಾಸನಬದ್ಧವಾದ ಒಂದು ಚೌಕಟ್ಟನ್ನು ನಿರ್ಮಿಸಿತು. ಆದರೆ, ಉಚ್ಚ ನ್ಯಾಯಾಲಯ ಮತ್ತು ರಾಷ್ಟ್ರೀಯ ಮಾನವ ಹಕ್ಕು ಆಯೋಗ ಎರಡೂ ಸಂಸ್ಥೆಗಳು ಅಭಿಪ್ರಾಯಪಡುವಂತೆ ಸಾಮಾನ್ಯವಾಗಿ ಹಲವಾರು ರಾಜ್ಯಗಳಲ್ಲಿ ಈ ಕಾಯಿದೆಯನ್ನು ಜಾರಿಗೊಳಿಸುವ ಪ್ರಕ್ರಿಯೆ ಸಾಕಷ್ಟು ಹಿಂದೆಬಿದ್ದಿದೆ. ಈ ನಿಟ್ಟಿನಲ್ಲಿ ಪರಿಸ್ಥಿತಿಯನ್ನು ಸುಧಾರಿಸಲು ರಾಷ್ಟ್ರೀಯ ಮಾನವ ಹಕ್ಕು ಆಯೋಗ ಮತ್ತು ವಿಶೇಷ ವರದಿಗಾರರ ಸಮಿತಿ, ಎರಡೂ ವಿಶೇಷ ತಜ್ಞರ ಸಮಿತಿಯೊಂದನ್ನು ರಚಿಸಿದವು. ಈ ಕ್ರಮದಿಂದಾಗಿ ಶಾಸಕಾಂಗ ವ್ಯವಸ್ಥೆ ಸ್ವಲ್ಪ ಮಟ್ಟಿಗಾದರೂ ಚುರುಕಿನಿಂದ ಆಸ್ಥೆ ವಹಿಸುವಂತಾಗಿ

ತಳಮಟ್ಟದಲ್ಲಿ ಜನಸಾಮಾನ್ಯರೊಡನೆ ಕೆಲಸ ಮಾಡುವ ಸರ್ಕಾರೇತರ ಸಂಘಸಂಸ್ಥೆಗಳು ಜೀತದಾಳುಗಳ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳುವಂತಾಗಿದೆ. ಒಂದೊಮ್ಮೆ ಜೀತದಾಳುಗಳನ್ನು ದಾಸ್ಯದಿಂದ ಬಿಡುಗಡೆ ಮಾಡಿದರೂ ಸಹ ಅವರ ಪುನರ್ವಸತಿಯ ಪ್ರಶ್ನೆಯು ದೊಡ್ಡ ಸವಾಲಾಗಿಯೇ ಉಳಿದಿದೆ.

ಭಾರತ ಸರ್ಕಾರದ ಕಾರ್ಮಿಕ ಸಚಿವಾಲಯದ ಪ್ರಾಯೋಜಕತ್ವದಲ್ಲಿ ಜೀತದಾಳುಗಳ ಪುನರ್ವಸತಿಗಾಗಿ ತಲಾ ೪೦೦೦ ರೂ.ಗಳಷ್ಟು ಪರಿಹಾರ ನೀಡುವ ಯೋಜನೆಯೊಂದನ್ನು ಪ್ರಾರಂಭಿಸಲಾಯಿತು. ಈ ಯೋಜನೆಯಡಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈ ಮೊತ್ತವನ್ನು ಸಮವಾಗಿ ಹಂಚಿಕೊಳ್ಳಬೇಕೆಂಬ ಷರತ್ತನ್ನು ವಿಧಿಸಲಾಗಿತ್ತು. ಈ ಪರಿಹಾರ ಧನವನ್ನು ಹಂತಹಂತವಾಗಿ ಹೆಚ್ಚಿಸಿಕೊಂಡು ಬರಲಾಗುತ್ತಿದ್ದು, ಮೇ ೨೦೦೦ ಇಸವಿಯ ಹೊತ್ತಿಗೆ ಅದು ರೂ. ೨೦,೦೦೦ದಷ್ಟಾಗಿದೆ. ಈ ಯೋಜನೆಯನ್ನು ಜಾರಿಗೆ ತರುವಲ್ಲಿ ಸಮೀಕ್ಷೆ, ಪ್ರಚಾರ ಮೊದಲಾದ ಬಾಬ್ತುಗಳಿಗೆ ತಗಲುವ ಖರ್ಚನ್ನು ಕೇಂದ್ರವೇ ವಹಿಸಿಕೊಳ್ಳುತ್ತದೆ. ಕೇಂದ್ರ ಸರ್ಕಾರವು ರೂಪಿಸಿರುವ ಭೂ ವಿತರಣೆಯಂತಹ ಯೋಜನೆಗಳಲ್ಲಿ ಆದ್ಯತೆಯ ಮೇರೆಗೆ ಬಿಡುಗಡೆಗೊಂಡ ಜೀತದಾಳುಗಳಿಗೆ ನೌಕರಿ ನೀಡಲಾಗುತ್ತದೆ. ಇದಲ್ಲದೆ, ರಾಜ್ಯ ಸರ್ಕಾರಗಳು ಅವರ ಪುನರ್ವಸತಿಗಾಗಿ ಕೆಲವು ನಿರ್ದಿಷ್ಟ ಯೋಜನೆಗಳನ್ನು ರೂಪಿಸಿವೆ. ಒಟ್ಟಾರೆಯಾಗಿ ಈ ಯೋಜನೆಯು ಯಶಸ್ವಿಯಾಗುವ, ಅದರಲ್ಲೂ ಅಂತರರಾಜ್ಯ ವಲಸೆ ಕಾರ್ಮಿಕರ ಸಮಸ್ಯೆಗಳು ಪರಿಹಾರ ಕಾಣುವ ನಿಟ್ಟಿನಲ್ಲಿ ಕೈಗೊಂಡಿರುವ ಪ್ರಯತ್ನಗಳು ಕುಂಟುತ್ತಲೇ ಸಾಗಿವೆ. ಅಧಿಕಾರಶಾಹಿಯೂ ಈ ದುಃಸ್ಥಿತಿಗೆ ಕಾರಣ ಎಂಬುದನ್ನು ಇಲ್ಲಿ ಒತ್ತಿ ಹೇಳುವ ಅಗತ್ಯವಿಲ್ಲ. ಉದ್ದಿಮೆದಾರರು ಮತ್ತು ಗುತ್ತಿಗೆದಾರರ ವಿರುದ್ಧ ಕಟ್ಟುನಿಟ್ಟಾದ ಕ್ರಮಗಳನ್ನು ತೆಗೆದುಕೊಳ್ಳಲು ಈ ಜನ ಹಿಂದೆಮುಂದೆ ನೋಡುತ್ತಾರೆ. ಎಲ್ಲೋ ಬೆರಳೆಣಿಕೆಯಷ್ಟು ಜನರಿಗೆ ಈ ಯೋಜನೆಯಿಂದ ಪರಿಹಾರ ದೊರಕಿದ್ದರೂ ಯಾವುದೇ ಜೀವನಾಧಾರವಿಲ್ಲದ, ಬಿಡಿಗಾಸಿನಷ್ಟು ಸಂಪಾದನೆಯಿಲ್ಲದ ಈ ಅನಾಮಿಕರು ಅನಿವಾರ್ಯವಾಗಿ ಮತ್ತೆ ಜೀತದಾಳುಗಳಾಗಿ ಅಮಾನವೀಯ ಬದುಕಿಗೆ ಮೊರೆಹೋಗುವಂತಹ ಸ್ಥಿತಿ ನಿರ್ಮಾಣವಾಗಿದೆ. ಇಡೀ ಸಮಸ್ಯೆಯನ್ನು ಹೊಸ ದೃಷ್ಟಿಕೋನದಿಂದ ವಿಮರ್ಶಿಸಬೇಕಿದೆ. ಆ ಜನರನ್ನು ಸಂಘಟಿಸುವತ್ತ, ಅವರಲ್ಲಿ ಜಾಗೃತಿ ಮೂಡಿಸುವತ್ತ ಈ ಕೂಡಲೇ ಪ್ರಯತ್ನಗಳು ಜರುಗಬೇಕಿದೆ.

**ಕಾನೂನುಗಳು - ಇತಿಮಿತಿಗಳು :** ಮೇಲ್ಕಾಣಿಸಿದ ಕಾನೂನುಗಳನ್ನು ಜಾರಿಗೊಳಿಸುವಲ್ಲಿ ಹಲವಾರು ಇತಿಮಿತಿಗಳು ಎದುರಾಗುತ್ತವೆ. ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಈ ಕುರಿತು ಅಧ್ಯಯನವನ್ನು ಕೈಗೊಂಡು ಅವುಗಳನ್ನು ಹೀಗೆ ಪಟ್ಟಿಮಾಡಿದೆ: ಲಕ್ಷಾಂತರ ಅಸಂಘಟಿತ ಕಾರ್ಮಿಕರು ಹಲವಾರು ಕ್ಷೇತ್ರಗಳಲ್ಲಿ ಮತ್ತು ರಾಜ್ಯಗಳಲ್ಲಿ ಚದುರಿಹೋಗಿದ್ದಾರೆ. ಅವರ ಸಮಸ್ಯೆಗಳನ್ನು ಪರಿಹರಿಸಲು ನೇಮಕಗೊಂಡಿರುವ ಸಿಬ್ಬಂದಿಯವರ ಸಂಖ್ಯೆ ತೀರ ಕಡಿಮೆ ಅಲ್ಲದೆ ಸರ್ಕಾರವು ಅವರಿಗೆ ಒದಗಿಸಿರುವ ಸೌಲಭ್ಯಗಳೂ ಸಾಕಷ್ಟಿಲ್ಲ; ಕಾರ್ಮಿಕ ಇಲಾಖೆಗಳ ಕಾರ್ಯವಿಧಾನ ಮತ್ತು ನೀತಿಗಳು ಬಹುಮಟ್ಟಿಗೆ ಸಂಘಟಿತ ವಲಯದ ಕಾರ್ಮಿಕರ ಸಮಸ್ಯೆಗಳಿಗಷ್ಟೇ ಕೇಂದ್ರೀಕೃತಗೊಂಡಿವೆ. ಅಸಂಘಟಿತ ಕಾರ್ಮಿಕರಿಗೆ ಹೇಳಿಕೊಳ್ಳುವಂತಹ ತಮ್ಮವರೇ ಆದ ಪ್ರತಿನಿಧಿಗಳೂ ಇಲ್ಲ. ಹಾಗೊಮ್ಮೆ ಅಲ್ಲಲ್ಲಿ ಇದ್ದರೂ ಅವರಿಗಾಗಿ ರಚಿಸಲಾಗಿರುವ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವ ಪ್ರಕ್ರಿಯೆಯಲ್ಲಿ ಅಂತಹ ಪ್ರತಿನಿಧಿಗಳ ಪಾತ್ರವು ಕನಿಷ್ಠ ಮಟ್ಟದ್ದು. ಈ ಎಲ್ಲ ಸಮಸ್ಯೆಗಳನ್ನು ಕುರಿತು ಈಗಾಗಲೇ ಚರ್ಚೆಗಳು ನಡೆಯುತ್ತಿವೆ.

ಭ್ರಷ್ಟಾಚಾರದ ನಿರ್ಮೂಲನೆ
-ನೂತನ ಸಿ. ಎಂ.



ಅವರೇನೋ ಹೊಸ ಉತ್ಸಾಹದಲ್ಲಿ
ಹಾಗೆ ಹೇಳಿದ್ದಾರೆ..., ಅಷ್ಟಕ್ಕೆ
ನೀವ್ಯಾಕೆ ಚಿಂತೆ ಮಾಡ್ತೀರ... ಸ್ವಾಮಿ?!

ಕೈಗಾರಿಕಾ ಬೆಳವಣಿಗೆ ಅಧ್ಯಯನ ಸಂಸ್ಥೆಯು 'ಭಾರತೀಯ ಉದ್ಯಮ ಕ್ಷೇತ್ರದಲ್ಲಿ ಕಾರ್ಮಿಕ ನಿಯಂತ್ರಣ ಅಭಿವೃದ್ಧಿ, ಬಂಡವಾಳ ಹೂಡಿಕೆ ಮತ್ತು ಉದ್ಯೋಗ' ಎಂಬ ವಿಷಯವನ್ನು ಕುರಿತು ಮಹಾರಾಷ್ಟ್ರ, ಉತ್ತರ ಪ್ರದೇಶ, ಆಂಧ್ರ ಪ್ರದೇಶ ಮತ್ತು ಪಶ್ಚಿಮ ಬಂಗಾಳ, ಈ ರಾಜ್ಯಗಳಲ್ಲಿ ವಿಶೇಷ ಅಧ್ಯಯನವನ್ನು ಕೈಗೊಂಡಿದೆ. ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳ ಮೇಲೆ ಕಾರ್ಮಿಕ ನಿಯಂತ್ರಣ ಯೋಜನೆಯು ಎಷ್ಟರಮಟ್ಟಿಗೆ ಪರಿಣಾಮ ಬೀರಿದೆ ಎಂಬ ಅಂಶವೂ ಈ ಅಧ್ಯಯನದ ಭಾಗವಾಗಿದೆ. ಈ ಅಧ್ಯಯನ ಸಂಸ್ಥೆಯ ಅಭಿಪ್ರಾಯದಲ್ಲಿ ಇಲ್ಲಿಯೂ ಕೂಡ ಕಾರ್ಮಿಕ ಇಲಾಖೆಯು ಸಮರ್ಥವಾಗಿರುವ ಸಿಬ್ಬಂದಿವರ್ಗದ ನೆರವು ಮತ್ತಿತರ ಸೌಲಭ್ಯಗಳಿಲ್ಲದೆ ಯಾವುದೇ ಯೋಜನೆಗಳನ್ನು ಯಶಸ್ವಿಯಾಗಿ ಜಾರಿಗೊಳಿಸಲು ಸಾಧ್ಯವಾಗುತ್ತಿಲ್ಲ. ಸಂಸ್ಥೆಯು ಭೇಟಿ ನೀಡಿದ ಮಹಾರಾಷ್ಟ್ರ, ಉತ್ತರ ಪ್ರದೇಶ, ಆಂಧ್ರಪ್ರದೇಶ ಮತ್ತು ಪಶ್ಚಿಮ ಬಂಗಾಳ ರಾಜ್ಯಗಳು ಈ ಆಪಾದನೆಗಳಿಗೆ ಹೊರತಾಗಿಲ್ಲ. ೨೦೦೨ರಲ್ಲಿ ಅಸ್ತಿತ್ವಕ್ಕೆ ಬಂದ ಎರಡನೇ ರಾಷ್ಟ್ರೀಯ ಕಾರ್ಮಿಕರ ಆಯೋಗವು ಹೆಚ್ಚೂ ಕಡಿಮೆ ಇಂತಹುದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದೆ. ಮೇಲ್ಕಾಣಿಸಿದ ಎಲ್ಲ ಕುಂದುಕೊರತೆಗಳನ್ನು ನಿವಾರಿಸಲು ಸರ್ಕಾರವು ಕೂಡಲೇ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬೇಕಿದೆ. ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯು ೧೯೭೪ರಲ್ಲಿ ಕಾರ್ಮಿಕ ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ರೂಪಿಸಿರುವ ನಿಯಮಗಳನ್ನು ಗಣನೆಗೆ ತೆಗೆದುಕೊಳ್ಳಬೇಕಿದೆ.

ಎರಡನೇ ರಾಷ್ಟ್ರೀಯ ಕಾರ್ಮಿಕರ ಆಯೋಗವು ಕಾರ್ಮಿಕ ಇಲಾಖೆಗೆ ಅಗತ್ಯವಿರುವ ಸಿಬ್ಬಂದಿ ವರ್ಗದವರ ಸಂಖ್ಯೆ, ಅವರಿಗೆ ಒದಗಿಸಬೇಕಾದ ಸೌಲಭ್ಯಗಳು, ಕಾರ್ಮಿಕರ ಹಿತರಕ್ಷಣೆಗಾಗಿ ರಚಿಸಲಾಗಿರುವ ಕಾನೂನುಗಳನ್ನು ಸಮರ್ಥವಾಗಿ ಜಾರಿಗೊಳಿಸುವುದು, ಕಾರ್ಖಾನೆ ಕಾಯಿದೆ ಮತ್ತು ಕನಿಷ್ಠವೇತನ ಕಾಯಿದೆಗಳನ್ನು ಜಾರಿಗೆ ತರುವಲ್ಲಿ ಹಾಲಿ ಇರುವ ನ್ಯೂನತೆಗಳನ್ನು ನಿವಾರಿಸುವ ತುರ್ತು ಅಗತ್ಯತೆ ಮುಂತಾದ ವಿಷಯಗಳನ್ನು ಸರ್ಕಾರ ಮತ್ತು ಸಂಬಂಧಪಟ್ಟ ಇಲಾಖೆಗಳು ಗಂಭೀರವಾಗಿ ಪರಿಗಣಿಸಬೇಕಿದೆ.

**ಸ್ವ-ದೃಢೀಕರಣಕ್ಕೆ ಇರುವ ಅವಕಾಶಗಳು :** ಸರ್ಕಾರಿ ಇಲಾಖೆ ಸಿಬ್ಬಂದಿಯವರು ಸಣ್ಣ ಪ್ರಮಾಣದ ಔದ್ಯೋಗಿಕ ಸಂಸ್ಥೆಗಳಿಗೆ ಆಗಾಗ್ಗೆ ಭೇಟಿ ನೀಡಿ ನಡೆಸುವ ತನಿಖೆಗಳಿಂದಾಗಿ ಆ ಸಂಸ್ಥೆಗಳು ತಮ್ಮ ದಿನನಿತ್ಯದ ಚಟುವಟಿಕೆಗಳಲ್ಲಿ ಸಮಸ್ಯೆಗಳನ್ನೆದುರಿಸುತ್ತಿವೆ. ಜಾಗತೀಕರಣ, ಉದಾರೀಕರಣ ನೀತಿಗಳನ್ನು ಅನುಸರಿಸುತ್ತಿರುವ ಹಿನ್ನೆಲೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಣ್ಣ ಪುಟ್ಟ ವಾಣಿಜ್ಯ ಸಂಸ್ಥೆಗಳು ಇಲಾಖಾ ಸಿಬ್ಬಂದಿ ವರ್ಗದವರಿಂದ ಅನುಭವಿಸುತ್ತಿದ್ದ ಕಿರುಕುಳಗಳನ್ನು ಗಮನಕ್ಕೆ ತೆಗೆದುಕೊಂಡು ಆ ದಿಶೆಯಲ್ಲಿ ಸಾಕಷ್ಟು ಸುಧಾರಣೆಗಳನ್ನು ಕೈಗೊಂಡಿವೆ. ಉದಾಹರಣೆಗೆ, ಉತ್ತರ ಪ್ರದೇಶ, ಆಂಧ್ರಪ್ರದೇಶ, ಪಂಜಾಬ್, ಕರ್ನಾಟಕ, ಒರಿಸ್ಸಾ ಮತ್ತು ರಾಜಸ್ಥಾನ, ಈ ರಾಜ್ಯಗಳಲ್ಲಿ ಸ್ಥಳೀಯವಾಗಿ ೧೭ಕ್ಕೂ ಮೀರಿದ ಕಾಯಿದೆಗಳಿದ್ದವು. ಇವುಗಳನ್ನು ಸರಳೀಕರಣಗೊಳಿಸಿರುವುದೇ ಅಲ್ಲದೆ ಸಿಬ್ಬಂದಿಯವರು ಮಾಡುವ ತನಿಖೆಗಳ ಸಂಖ್ಯೆಯನ್ನೂ ಮಿತಗೊಳಿಸಲಾಗಿದೆ.

ಗುಜರಾತ್, ಪಂಜಾಬ್ ಮತ್ತು ರಾಜಸ್ಥಾನ ರಾಜ್ಯ ಸರ್ಕಾರಗಳು ಸ್ವ-ದೃಢೀಕರಣ ಯೋಜನೆಯೊಂದನ್ನು ಜಾರಿಗೊಳಿಸಿವೆ. ವರ್ತಕರು, ಸಣ್ಣ ಉದ್ಯಮಪತಿಗಳು ತಾವೇ ನೀಡುವ ಘೋಷಣಾ ಪತ್ರದಿಂದಾಗಿ ತನಿಖಾಧಿಕಾರಿಗಳು ನೀಡುವ ಭೇಟಿಯ ಸಂಖ್ಯೆ ಸಾಕಷ್ಟು ಕಡಿಮೆಯಾಗಿದೆ. ಈ ಘೋಷಣಾ ಪತ್ರ ೫ ವರ್ಷಗಳ ಕಾಲ ಜಾರಿಯಲ್ಲಿರುತ್ತದೆ. ಆದರೆ, ಈ ಯೋಜನೆಯು ಯಶಸ್ವಿಯಾಗಿಲ್ಲ ಎಂದು ಅಲ್ಲಿನ ರಾಜ್ಯ ಸರ್ಕಾರಗಳೇ ಒಪ್ಪಿಕೊಂಡಿವೆ. ವಿಚಿತ್ರವೆಂದರೆ, ವಾಣಿಜ್ಯ/ವ್ಯಾಪಾರ ಸಂಸ್ಥೆಗಳೂ ಈ ಯೋಜನೆಯ ಬಗ್ಗೆ ಒಲವು ತೋರಿಲ್ಲ.

**ದುಡಿಮೆಯಲ್ಲಿ ಕನಿಷ್ಠ ಮಾನದಂಡಗಳಿಗಾಗಿ ಸ್ವಯಂ ನೀತಿ ಸಂಹಿತೆ:** ಜಾಗತೀಕರಣ ಪ್ರಕ್ರಿಯೆ ತೀವ್ರಗೊಳ್ಳುತ್ತಿರುವ ಮತ್ತು ಭಾರತದಲ್ಲಿ ತಯಾರಾದ ವಸ್ತುಗಳು ಹೆಚ್ಚಿನ ಪ್ರಮಾಣದಲ್ಲಿ ರಫ್ತಾಗುತ್ತಿರುವ ಹಿನ್ನೆಲೆಯಲ್ಲಿ ಸ್ವಯಂ ನೀತಿ ಸಂಹಿತೆಗಳೂ (ಕಾರ್ಮಿಕ ಮಾನದಂಡಗಳು) ನಮ್ಮ ರಾಷ್ಟ್ರದಲ್ಲಿ ಪ್ರಾಮುಖ್ಯತೆ ಪಡೆಯುತ್ತಿವೆ. ಕೊಳ್ಳುವವರ ಅಗತ್ಯತೆಗಳನ್ನು ದೃಷ್ಟಿಯಲ್ಲಿಟ್ಟು ಕೊಂಡು ಸರಕುಗಳನ್ನು ಸಣ್ಣ ಉದ್ಯಮಗಳ ಮಟ್ಟದಲ್ಲಿ ಉತ್ಪಾದಿಸಲಾಗುತ್ತಿದೆ. ಹೊರಗುತ್ತಿಗೆ ಆಧಾರದ [illegible] ತಮ್ಮ ಮನೆಗಳಲ್ಲಿಯೇ ತಯಾರಿಸುವವರಿಗೆ [illegible]

ಕೆಲವು ಸರಕುಗಳನ್ನು ಉತ್ಪಾದಿಸಲು ಅವಕಾಶ ನೀಡಲಾಗುತ್ತಿದೆ. ಇಲ್ಲಿ ಪ್ರಮುಖವಾಗಿ ಕಾಣಬರುವುದು ಬಾಲ ಕಾರ್ಮಿಕರ ಸಮಸ್ಯೆ. ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆಯು ಜಾಗತಿಕ ಮಟ್ಟದಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ ಇಡೀ ವಿಶ್ವದಲ್ಲಿ ೨೦ ಕೋಟಿ ಬಾಲ ಕಾರ್ಮಿಕರಿದ್ದು ಅವರಲ್ಲಿ ಹೆಚ್ಚಿನವರು ಏಷಿಯಾ-ಪೆಸಿಫಿಕ್ ಪ್ರದೇಶದಲ್ಲಿದ್ದಾರೆ. ಅದರಲ್ಲೂ ದಕ್ಷಿಣ ಏಶಿಯಾದ್ದೇ ಸಿಂಹಪಾಲು. ಬಾಲ ಕಾರ್ಮಿಕ ಪದ್ಧತಿಯ ವಿರುದ್ಧ ಕೈಗೊಂಡ ಪ್ರಚಾರದಿಂದಾಗಿ ಈ ಸಮಸ್ಯೆ ಸ್ವಲ್ಪ ಮಟ್ಟಿಗೆ ಕಡಿಮೆಯಾಗಿದ್ದರೂ, ರತ್ನಗಂಬಳಿ/ಜಮಖಾನೆ ಉದ್ಯಮಗಳಲ್ಲಂತೂ ಮುಂದುವರೆಯುತ್ತಲೇ ಇದೆ. ಆದರೆ ಈ ಉದ್ಯಮಗಳು ವಾಸ್ತವಾಂಶವನ್ನು ಮರೆಮಾಚಿ ಈ ಅನಿಷ್ಟ ಪದ್ಧತಿಯಲ್ಲಿ ತೊಡಗಿರುವುದನ್ನು ನಿವಾರಿಸುವಲ್ಲಿ ಸರ್ಕಾರವು ಸಂಪೂರ್ಣವಾಗಿ ಎಡವಿದೆ. ಒಂದು ಅಂದಾಜಿನಂತೆ ೧೯೯೩ರಲ್ಲಿ ಮಗ್ಗಗಳ ಮೇಲೆ ದುಡಿಯುತ್ತಿದ್ದ ಮಕ್ಕಳ ಸಂಖ್ಯೆ ೩ ಲಕ್ಷ.

ಕೆಲವು ಸ್ವಯಂ ಸೇವಾ ಸಂಘಟನೆಗಳೂ ಈ ನಿಟ್ಟಿನಲ್ಲಿ ಕೆಲಸ ಮಾಡುತ್ತಿದ್ದು, ದುಡಿವ ಮಕ್ಕಳ ದಾರುಣ ಪರಿಸ್ಥಿತಿಯನ್ನು ಬಯಲುಗೊಳಿಸಿವೆ. ಕ್ರಿಕೆಟ್, ಫುಟ್‌ಬಾಲ್, ಹಾಕಿ, ವಾಲಿಬಾಲ್, ಷಟಲ್‌ಕಾಕ್ ಮುಂತಾದ ಆಟಗಳಿಗೆ ಸಂಬಂಧಪಟ್ಟಂತೆ ಆಟಗಾರರಿಗೆ ಅಗತ್ಯವಿರುವ ಸಾಮಗ್ರಿಗಳನ್ನು ತಯಾರಿಸುವ ವಿದೇಶಿ ಕಂಪನಿಗಳಿಗೆ, ಆ ಸಾಮಗ್ರಿಗಳನ್ನು ಸ್ಥಳೀಯವಾಗಿ ತಯಾರಿಸುವ ೧೫೦೦ ದೊಡ್ಡ ಹಾಗೂ ಸಣ್ಣ ಪ್ರಮಾಣದ ಕಾರ್ಖಾನೆಗಳಲ್ಲಿ ಸುಮಾರು ೩ ಲಕ್ಷ ಬಾಲ ಕಾರ್ಮಿಕರು ದುಡಿಯುತ್ತಿದ್ದಾರೆ ಎಂದು ಕೆಲವು ಸ್ವಯಂ ಸೇವಾ ಸಂಘಟನೆಗಳು ವರದಿಮಾಡಿವೆ. ಅಂತಹ ವಿದೇಶಿ ಕಂಪನಿಗಳಲ್ಲಿ ಅಡಿಡಾಸ್, ಮೀಟರ್, ಉಂಬ್ರೊ, ಗುನ್ ಮತ್ತು ಮೂರ್, ಡನ್‌ಲಪ್ ಸ್ಲಾಜೆಂಗರ್, ಕೂಕಬುರ‍್ರಾ ಮತ್ತು ಕೊಸೊದಂತಹ ಸಂಸ್ಥೆಗಳೂ ಇವೆ. ಈ ವರದಿಯ ಪ್ರಕಾರ ಹೊರಗುತ್ತಿಗೆ ಆಧಾರದ ಮೇಲೆ ಫುಟ್‌ಬಾಲ್, ಕ್ರಿಕೆಟ್ ಚೆಂಡುಗಳಿಗೆ ಬೇಕಾದ ಚರ್ಮ/ತೊಗಲುಗಳಂತಹ ಸುಮಾರು ೨೦೦ ವಸ್ತುಗಳನ್ನು ಮನೆಗಳಲ್ಲಿಯೇ ತಯಾರಿಸಲಾಗುತ್ತದೆ. ೭ ವರ್ಷದ ಮಕ್ಕಳನ್ನು ಇಂತಹ ಕೆಲಸಗಳಲ್ಲಿ ತೊಡಗಿಸಲಾಗಿದೆ. ಇಂತಹ ಚರ್ಮ ಹದ ಮಾಡುವ ಹೆಚ್ಚಿನ ಕಾರ್ಖಾನೆಗಳು ಜಲಂಧರ್, ಮೀರತ್‌ನಂತಹ ಸ್ಥಳಗಳಲ್ಲಿವೆ. ಅತಿ ಕಡಿಮೆ ವೇತನ ಪಡೆಯುತ್ತಿರುವ, ಕೆಲವು ವಯಸ್ಕ ಕಾರ್ಮಿಕರೂ ಇರುವ ಈ ಕಾರ್ಮಿಕ ಸಮುದಾಯದವರಿಗೆ ಸಂಘಟನಾ ಹಕ್ಕು, ಭವಿಷ್ಯ ನಿಧಿ, ವಿಮೆಗಳಂತಹ ಸೌಲಭ್ಯಗಳನ್ನು ನೀಡಲಾಗುತ್ತಿಲ್ಲ. ಬಾಲ ಕಾರ್ಮಿಕರ ಕುರಿತ ಕಾನೂನುಗಳ ಉಲ್ಲಂಘನೆಯಾಗುತ್ತಿರುವ ಬಗ್ಗೆ ಈಗಾಗಲೇ ವಾದವಿವಾದಗಳು ಹುಟ್ಟಿಕೊಂಡಿವೆ. ವಿಶ್ವಸಂಸ್ಥೆಯು ರೂಪಿಸಿರುವ ಅಂತರರಾಷ್ಟ್ರೀಯ ನಿಯಮಗಳನ್ನು ಗಾಳಿಗೆ ತೂರಿ ಮಾನವೀಯ ಹಕ್ಕುಗಳು, ಪರಿಸರ ಸಂಬಂಧಿತ ಹಕ್ಕುಗಳ ಜೊತೆಗೆ ಚೆಲ್ಲಾಟವಾಡುತ್ತಿರುವುದರ ವಿರುದ್ಧ ರಾಷ್ಟ್ರವ್ಯಾಪಿ ಹೋರಾಟಗಳನ್ನು ರೂಪಿಸಬೇಕಿದೆ. ಈ ದಿಶೆಯಲ್ಲಿ ಈಗಾಗಲೇ ಕೆಲವು ಸರ್ಕಾರೇತರ ಸಂಘಸಂಸ್ಥೆಗಳೂ ಕಾರ್ಯನಿರತವಾಗಿವೆ.

ಇದುವರೆಗೆ ಚರ್ಚಿಸಿರುವ ಸಮಸ್ಯೆಗಳ ಒಟ್ಟು ಸಾರಾಂಶವನ್ನು ಹೀಗೆ ಪಟ್ಟಿಮಾಡಬಹುದಾಗಿದೆ.

ಅಸಂಘಟಿತ ಕಾರ್ಮಿಕರಿಗೆ ಕೆಲವು ಕನಿಷ್ಠ ಸೌಲಭ್ಯಗಳನ್ನು ಒದಗಿಸುವ ನಿಟ್ಟಿನಲ್ಲಿ:

೧. ನಮ್ಮ ರಾಷ್ಟ್ರದಲ್ಲಿ ಸಮಗ್ರ ಹಾಗೂ ಸೂಕ್ತವಾದ ನೀತಿ ನಿಯಮಗಳ ಕೊರತೆಯಿದೆ.

೨. ಕೆಲವೆಡೆ ಅಸ್ತಿತ್ವದಲ್ಲಿದ್ದರೂ ಅವು ತೀರ ಅಸಮರ್ಪಕವಾಗಿವೆ ಮತ್ತು ಅವುಗಳನ್ನು ಜಾರಿಗೊಳಿಸಲು ಸೂಕ್ತ ವ್ಯವಸ್ಥೆಯಿಲ್ಲ. ಎರಡನೇ ಆಯೋಗವೇ ಗುರುತಿಸಿರುವಂತೆ ಸ್ವಯಂ ನಿಯಂತ್ರಣ ವ್ಯವಸ್ಥೆಯಿಂದಾಗಿ ಕಾರ್ಮಿಕರ ಸ್ಥಿತಿಗತಿಗಳಲ್ಲಿ ಯಾವುದೇ ಸುಧಾರಣೆಯೂ ಆಗಿಲ್ಲ.

೩. ಈ ಕಾರ್ಮಿಕರ ಕನಿಷ್ಠ ಸೌಲಭ್ಯಗಳು ದೊರಕುವಂತಾಗಲು ಸಮಗ್ರವಾದ ರಾಷ್ಟ್ರವ್ಯಾಪಿ ಶಾಸನವೊಂದನ್ನು ರೂಪಿಸುವ ಅಗತ್ಯವಿದೆ. ಕಾರ್ಮಿಕ ವರ್ಗದ ವಿವಿಧ ವಲಯಗಳನ್ನು ಗಣನೆಗೆ ತೆಗೆದುಕೊಂಡು, ಅದರಲ್ಲೂ ವಿಶೇಷವಾಗಿ ಕೃಷಿ ಮತ್ತು ಕೃಷಿಯೇತರ ಕಾರ್ಮಿಕರ ಹಿತಾಸಕ್ತಿಗಳನ್ನು ಗಮನದಲ್ಲಿಟ್ಟುಕೊಂಡು ಅಂತಹ ಶಾಸನವನ್ನು ರೂಪಿಸಬೇಕಿದೆ. ಜೊತೆಗೆ, ಗೃಹಕಾರ್ಮಿಕರು ಮತ್ತಿತರ ಕೆಳವರ್ಗದ ಕೂಲಿಕಾರರ ಕನಿಷ್ಠ ಅವಶ್ಯಕತೆಗಳಿಗೆ ಪ್ರಾಮುಖ್ಯತೆ ನೀಡಬೇಕಿದೆ. ಹಾಲಿ ಇರುವ ಕಾನೂನುಗಳಲ್ಲಿರುವ ನ್ಯೂನತೆಗಳನ್ನು ತೊಡೆದುಹಾಕಬೇಕಿದೆ.

ಇವೇ ಅಲ್ಲದೆ ಅಸಂಘಟಿತ ಕಾರ್ಮಿಕರ ಸಮಸ್ಯೆಗಳ ಕುರಿತಂತೆ ಸಮಗ್ರ ಶಾಸನವೊಂದನ್ನು ರೂಪಿಸಬೇಕೆಂಬ ಬೇಡಿಕೆಯ ಜೊತೆಗೆ ಆಯೋಗವು ಇತರೆ ಶಿಫಾರಸ್ಸುಗಳನ್ನೂ ಮಾಡಿದೆ.

*(ಮುಂದುವರಿಯುತ್ತದೆ)*

## ನೀ ಬಂದ ದಿನ



**ನೀ** ಬಂದ ದಿನ
ಮಾತಿಲ್ಲ,
ಮೌನ.

ನೀ ಬಂದ ದಿನ
ಕಥೆಯಿಲ್ಲ,
ಕವನ.

ನೀ ಬಂದ ದಿನ
ಬಿಗುಮಾನವಿಲ್ಲ,
ಅಭಿಮಾನ.

ನೀ ಬಂದ ದಿನ
ಕನಸಿಲ್ಲ,
ಕನವರಿಕೆ.

ನೀ ಬಂದ ದಿನ
ಶೋಕವಿಲ್ಲ,
ಶೋಭೆ.

ನೀ ಬಂದ ದಿನ
ನೋವಿಲ್ಲ,
ನಲಿವು.

ನೀ ಬಂದ ದಿನ
ಜಡತೆಯಿಲ್ಲ,
ಜಡಜತೆ.

**ಚಂದ್ರಶೇಖರ ಚನ್ನಗೌಡ್ರ**
ಶಿರಗೋಡ - ೫೮೧ ೧೦೪
ಹಾನಗಲ್ಲ ತಾಲ್ಲೂಕು, ಹಾವೇರಿ ಜಿಲ್ಲೆ

# ಬಳ್ಳಿ

ಪಿ. ಬಿ. ಪ್ರಸನ್ನ

ಸಗ್ರಿ ಅನಂತ್ರಾಮ ಉಡುಪ್ರನ್ನು ಎಲ್ರೂ ಕರೀತಾ ಇದ್ದದ್ದು 'ಕೈ ಕಂಜಿ ಬಟ್ರ್' ಅಂತ್ಲೇ. ಈ ಹೆಸ್ರಲ್ಲೇ ಅವ್ರು ಮೂಡುಸಗ್ರಿ, ಪಡುಸಗ್ರಿ, ಕುಂಜಿಬೆಟ್ಟು, ಕಡಿಯಾಳಿ ಹೀಗೆ ಎಲ್ಲ ಕಡೆಗೂ ಫೇಮಸ್. ದನ ಸಾಕುದು ಅವ್ರ ಅಪ್ಪ ರಾಂಚಂದ್ರ ಉಡುಪ್ರ ಕಾಲದಿಂದ್ಲೂ ಬಂದದ್ದು. ಎಲ್ರ ಮನೆಯಲ್ಲಿ ಹೆಂಗಸ್ರು ಕೊಟ್ಟಿಗೆಯ ಕೆಲ್ಸ ನೋಡಿಕೊಂಡ್ರೆ, ಉಡುಪ್ರ ಮನೆಯಲ್ಲಿ ಹಾಗಲ್ಲ. ಗಂಡಸ್ರೇ ದನ ಕರಿಯುದು, ಕೊಟ್ಟೆಗೆ ಕ್ಲೀನ್ ಮಾಡುದು, ತೋಟಕ್ಕೆ ಹೋಗಿಬಿಟ್ಟು ಬರುದು, ವಾಪಸ್ ದೇರಿಕೊಂಡು ಬರುದು ಎಲ್ಲ ಮಾಡ್ತಿದ್ರು. ರಾಂಚಂದ್ರ ಉಡುಪ್ರ ಕಾಲದಲ್ಲಿ ಎರ್ಡೇ ಎರ್ಡು ದನಗಳಿತ್ತು. ಅನಂತ್ರಾಮ ಉಡುಪ್ರು ಅಪ್ಪಯ್ಯನಿಗೆ ಸಾಯ ಮಾಡ್ತಾ ಮಾಡ್ತಾ ಕರುಗಳ ಮೇಲೆ ಭಾರೀ ಮೋಕೆ ಬೆಳೆಸಿಕೊಂಡ್ರು. ಯಾವ ಕರುಗಳನ್ನೂ ಮಾರ್ಲಿಕ್ಕೆ ಬಿಡ್ಲಿಲ್ಲ. ''ಎಂತದೇ ಆಗ್ಲಿ ತಾಯಿ ಮಕ್ಕಳನ್ನು ಬೇರೆ ಮಾಡುವುದು ಬೇಡ'' ಅಂತ ಹಟ ಹಿಡ್ದು ಎಲ್ಲ ಕರುಗಳನ್ನು ಉಳ್ಸಿ ಉಳ್ಸಿ ಕೊಟ್ಟಿಗೆಯಲ್ಲಿ ಹಾಲು ಕೊಡುವ ದನಗಳ ಸಂಖ್ಯೆಯೇ ಹದ್ನೈದು ದಾಟಿತ್ತು. ಮೂರು ಜೋಡು ಎತ್ತುಗಳೂ ಇತ್ತು. ''ಅಲ್ಲ ಮಾರ್ರೆ ಉಡುಪ್ರೇ ನಿಮ್ಗೆ ಗದ್ದೆಯೂ ಇಲ್ಲ ಮಣ್ಣೂ ಇಲ್ಲ. ಆದ್ರೂ



ಬೋರಿಗಳು ಎಂತಕ್ಕೆ ಮಾರ್ರೆ ನಿಮ್ಗೆ?'' ಅಂತ ಯಾರಾದ್ರೂ ಮಕ್ಕಾರು ಮಾಡಿದ್ರೆ ''ಉಪಯೋಗ ಇಲ್ಲಾಂತ ಬಿಡುದು ಸಮವಾ ನೀವೇ ಹೇಳಿ ? ನಿಮ್ಗೆ ಪ್ರಾಯ ಆದ್ಮೇಲೆ ನಿಮ್ಮ ಮಕ್ಳು ನಿಮ್ಮನ್ನು ರಸ್ತೆಗೆ ನೂಕಿದ್ರೆ ಅದು ಸರಿಯಾಗ್ತದಾ ?'' ಅಂತ ವಾಪಸು ಪ್ರಶ್ನೆ ಕೇಳ್ತಿದ್ರು ಅನಂತ್ರಾಮ ಉಡುಪ್ರು.

ರಾಂಚಂದ್ರ ಉಡುಪ್ರು ಮಗ್ನಿಗೆ ಮದ್ವೆ ಮಾಡುವಾಗ್ಲೂ ಕೂಡ ಭಾರೀ ಜಾಗ್ರತೆ ಮಾಡಿದ್ರು. ಸೊಸೆಯಾಗಿ ಬರ್ಲಿಕ್ಕಿದ್ದ ಶಾರದಳನ್ನು ಹತ್ರ ಕೂತ್ಕೊಳ್ಸಿ ''ನೋಡು ಮಗ... ನಮ್ಮಲ್ಲಿ ಮಡಿಗಿಡಿ ಎಂತದೂ ಅಷ್ಟೇನೂ ಇಲ್ಲ. ಆದ್ರೆ ನಮ್ಮ ಮಾಣಿಯೇ ಆಸಕ್ತಿ ತೋರ್ಸಿ ಕೊಟ್ಟಿಗೆಯಲ್ಲಿ ಒಂದಷ್ಟು ದನಗಳನ್ನು ನಿಲ್ಸಿದ್ದಾನೆ. ಹಾಲು ಮನೆಗೆ ಆಗಿಯೂ ಹೆಚ್ಚಾಗ್ತದೆ. ಅದನ್ನು ಕಮ್ಮಿ ರೇಟಿಗೆ ಉಡುಪಿಯಲ್ಲಿ ಮಾರ್ತಾನೆ. ನೀನು ಈ ಕಾಲದವ್ಳು ನೀನು ದನಗಳ ಚಾಕ್ರಿ ಮಾಡು ಅಂತ ನಾನು ಹೇಳುದಿಲ್ಲ. ಆದ್ರೆ ನಮ್ಮ ಮಾಣಿ ಮಾಡುವಾಗ ಬೇಡ ಅಂತ ಹೇಳ್ಬೇಡ. ಅವ್ನು ಕೈ ಕಂಜಿಗಳ ಮೇಲೆ ಪ್ರಾಣವೇ ಇಟ್ಟುಕೊಂಡಿದ್ದಾನೆ. ನೀನು ಕೊಟ್ಟಿಗೆ ಕೆಲ್ಸ ಎಂತದೂ ಮಾಡುದು ಬೇಡ. ಆದ್ರೆ ಸೆಗ್ಣಿ..ವಾಸನೆ... ಅಂತೆಲ್ಲ ಹೇಳ್ಬೇಡ ಆಯ್ತಾ'' ಅಂತ ಹೇಳಿದ್ರು. ಶಾರ್ದಕ್ಕ ಅವತ್ತು ಹ್ಯಾಗೆ ತಲೆ ಅಲ್ಲಾಡಿಸಿ ಒಪ್ಪಿಕೊಂಡಿದ್ರೋ ಮರುದಿವ್ಸದಿಂದ ಗಂಡ ದನಗಳ ಚಾಕ್ರಿ ಮಾಡುವಾಗ ಪಿಟ್ಪಿರ್ ಹೇಳಿದವ್ರಲ್ಲ. ಬರ್ತಾ ಬರ್ತಾ ಅವ್ರಿಗೂ ಕೈಕಂಜಿ ಕೆಲ್ಸ ಒಗ್ಗಿತು. ಆದ್ರೂ ಅನಂತ್ರಾಮ ಉಡುಪ್ರು ಹೆಂಡತಿಗೆ ಯಾವ ಕೆಲ್ಸವನ್ನೂ ಮಾಡ್ಲಿಕ್ಕೆ ಬಿಟ್ಟವ್ರಲ್ಲ. ಎಲ್ಲಿಗಾದ್ರೂ ಉಟಕ್ಕೆ ಹೋದ್ರೆ ಮಧ್ಯಾಹ್ನ ಮೂರುಗಂಟೆ ಆದ್ರೆ ಸಾಕು, '' ಎಂಕ್ ಬೊಳಿಯರೆಗ್ ಉಂಡು'' ಅಂತ ಹೇಳಿ ಹೊರಡ್ತಿದ್ರು. ಶಾರ್ದಕ್ಕ ಮೊದ್ಲು ಮೊದ್ಲೆಲ್ಲ ನಾಚಿಕೆ ಪಟ್ಕೊಳ್ತಾ ಇದ್ರು. ''ಎಂತದು ನೀವು ?... ಹೋದ ಕಡೆಯಲ್ಲೆಲ್ಲ ಹೆಂಗಸ್ರು ಹಾಗೆ ಕರೀಲಿಕ್ಕುಂಟು ಕರೀಲಿಕ್ಕುಂಟು ಅಂತ ಹೇಳುದು... ನಂಗೆ ಸುಮಾರಾಗ್ತದೆ'' ಅಂತ ಹೇಳ್ತಿದ್ರು. ಆದ್ರೆ ಉಡುಪ್ರು ಬಿಟ್ಟವ್ರೇ ಅಲ್ಲ. ಉಡುಪ್ರ ಕೈ ಕಂಜಿ ಪ್ರೇಮ ಗೊತ್ತಿದ್ದವ್ರಿಗೆ ಇದು ಎಂತದೂ ಅನ್ನಿಸ್ತಾ ಇರ್ಲಿಲ್ಲ.

ಹೀಗಿದ್ದ ಶಾರ್ದಕ್ಕ ಅನಂತ್ರಾಮ ಉಡುಪ ದಂಪತಿಗಳಿಗೆ ಕಾಲಾದಿ ಕಾಲಕ್ಕೆ ಒಬ್ಬ ಮಗ ಹುಟ್ಟಿದ ಅವ್ನೇ ಸುದರ್ಶನ. ಬೆಳೀತಾ ಬಂದ ಹಾಗೆ ಕಾಲೇಜಿಗೆ ಹೋಗ್ಲಿಕ್ಕೆ ಸುರು ಮಾಡಿದಾಗ ಬೇರೆ ಬೇರೆ ಟೈಪಿನ ಫಿಶ್‌ಗಳನ್ನು ತಂದು ಸಾಕ್ಲಿಕ್ಕೆ ಸುರು ಮಾಡಿದ. ಅದಕ್ಕೇಂತನೇ ಒಂದು ಅಕ್ವೇರಿಯಂ ತಂದ ಯಾರೋ ಫ್ರೆಂಡ್ ಕೊಟ್ಟ ಅಂತ ಹೇಳಿ ಲವ್ ಬರ್ಡ್ ಸಾಕಿದ. ಮನೆ ಕಾಯ್ಲಿಕ್ಕೇಂತ ಒಂದು ಅಲ್ಸೇಷನ್ ನಾಯಿ ತಂದ. ಆಗ ದಂಪತಿಗಳು ಕಂಗಾಲಾದ್ರು. ''ಇದೆಂತದಾ ಮಾಣಿ... ನಾವು ಬ್ರಾಮಣ್ರೂಂತಾ ಮರ್ತೀಯಾ ಹೇಗೆ ? ನಾಯಿ ತಂದಿ ಸರಿ. ಅದು ಮನೆ ಒಳಗಲ್ಲ ತಿರ್ಗುದು ಎಂತಕ್ಕೆ. ಎಂತದಿದ್ರೂ ಅಂಗ್ಳ ದಾಟಿ ಒಳಗೆ ಬರ್ಬಾರ್ದು... ಚೆಂದ ಕಾಣುದಿಲ್ಲ. ಮನೆಯಲ್ಲಿ ಸಾಲಿಗ್ರಾಮ ಎಲ್ಲ ಉಂಟು ಗೊತ್ತುಂಟಲ್ಲ ?'' ಅಂತ ಮೋಕೆಯಿಂದ್ಲೇ ಉಡುಪ್ರು ಬೈದಿದ್ರು.

ಆಗ ಅವ, ''ನಿಮ್ಮ ಮಡಿ ಎಲ್ಲ ನಿಮ್ಮ ಕಾಲಕ್ಕೆ ಲಾಸ್ಟ್. ಅದನ್ನೆಲ್ಲ ಅಲ್ಲಿಯೇ ಕಟ್ಟಿ ಇಡಿ. ಇದು ಕಂಪ್ಯೂಟರ್ ಕಾಲ ಗೊತ್ತಾಯ್ತಾ. ನಿಮ್ಮ ಹಾಗೆ ಇಪ್ಪತ್ನಾಲ್ಕು ಗಂಟೆ ದನ ಕರು ಅಂತ ಕೊಟ್ಟಿಗೆಯಲ್ಲಿ ಇರ್ಲಿಕ್ಕೆ ನಂಗೇನು ಮರ್ಲಲ್ಲ ಗೊತ್ತಾಯ್ತಾ... ಊರಲ್ಲಿ ಯಾರೂ ನಿಮ್ಮನ್ನು ಅನಂತ್ರಾಮ ಉಡುಪ್ರ ಅಂತ ಹೆಸ್ರಿಡ್ದು ಕರಿಯೂದಿಲ್ಲ ಗೊತ್ತುಂಟಾ ? ಎಲ್ರೂ 'ಪೆತ್ತದ ಭಟ್ರ್' 'ಬೊಳಿಪಿನ ಭಟ್ರ' ಅಂತೆಲ್ಲ ಮಕ್ಕಾರ್ ಮಾಡ್ತಾರೆ. ಮೊನ್ನೆ ನನ್ನ ಕ್ಲಾಸ್‌ಮೇಟನ್ನು ಮನೆಗೆ ಕರ್ಕೊಂಡು ಬಂದಾಗ ನೀವು ಯಾವ ವೇಷದಲ್ಲಿ ಇದ್ರಿ ? ತುಂಡು ಕೋಮಣ ಉಟ್ಕೊಂಡು ಕೊಟ್ಟಿಗೆಯಲ್ಲಿದ್ರಿ ! ಇಂಟ್ರುಡ್ಯೂಸ್ ಮಾಡಿದ್ರೆ ನೀವು ಅದೇ ಸೆಗಣಿ ಕೈಯಲ್ಲಿ ಶೇಕ್‌ಹ್ಯಾಂಡ್ ಮಾಡಿದ್ರಿ ? ಅವ್ನು ಎಂತ ಹೇಳಿದ ಗೊತ್ತುಂಟಾ ? ನಿನ್ನ ಅಪ್ಪ ಎಂತ ಮಾರಾಯ... ಒಂದು ಚೂರು ಮ್ಯಾನರ್ಸ್ ಇಲ್ಲಾ ಅಂತ ಕೇಳಿಯೇ ಬಿಟ್ಟ ಗೊತ್ತುಂಟಾ ? ಎಂತ ಊರು ಒಂದು ಆಗುವ ಹಾಗೆ ಕೂಗಿದ.

ಉಡುಪ್ರಿಗೆ ಘಾರದ ಫಸ್ಟ್ ಟೈಂ ಮಗ್ನಿಂದ ಷಾಕ್ ಆಯ್ತು. ಚೆಂದ ಮಾರ್ಕ್ಸ್ ತಗೊಂಡಿದ್ದಾನೆ ಅಂತ ಮಣಿಪಾಲದಲ್ಲಿ ಇಂಜಿನಿಯರಿಂಗಿಗೆ ಸೇರಿಸಿದ್ರು. ಏನೋ ಓದಿ ಮುಂದೆ ತಮ್ಮ ಆಪತ್ತಿಗೆ ಆಗ್ತಾನೆ ಅಂತ ಎಣಿಸಿದ್ದ. ಇವ ಹೀಗೆ ಉಲ್ಟಾ ಮಾತಾಡ್ತಾನೆ ಅಂತ ಅವ್ರು ಎಣಿಸಿರ್ಲಿಲ್ಲ.

''ಅಲ್ಲ... ನೀನು ನಾಯಿ, ಈ ಹಕ್ಕಿಗಳು... ಎಂತ ಬೇಕಾದ್ರೂ ಸಾಕು. ನಾನು ಬೇಡಾಂತ ಹೇಳುದಿಲ್ಲ. ಓದ್ಲಿಕ್ಕೆ ಇರದೇ ಇದ್ದಾಗ ಕೊಟ್ಟಿಗೆ ಕೆಲ್ಸಕ್ಕೆ ಒಂಚೂರು ಸಾಯಮಾಡು.''

''ನಿಮ್ಗೆ ಮಂಡೆ ಸಮ ಇಲ್ಲಾಂತಾದ್ರೆ ನಂಗೂ ಇಲ್ಲಾಂತ ತಿಳ್ಕೊಂಡಿದ್ದೀರಾ... ಊರಿಗೇ ಊರೇ ಪ್ಯಾಕೆಟ್ ಹಾಲು ಕುಡೀತಾ ಉಂಟು. ನಮ್ಮ ಮನೆ ಮಾತ್ರ ಉಲ್ಟಾ. ಇಡೀ ದಿವ್ಸ ನೀವು ಕೊಟ್ಟಿಗೆಯಲ್ಲಿ, ಅಮ್ಮ ಹುಲ್ಲು ಕೊಯ್ತಾ ತೋಟದಲ್ಲಿ. ಮನೆ ಫುಲ್ ಸೆಗ್ಣಿ ವಾಸ್ನೆ. ನಿಮ್ಗೆ ಕೂಡದಿದ್ದರೆ ಯಾರು ಈ ಕೆಲ್ಸ ಮಾಡೀಂತ ಹೇಳಿದ್ದು ? ಎಲ್ಲ ದನಗಳನ್ನು ಮಾರಿಬಿಡಿ.''

''ಅಲ್ಲ... ದೇವ ಅಭಿಷೇಕಕ್ಕೆ ದನದ ಹಾಲು ಬೇಕು... ನೀನೂ ಬೆಳೀತಾ ಇರುವ ಹುಡುಗ.

ಒಂದಷ್ಟು ಹೆಚ್ಚಿಗೆ ಉಳ್ದ್ರೆ ಮಾರ್‍ಬ್ಬಾದೂಂತ...'' ಶಾರ್ದಕ್ಕ ಮಗ್ನ ಗರ್ವ ಕಡಿಮೆ ಮಾಡ್ಲಿಕ್ಕೆ ನೆಗಾಡ್ತ ಹೇಳಿದ್ರು.

ಅದಕ್ಕೆ ಅವ, ''ನೀನು ಸುಮ್ನಿರಮ್ಮ. ನಿಂಗೆ ಎಂತದೂ ಗೊತ್ತಾಗುದಿಲ್ಲ. ಅಭಿಷೇಕಕ್ಕೆ ಬೇಕೇ ಬೇಕೂಂತಾದ್ರೆ ಒಂದು ದನ ಇರ್‍ಲಿ ಸಾಕು. ಅದು ಬಿಟ್ಟು ಒಂದು ಡಜನ್ ಎಂತಕ್ಕೆ ? ಸಾಲದ್ದಕ್ಕೆ ಅವುಗಳ ಕರುಗಳು ಎಂಟ್ಹತ್ತು. ಗೊಡ್ಡು ದನಗಳು ಮೂರು ನಾಲ್ಕು. ಎಲ್ಲ ಮೈಂಟೇನ್ ಮಾಡ್ಲಿಕ್ಕೆ ಅಪ್ಪ ಸಾಲ ಮಾಡಿದ್ದಾರೆ ಗೊತ್ತುಂಟಾ ? ಪೌರೋಹಿತ್ಯ ಮಾಡಿ ಎಲ್ರೂ ಮನೆ ಮೇಲೆ ಮನೆ ಕಟ್ಟಿದ್ರೆ ನಮ್ಮಲ್ಲಿ ಕೊಟ್ಟಿಗೆ ದೊಡ್ಡದಾಗ್ತಾ ಉಂಟು. ಇವತ್ತು ಎಲ್ಲ ಕಡೆ ದೇವ್ರಿಗೂ ಪ್ಯಾಕೆಟ್ ಹಾಲೇ ಅಭಿಷೇಕ ಮಾಡುದು ಗೊತ್ತುಂಟಾ ? ಹೋಮಕ್ಕೂ ಡಾಲ್ಡವೇ ಸುರಿಯುದು ಗೊತ್ತುಂಟಾ ?. ಇಷ್ಟಕ್ಕೂ ಅಪ್ಪ ಮಾರ್‍ತಾ ಇರುದು ಭಾರೀ ಒಳ್ಳೆ ರೇಟಿಗಲ್ಲ. ಎಲ್ಲ ಕಡೆ ಲೀಟರಿಗೆ ಒಂಬತ್ತು ರುಪ್ಪಾಯ ಆದ್ರೆ ಇವ್ರು ಏಳು ರುಪ್ಪಾಗೆ ಕೊಡ್ತಾರೆ. ಅದೂ ಒಂದು ತೊಟ್ಟು ನೀರೂ ಸೇರ್‍ಸುದಿಲ್ಲ. ಡೈರಿಯವ ಒಂದು ಸರ್ತಿ ನಿನ್ನಪ್ಪ ಕಲಿಯುಗದ ಧರ್ಮರಾಯ ಅಂತ ಮಕ್ಕಾರು ಮಾಡಿದ್ದ ಗೊತ್ತುಂಟಾ ?'' ಅಂತ ಕೂಗಾಡಿದಾಗ ಶಾರ್ದಕ್ಕ ಸೈಲೆಂಟಾದ್ರು. ಆಮೇಲೆ ಗಂಡ ಹೆಂಡತಿ ಸುದರ್ಶನನ ಹತ್ರ ದನಕರುಗಳು ವಿಷಯ ಮಾತಾಡುದನ್ನೆ ಸ್ಟಾಪ್ ಮಾಡಿದ್ರು. ಆದ್ರೆ ಅವ ಮಾತ್ರ ಪಾರಿವಾಳಗಳನ್ನು ತಂದು ಸಾಕಿದ. ಅಲ್ಸೇಷನ್ ನಾಯಿಗೆ ಜೊತೆ ಆಗ್ಲಿ ಅಂತ ಒಂದು ಜೂಲಿನಾಯಿ ತಂದ. ಅಕ್ವೇರಿಯಂನಲ್ಲಿ ಮೀನುಗಳೊಟ್ಟಿಗೆ ಒಂದು ಆಮೆಯನ್ನೂ ತಂದು ಸಾಕಿದ ! ಶಾರ್ದಕ್ಕ ಗಂಡನತ್ರ ''ಆಮೆ ಮನೆ ಒಳಗೆ ಬಂತು... ಇನ್ನು ಎಂತ ಆಗ್ತದೋ ಗೊತ್ತಿಲ್ಲ'' ಅಂತ ಇನ್ನೆಂತದೋ ಹೇಳ್ಳಿಕ್ಕೆ ಹೊರಟಿದ್ರು. ಕೂಡ್ಲೆ ಉಡುಪ್ರು, ''ಎಲ್ಲ ನಮ್ಮ ಕರ್ಮ. ಅವತ್ತು ಮಾತಾಡಿದ್ದಕ್ಕೆ ದೊಡ್ಡ ಜಗ್ಳವೇ ಆಯ್ತು. ಈಗ ಮತ್ತೆ ಮಾತಾಡಿ ರಗ್ಳೆ ಸುರು ಮಾಡುದು ಬೇಡ... ಅಷ್ಟಕ್ಕೂ ಆಮೆ ಒಳಗೆ ಬಂದ್ರೆ ಅನಿಷ್ಟಾಂತ ಯಾರು ಹೇಳಿದ್ದು? ಅದು ಮಾ ವಿಷ್ಣುವಿನ ಅವತಾರ... ದೇವ್ರೇ ನಮ್ಮ ಮನೆಯಲ್ಲಿ ಇದ್ದಾನೇಂತ ತಿಳ್ಕೋ. ಇರುವವ ಒಬ್ಬ. ಹಿಂದಿಲ್ಲ ಮುಂದಿಲ್ಲ. ಎಂತಾದ್ರೂ ಮಾತಾಡಿ ಏನೋ ಆಗುದು ಬೇಡ'' ಅಂತ ಬಾಯಿ ಮುಚ್ಚಿಸಿದ್ರು.

* * *

ಕಾಲ ಸಂದಿತು. ಸುದರ್ಶನ ಇಂಜಿನಿಯರಿಂಗ್ ಮುಗ್ಸಿ ಮಣಿಪಾಲದಲ್ಲೇ ಲೆಕ್ಚರರ್ ಆಗಿ ಸೇರಿಕೊಂಡ. ''ಇನ್ನು ತಡ ಮಾಡುದು ಯಾಕೆ ? ನಮ್ಮ ಮಗ್ಳನ್ನು ನಿಮ್ಮ ಸೊಸೆಯಾಗಿ ಮಾಡ್ಕೊಳ್ಬಾರದಲ್ಲ ಉಡುಪ್ರೇ ?'' ಅಂತ



ಬೊಂಬ್ಯಾಯಲ್ಲಿ ಹೋಟ್ಲಿಟ್ಟಿದ್ದ ರಮಾನಂದ ಉಪಾದ್ರು ಹೇಳಿದ್ರು. ಅವ್ರಿಗೂ ಒಬ್ಳೇ ಮಗ್ಳು ರಶ್ಮಿ ಅಂತ. ಅಲ್ಲಿಯೇ ಹುಟ್ಟಿ ಬೆಳ್ದವ್ಳು. ಇಂಜಿನಿಯರಿಂಗ್ ಓದಿದ್ಳು. ಹಾ ಹೂ ಅನ್ನೊದ್ರೊಳಗೆ ಮದ್ವೆ ಆಗಿಯೇ ಬಿಟ್ಟಿತು.

ಬಂದ ಮರುದಿವ್ಸದಿಂದ್ಲೆ '' ಇಶ್ಶಿ... ನಿಮ್ಮ ಮನೆ ಅಂದ್ರೆ ಒಳ್ಳೆ ಜೂವಿನ ಹಾಗೆ ಉಂಟಪ್ಪ... ಇಲ್ಲಿ ಮನುಷ್ಯರಿಗಿಂತ ಪ್ರಾಣಿಗಳಿಗೇ ಬೆಲೆ ಜಾಸ್ತಿ ಅಂತ ಕಾಣ್ತದ. ಮಾವ ಅಂತೂ ಲಕ್ಷ್ಮೀ... ಎಂತ ಬೇಕೂ ?... ಗೋದೂ... ಹುಲ್ಲು ಹಾಕ್ಲಾ ?... ಭದ್ರಾ... ಕರು ಬೇಕಾ ಅಂತ ರಾಗ ಎಳೀತಾನೇ ಇರ್ತಾರೆ. ಒಂದು ದಿವ್ಸವೂ ರಶ್ಮಿ... ನಿಂಗೆಂತ ಬೇಕೂಂತ ಕೇಳ್ಳಿಲ್ಲ. ನಾನು ಬಿಡಿ, ಹೊರಗಿನವ್ಳು. ಅತ್ತೆಗೂ ಒಂದು ಮಾತು ಹೇಳುದಿಲ್ಲ ಏನಿಲ್ಲ. ಇಡೀಽಽ ದಿನ ಕೊಟ್ಟಿಗೆಯಲ್ಲೇ ಇರ್ತಾರೆ... ಥೂ... ಅಲ್ಲಿಂದಂತೂ ಬ್ಯಾಡ್ ಸ್ಮೆಲ್ ಬರ್‍ತದೆ ಅಷ್ಟಿಷ್ಟಲ್ಲ. ಇಡೀಽಽ ದಿನ ನೊಣ ಗುಂಯ್ ಅಂತಾ ಇರ್ತದೆ. ಥೂ !...ವ್ಯಾಕ್ !'' ಅಂತೆಲ್ಲ ಹೇಳ್ಳೀಕ್ಕೆ ಸುರು ಮಾಡಿದ್ಲು. ಹೆಂಣ್ತಿ ಮಾತು ಕೇಳಿ ಸುದರ್ಶನ ತಾನು ಸಾಕಿದ ಪಾರಿವಾಳ, ಆಮೆ ಇತ್ಯಾದಿಗಳನ್ನೆಲ್ಲ ವಾಪಸ್ ಹೊರಗೆ ಬಿಟ್ಟ. ಅಪ್ಪನ ಹತ್ರವೂ,'' ''ಇಷ್ಟು ದಿವ್ಸ ದನಗಳ ಚಾಕ್ರಿ ಮಾಡ್ತಾ ಇದ್ರಿ. ಇನ್ನು ಮುಂದೆ ಆದ್ರೂ ಬಿಡಿ ರಶ್ಮಿಗೆ ಒಂದು ಚೂರು ಇಷ್ಟ ಇಲ್ಲ'' ಅಂತ ಹೇಳಿದ.

ಉಡುಪ್ರ ಸಿಟ್ಟು ಎಲ್ಲಿತ್ತೋ, ''ಸಾರ್ಥಕ ಆಯ್ತು... ಮದ್ವೆ ಆಗಿ ತಿಂಗಳಾಗ್ಲಿಲ್ಲ ಅವ್ಳೇ ಹೆಚ್ಚಾದ್ಲಲ್ಲ ನಿಂಗೆ... ದನ ಸಾಕುದು ಬಿಡುದು ನನ್ನ ಇಷ್ಟ. ನನ್ನ ಮರ್ಜಿ. ನಿಂಗೆ ನಿನ್ನ ಹೆಂಣ್ತಿಗೆ ಇಷ್ಟ ಇಲ್ಲಾದ್ರೆ ಮನೆ ಬಿಟ್ಟು ಹೋಗ್ಬೌದು !'' ಆಕಾಶ ಭೂಮಿ ಒಂದು ಮಾಡುವ ಹಾಗೆ ಕೂಗಿದ್ರು.

''ಆಯ್ತು!... ಹೋಗ್ತೇನೆ ಹಾಗಾದ್ರೆ'' ಅಂತ ಸುದರ್ಶನನೂ ಉಲ್ಟಾ ಮಾತಾಡಿದ. ಆದ್ರೆ ಅವ್ನನ್ನು ಶಾರ್ದಕ್ಕ ದಮ್ಮಯ್ಯ ದಕ್ಕಯ್ಯ ಹಾಕಿ ನಿಲ್ಸಿದ್ರು. ಪ್ರಕರಣ ಅಲ್ಲಿಗೆ ಶಾಂತ ಆಗ್ಲಿಲ್ಲ. ಟೈಂ ಸಿಕ್ಕಿದಾಗ್ಲೆಲ್ಲ, ''ನಮ್ಮ ಮನೆಯಲ್ಲಿ ಮನುಷ್ಯರಿಗೆ ಬೆಲೆಯೇ ಇಲ್ಲಪ್ಪ. ಪ್ರಾಣಿಗಳಿಗೇ ವ್ಯಾಲ್ಯೂ ಜಾಸ್ತಿ. ಕೇಳಿದ್ರೆ ಅತ್ತೆ - ಮಾವ ನಮ್ಮನ್ನೇ ಮನೆ ಬುಟ್ಟು ಹೋಗಿ ಅಂತ ಹೇಳ್ತಾರೆ'' ಅಂತ ರಶ್ಮಿ ಊಟಕ್ಕೆ ಹೋದ ಕಡೆ ಟಾಂ ಟಾಂ ಮಾಡ್ತಾ ಇದ್ಲು. ಸೊಸೆಯೊಟ್ಟಿಗೆ ಹೋದ ಶಾರ್ದಕ್ಕನಿಗೆ ಭೂಮಿ ಅಲ್ಲೇ ಬಾಯಿ ಬಿಡ್ಬಾರ್‍ದಾ ಅಂತ ಅನ್ನಿಸ್ತಾ ಇತ್ತು.

ಆವತ್ತು ದೀಪಾವಳೀಗೆ ಹದಿನೈದು ದಿನವಿತ್ತು. ''ಅಪ್ಪಯ್ಯ... ನೀವು ಅಜ್ಜ ಆಗ್ತಾ ಇದ್ದೀರಿ... ರಶ್ಮಿಗೆ ಈಗ ಮೂರು ತಿಂಗಳು'' ಅಂತ ಸುದರ್ಶನ ಹೇಳಿದಾಗ, ಉಡುಪ್ರಿಗೆ ಅಲ್ಲೀವರೆಗಿದ್ದ ಮಗ ಸೊಸೆಯ ಮೇಲಿದ್ದ ಕೋಪ ಜರ್‍ರಂತ ಇಳಿಯಿತು.

''ಹೌದನ !... ನಾಳೆಯೇ ಹೋಗಿ ಒಂದು ಕಬೆತಿ ದನ ತರ್‍ತೇನೆ. ಪೆರ್ಡೂರಿನಲ್ಲಿ ಈಗಷ್ಟೆ ಕರು ಹಾಕಿದ್ದು ಒಂದು ದನ ಮಾರ್‍ಲಿಕ್ಕೆ ಉಂಟಂತೆ. ಒಳ್ಳೇ ಹಾಲುಂಟಂತೆ...'' ಉಡುಪ್ರು ಒಳ್ಳೇ ಲಹರಿಯಲ್ಲಿ ಎಂತದೋ ಹೇಳ್ಳಿಕ್ಕೆ ಹೊರಟಿದ್ರು.

''ನೀವೊಂದು... ಸೊಸೆ ಗರ್ಭಿಣಿಯಂತ ಹೇಳಿದ್ರೆ ಕಬೆತಿ ದನ ತರ್‍ತೇನೇಂತ ಹೇಳ್ತಾ ಇದ್ದೀರಿ... ಬರೇ ಇದೇ ಆಯ್ತು ನಿಮ್ದು'' ಶಾರ್ದಕ್ಕ ಮಕ್ಕಾರು ಮಾಡಿದ್ರು.

''ಹೌದೇ... ನಂಗೆ ಮಂಡೆ ಸಮ ಇಲ್ವ?... ಗರ್ಭಿಣೀ ಹೆಣ್ಣೀಗೆ ಕಬೆತಿ ದನದ ಹಾಲು ಭಾರೀ ಒಳ್ಳೆದು ಗೊತ್ತುಂಟಾ. ಅವ್ಳು ಹೆರಿಗೆ ಮುಗ್ಸಿ ಬಂದಾಗ ಮಗುವಿಗೂ ಹಾಲು ಸಿಗ್ತದೆ. ಅದಕ್ಕೇಂತ್ಲೇ ಆ ದನ ತರ್‍ತೇನೇಂತ ಹೇಳೀದ್ದು ಗೊತ್ತಾಯ್ತಾ'' ಅಂತ ಹೇಳೀದ್ರು ಉಡುಪ್ರು.

''ಅಪ್ಪಯ್ಯ... ನಾನು ಹೀಗೆ ಹೇಳ್ತೇನೇಂತ ಬೇಜಾರು ಮಾಡಿಕೊಳ್ಳುದು ಬೇಡ. ನಾನು ಮಣಿಪಾಲದಲ್ಲೇ ಒಂದು ಮನೆ ನೋಡಿ ಇಟ್ಟಿದ್ದೇನೆ. ಅವ್ಳಿಗೆ ಈಗ ಬಯಕೆ ಸಂಕಟ ಸುರುವಾಗಿದೆ. ದಿನಾ ಇಲ್ಲಿ ಸೆಗ್ಣಿ ವಾಸನೆ, ನೊಣ ನುಸಿ ಅಂತ ಪಿರಿಪಿರಿ ಹೇಳ್ತಾ ಇರ್ತಾಳೆ. ನಾಡಿದ್ದು ಬಲಿಪಾಡ್ಯದ ದಿವ್ಸ ನಾನು ಮನೆ ಶಿಫ್ಟ್ ಮಾಡ್ತೇನೆ.''

''ಬಲಿ ಪಾಡ್ಯದ ದಿವ್ಸ ಯಾಕೆ ? ಇವತ್ತೇ ಖಾಲಿ ಮಾಡಿ !... ಆವತ್ತೇ ಹೇಳೀದ್ದೇನೆ ನಿಂಗೆ. ನಾನು ಮಾಡುವ ಕೆಲಸಗಳನ್ನು ಯಾರು ಪ್ರಶ್ನೆ ಮಾಡ್ಬಾರ್ದು ಅಂತ. ಆದ್ರೂ ಮತ್ತೆ ಮತ್ತೆ ನನ್ನನ್ನು ಶಾರದನನ್ನು ನಿನ್ನ ಹೆಂಣ್ತಿ ಕೆಣಕ್ತಾ ಇದ್ಲು. ಏನೋ ತಿಳಿಯದೆ ಮಾಡ್ತಾಳೆ ಅಂತ ಎಣಿಸಿ ಸುಮ್ನೆ ಇದ್ದೆ. ಈಗ ಬೇರೆ ಮನೆಯ ಸುದ್ದಿ ಎತ್ತಿ ನನ್ನನ್ನು ಹೆದ್ರುಸುದು ಬೇಡ ಗೊತ್ತಾಯ್ತಾ ?''

''ಹೆದ್ರುಸುದು ಗಿದ್ರುಸುದು ಎಂತದೂ ಇಲ್ಲ. ಇವತ್ತೇ ಈಗ್ಲೇ ಖಾಲಿ ಮಾಡ್ತೇನೆ. ಯಾರಿಗೆ ಬೇಕು ನಿಮ್ಮ ಹಂಗಿನ ಊಟ'' ಅಂತ ಹೇಳಿದವ್ನೇ ಸುದರ್ಶನ ಮನೆ ಖಾಲಿ ಮಾಡ್ಲಿಕ್ಕೆ ರೆಡಿಯಾದ. ಶಾರ್ದಕ್ಕನಿಗೆ ಸಿಡ್ಲೇ ಹೊಡ್ದ ಹಾಗಾಯ್ತು.

''ಸುದರ್ಶನ ದಮ್ಮಯ್ಯ ಮಗ... ಹಬ್ಬ ಮುಗ್ಸಿಯಾದ್ರೂ ಮನೆ ಬಿಡು. ಅವ್ರೇನೋ ಹೇಳಿದ್ರೂಂತ ನೀನೂ ಗರ್ವ ಮಾಡ್ಕೊಳ್ಬೇಡ ನಿನ್ನ ದಮ್ಮಯ್ಯ...'' ಶಾರ್ದಕ್ಕ ಮಗನ ಕಾಲಿಗೆ ಬೀಳುದೊಂದು ಬಾಕಿ. ಅಂತೂ ಇಂತೂ ರಾಜಿ ಮಾತುಕತೆ ನಮೂನೆ ಆಗಿ ಬಲಿಪಾಡ್ಯದ ದಿವ್ಸ ಮನೆ ಬಿಡುದು ಅಂತ ತೀರ್ಮಾನ ಆಯ್ತು.

* * *

ಆ ಹದ್ನೈದು ದಿವ್ಸ ಮನೆಯಲ್ಲಿ ಒಬ್ಬೊಬ್ರಿಗೂ ಮಾತುಕತೆ ಇಲ್ಲ. ಕೊಟ್ಟಿಗೆಯಲ್ಲಿದ್ದ ಹಸುಗಳ ಸೌಂಡು ಬಿಟ್ರೆ ಇಡೀ ಮನೆ ಡಲ್ಲಾಗಿತ್ತು. ಉಡುಪ್ರು ದನಗಳ ಹತ್ರವೂ ಮಾತು ಕೈದು ಮಾಡಿದ್ರು. ನರಕ ಚತುರ್ದಶಿ, ಲಕ್ಷ್ಮೀಪೂಜೆ ಎಲ್ಲ ಡಲ್ಲಾಗಿಯೇ ಕಳ್ದುಹೋಯ್ತು. ಬಲಿ ಪಾಡ್ಯಮಿ ಬಂತು. ಅವತ್ತು ಗೋಪೂಜೆ. ಶಾರ್ದಕ್ಕ ಮನಸ್ಸಿಲ್ಲದ ಮನಸ್ಸಿನಿಂದ ದನಗಳ ಪೂಜೆಗೆ ರೆಡಿ ಮಾಡಿದ್ರು. ಆದ್ರೆ ಉಡುಪ್ರು ಅವತ್ತು ಎದ್ದವ್ರು ಇನ್ನೂ ಸ್ನಾನ ಮಾಡದೇ ಹಾಗೆ ಕೂತಿದ್ರೂ. ''ಎಂತದಿದು... ಮೀಯುದಿಲ್ವಾ? ಗೋಪೂಜೆ ಮಾಡುದಿಲ್ವಾ ?'' ಶಾರ್ದಕ್ಕನ ಮಾತಿಗೆ

ಎಂತದೂ ಹೇಳದೆ ಸುಮ್ಮನೆ ಕೂತಿದ್ರು. ಬಾಯಿಯಲ್ಲಿ ಎಲೆ ಅಡಿಕೆ ಹಾಕ್ಕೊಂಡಿದ್ದವ್ರು ಸೀದ ಹೋಗಿ ತೆಂಗಿನ ಕಟ್ಟೆಗೆ ಉಗುಳಿ ಬಂದು ತಲೆ ಅಡಿಗೆ ಹಾಕಿ ಕೂತ್ರು.

ಉಡುಪ್ರ ಮನೆಯಲ್ಲಿ ಮಾಡ್ತಿದ್ದ ಗೋಪೂಜೆ ಎಲ್ಲ ಕಡೆಗೂ ಭಾರೀ ಫೇಮಸ್ ಆಗಿತ್ತು. ಲೈನಾಗಿ ಎಲ್ಲ ದನಗಳನ್ನು ಎತ್ತುಗಳನ್ನು ನಿಲ್ಲಿಸಿ, ಎಲ್ಲವನ್ನೂ ಮೀಸಿ ಶೇಡಿಯಲ್ಲಿ ಅಲಂಕಾರ ಮಾಡಿ ಕೊಂಬುಗಳಿಗೆ ಸೇವಂತಿಗೆ ಹಾರ ಹಾಕಿ ಪೂಜೆ ಮಾಡುದೇ ಒಂದು ಚೆಂದ. ಎಲ್ರೂ ಗೋಪೂಜೆ ದಿವ್ಸ ದನಗಳಿಗೆ ಪೂಜೆ ಮಾಡಿ ಬೇರೆ ದಿವ್ಸ ಅವುಗಳನ್ನು ನಾಯಿ ಕಂಡ ಹಾಗೆ ಕಾಣ್ತಿದ್ರು. ಆದ್ರೆ ಉಡುಪ್ರು ಹಾಗಲ್ಲ. ಕೊಟ್ಟಿಗೆಯಲ್ಲಿದ್ದ ಹಸುಗಳಿಗೆ ಸೆಕೆ ಆಗ್ತದೆ ಅಂತ ಫ್ಯಾನ್ ಹಾಕ್ಸಿದ್ದರು. ಹಾಲು ಕರೀಲ್ಕೆ ಕಷ್ಟ ಆಗ್ತದೇಂತ ಮೆಷಿನ್ ಹಾಕ್ಸಿದ್ದರು. ಅವ್ರ ಪ್ರಯೋಗವನ್ನು ನೋಡ್ಲಿಕ್ಕೆ ಸುತ್ತಮುತ್ತಲಿನವ್ರು ಆಗಾಗ ಬರ್ತಿದ್ರು. ಅವತ್ತು ಸದ್ರಿ ಪಂಚಾಯತಿಯ ಏಕೈಕ ಯಶಸ್ವಿ ಹಾಲು ಮಾರಾಟಗಾರ ಎನ್ನುವ ವಿಷಯದ ಸಲುವಾಗಿ ವೀಡಿಯೋ ಮಾಡಿಕೊಳ್ಳಿಕ್ಕೆ ನ್ಯೂಸ್ ಚಾನಲ್‌ನವ್ರು ಬರ್ಲಿಕ್ಕಿದ್ರು. ಉಡುಪ್ರ ಗೋಪೂಜೆ ನೋಡ್ಲಿಕ್ಕೇಂತ ಪ್ರತಿ ವರ್ಷ ಬರ್ತಿದ್ದ ಸುತ್ತ ಮುತ್ತಲಿನವ್ರು ಬಂದ್ರು. ಕೆಲಪ್ರಿಗೆ ಮಗ ಅದೇ ದಿವ್ಸ ಮನೆ ಬಿಟ್ಟು ಹೊರಡುದು ಗೊತ್ತಿತ್ತು. ಎಲ್ರೂ ಅಂಗ್ಳದಲ್ಲಿ ಗುಂಪು ಗುಂಪಾಗಿ ಬಂದು ನಿಲ್ಲಕ್ಕೆ ಸುರುಮಾಡಿದ್ರು.

''ಶ್ಶಿ... ಉಡುಪ್ರಿಗೆ ಹೀಗೆ ಆಗ್ಬಾರ್ದಿತ್ತು ಮಾರ್ರೆ... ಒಬ್ನೇ ಮಗ ಅಂತ ಮೋಕೆಯಲ್ಲಿ ಬೆಳ್ಸಿದ್ರು, ನಾಕು ಅಕ್ಷರ ಕಲ್ತೆ ತಲೆಯೇ ತಿರ್‍ಗಿ ಹೋಗುದಾ ಮಾರ್ರೆ...''

''ಎಂತದೇ ಆಗ್ಲಿ... ಕಲ್ತ ಹೆಣ್ಣು ಮಕ್ಕನ್ನು ತಂದ್ರೆ ಹೀಗೆ ಆಗುದು ನೋಡಿ. ಆ ಬೋಸುಡಿ ಒಂದು ದಿವ್ಸ ಶಾರ್ದಕ್ಕನಿಗೆ ಸಾಯ ಮಾಡ್ಲಿಲ್ಲಂತೆ. ಅತ್ತೆ ಮಾವ ಕೊಟ್ಟಿಗೆ ಕೆಲ್ಸ ಮಾಡ್ತಾ ಇರುದನ್ನು ನೋಡಿ ಠಸ್ಸು ಪುಸ್ಸು ಅಂತ ಇಂಗ್ಲಿಷನಲ್ಲಿ ಗಂಡ ಹೆಂಡತಿ ಮಾತಾಡಿ ನಗೂದಂತೆ ಮಾರ್ರೆ...''

''ಎಂತದೇ ಆಗ್ಲಿ... ಗೋಪೂಜೆ ದಿವ್ಸವೇ ಮನೆ ಖಾಲಿ ಮಾಡ್ಲಿಕ್ಕೆ ಅವ ಮೂರ್ತ ಇಡ್ಬಾರ್ದಾಗಿತ್ತು ಮಾರ್ರೆ. ಕಣ್ಣಲ್ಲಿ ರಕ್ತ ಇಲ್ವಾ ಮಾರ್ರೆ ಅವ್ನಿಗೆ'' ಅಂತೆಲ್ಲ ಸೇರಿದವ್ರು ತಲೆ ಗೊಂದೊಂದು ಮಾತಾಡ್ತಾ ಇದ್ರು. ಅಷ್ಟು ಹೊತ್ತಿಗೆ ಟಿ.ವಿ.ಚಾನೆಲ್‌ನವ್ರು ಬಂದ್ರು. ಬಂದವ್ರೆ ಊರಿನವರತ್ರ ಉಡುಪ್ರ ಹೈನುಗಾರಿಕೆ ಬಗ್ಗೆ ಇಂಟರ್‌ವ್ಯೂ ತಗೊಳ್ಳಿಕ್ಕೆ ಸುರು ಮಾಡಿದ್ರು.

ಅಷ್ಟು ಹೊತ್ತಿಗೆ ಒಂದು ಲಾರಿ ಭರ್ರಂತ ಧೂಳು ಎಬ್ಬಿಸಿಕೊಂಡು ಬಂತು. ಅದ್ರಲ್ಲಿ ಸುದರ್ಶನ ಇದ್ದ. ಇಳ್ದವ್ನೆ ಕೆಲ್ಸದವ್ರತ್ರ ಮನೆಯ ಸಾಮಾನುಗಳನ್ನು ಹಾಕಿಸ್ಲಿಕ್ಕೆ ಸುರು ಮಾಡಿದ. ಶಾರ್ದಕ್ಕ ಬಿಕ್ಕಿ ಬಿಕ್ಕಿ ಕೂಗುದು ಹೊರಗೆ ನಿಂತವ್ರಿಗೂ ಕೇಳಿಸ್ತಿತ್ತು . ಎಲ್ರೂ 'ಷೆ' 'ತ್ಚು' 'ಪಾಪ' ಅಂತೆಲ್ಲ ಹೇಳ್ಳಿಕ್ಕೆ ಸುರು ಮಾಡಿದ್ರು.

ಮತ್ತೊಂದು ಲಾರಿ ಬಂತು ಅಲ್ಲಿಗೆ. ಎಲ್ರಿಗೂ ಆಶ್ಚರ್ಯ ಆಯ್ತು. ನೋಡಿದ್ರೆ ಅದ್ರೊಳಗೆ ಕಲ್ಸಂಕದ ಅಬ್ಬಾಸ್ ! ''ಇವ್ನಿಗೇನು ಕೆಲ್ಸ ಇಲ್ಲಿ?'' ಅಂತ ಎಲ್ರೂ ಮುಖ ಮುಖ ನೋಡಿಕೊಂಡ್ರು. ಲಾರಿ ಇಳ್ದವ್ನೆ ''ಭಟ್ರೆ ನಮಸ್ಕಾರ'' ಅಂತ ಹೇಳ್ತಾ ಒಳಗೆ ಹೋದ. ಉಡುಪ್ರಿಗೆ ಅವ್ನನ್ನು ನೋಡಿದ ಕೂಡ್ಲೆ ಮುಖ ಅರಳಿತು.

''ಬಾ... ಅಬ್ಬಾಸ್... ನೋಡು ಇಷ್ಟು ದನಗಳು, ಕರುಗಳು ಎತ್ತುಗಳು ಉಂಟು. ಒಂದೂ ನಂಗೆ ಬೇಡ. ಎಲ್ಲ ತಗೊಂಡು ಹೋಗು. ಒಂದು ಪೈಸ ಕೊಡುದು ಬೇಡ'' ಅಂತ ಹೇಳಿದ್ರು. ಅಬ್ಬಾಸನ ಬಾಯಿ ಕಿವಿತಂಕ ಹೋಯ್ತು.

ಅಲ್ಲಿದ್ದವ್ರೆಲ್ಲ ''ಉಡುಪ್ರೇ... ನಿಮ್ಗೆ ಮರ್ಲಾ ಮಾರ್ರೆ... ಲಕ್ಷಾಂತ್ರ ರುಪ್ಯಾ ಬರುವ ದನಗಳನ್ನು ಧರ್ಮಕ್ಕೆ ಕೊಡ್ತಾ ಇದ್ದೀರಲ್ಲ?... ಅದು ಹೋಗಿ ಹೋಗಿ ಒಬ್ಬ ಸ್ಯಾಬನಿಗೆ'' ಅಂತೆಲ್ಲ ಕೇಳಿದ್ರು. ಟಿ.ವಿ.ಚಾನೆಲ್‌ನವ್ರಿಗೆ ಉಡುಪ್ರ ಬಗ್ಗೆ ಡಾಕ್ಯುಮೆಂಟರಿ ಮಾಡುವಾಂತ ಬಂದು ಇಲ್ಲಿ ಗಲಾಟೆಯಾಗುವ ಲಕ್ಷಣ ಕಾಣ್ತ ಇರುದನ್ನು ನೋಡಿ ಖುಷಿಯಾಯ್ತು. ವರದಿಗಾರ್ತಿ ಕೂಡ್ಲೆ ಮೈಕ್ ಹಿಡ್ಕೊಂಡು ಕ್ಯಾಮರಾದ ಮುಂದೆ ನಿಂತ್ಕೊಂಡು, ''ಅನ್ಯ ಕೋಮಿನವರಿಗೆ ಹಸುಗಳನ್ನು ಮಾರಾಟ ಮಾಡುತ್ತಿರುವುದರ ವಿರುದ್ಧ ಭಾರೀ ಪ್ರತಿಭಟನೆ ಇದೀಗ ಪ್ರಾರಂಭವಾಗಿದೆ...'' ಅಂತೆಲ್ಲ ಹೇಳ್ಳಿಕ್ಕೆ ಸುರುಮಾಡಿದ್ಲು.

ಉಡುಪ್ರಿಗೆ ಸಿಟ್ಟು ಎಲ್ಲಿತ್ತೋ ಗೊತ್ತಿಲ್ಲ, ''ಬಾಯಿ ಮುಚ್ತೀಯಾ ? ಖರ್ಚಿಗೆ ಬೇಕಾ ನಿಂಗೆ ? ನನ್ನ ದನ, ನನ್ನ ಮರ್ಜಿ, ಯಾರಿಗೆ ಬೇಕಾದ್ರೂ ಮಾರ್‍ತೇನೆ. ಎಂತ ಬೇಕಾದ್ರೂ ಮಾಡ್ತೇನೆ. ಇಷ್ಟು ದಿವ್ಸ ಬರದೇ ಇದ್ದವ್ರು ಇವತ್ತು ಯಾಕೆ ಬಂದದು ? ನನ್ನ ಮನೆ ಒಡಿಯುದನ್ನು ವೀಡಿಯೋ ಮಾಡ್ಲಿಕ್ಕಾ !? ನೋಡಿ... ಇಲ್ಲಿ ನಿಂತಿದ್ದಾರಲ್ವಾ ನನ್ನ ಊರಿನವ್ರು... ಇವ್ರೆಲ್ಲ ಯಾಕೆ ಬಂದದ್ದು ಗೊತ್ತುಂಟಾ ? ನನ್ನ ಮನೆ ಒಡಿಯುವ ಚೆಂದ ನೋಡ್ಲಿಕ್ಕೆ. ಪ್ರತಿ ವರ್ಷ ನಾನು ಗೋಪೂಜೆ ಮಾಡುವಾಗ ಬರ್ತಾರೆ. ಒಂದಷ್ಟು ಪ್ರಸಾದ ತಿಂತಾರೆ,ಹೋಗ್ತಾರೆ. ಆಮೇಲೆ ನಾನು ಇದ್ದೇನಾ ಸತ್ತಿದ್ದೇನಾಂತ ಕೇಳುದಿಲ್ಲ. ಇವತ್ತೂ ಇವ್ರೆಲ್ಲ ಅದಕ್ಕೇ ಬಂದದ್ದು. ದನಗಳನ್ನು ಸಾಕ್ಲಿಕ್ಕೆ ಸುರು ಮಾಡಿದಾಗ ಎಲ್ಲ ಕಡೆಗಿಂತ ಕುಡ್ತೆ ಐವತ್ತು ಪೈಸೆ - ಒಂದ್ರುಪ್ಯಾ ಕಡ್ಮೆಗೆ ಕೊಟ್ರೆ, ಒಬ್ರೂ ತಗೊಳ್ಳಿಲ್ಲ. ಬದ್ಲಿಗೆ ಬೋಳಿಪಿನ ಭಟ್ರ, ಪೆತ್ತದ ಭಟ್ರ, ಪೇರ್ದ ಭಟ್ರ ಅಂತ ಊರೆಲ್ಲ ಮಕ್ಕಾರ್ ಮಾಡಿದ್ರು. ನಾನು ಸಾಕಿದ ದನಗಳಿಂದ್ಲೇ ಇವತ್ತು ನನ್ನ ಮನೆ ಒಡೀತಾ ಇರುದು... ಅದಕ್ಕೇ ಎಂತ ಬೇಕಾದ್ರೂ ಆಗ್ಲಿ ಅಂತ ನಾನು ಅಬ್ಬಾಸನಿಗೆ ಕೊಡ್ತಾ ಇದ್ದೇನೆ. ನೀವು ಇನ್ನು ಒಂದು ಮಾತಾಡಿದ್ರೆ ನಾನು ಸುಮ್ಮನೆ ಇರುವವ ಅಲ್ಲ ಗೊತ್ತಾಯ್ತಾ !...'' ಅಂತ ಗರ್ವದಲ್ಲಿ ಬೊಬ್ಬೆ ಹಾಕಿದ್ದು, ರಿಪೋರ್ಟ್ ಮಾಡ್ಲಿಕ್ಕೇ ನಿಂತವ್ಳಿಗೆ ಮಂಡೆ ಬಿಸಿಯಾಗಿ ಕ್ಯಾಮರಾ ಆಫ್ ಮಾಡ್ಲಿಕ್ಕೆ ಹೇಳಿ ಪ್ಯಾಕ್‌ಅಪ್ ಮಾಡ್ಲಿಕ್ಕೆ ಹೇಳಿದ್ಲು.

ಸುದರ್ಶನ ಸಾಮಾನುಗಳನ್ನೆಲ್ಲ ಲಾರಿಗೆ ಹಾಕಿಯಾದ್ಮೇಲೆ, ''ಅಪ್ಪಯ್ಯ... ಹೋಗಿ ಬರ್ತೇನೆ... ನಾನೇನೂ ನಿಮ್ಮ ಮೇಲೆ ಸಿಟ್ಟಿನಿಂದ... ''ಇನ್ನು ಎಂತದೋ ಮಾತಾಡ್ಲಿಕ್ಕಿದ್ದ. ಉಡುಪ್ರು ಅಡ್ಡ ಮುಖ ಹಾಕಿ ಒಂದೂ ಮಾತಾಡ್ಬೇಡ ಅಂತ ಕೈ ಎತ್ತಿದ್ರು. ರಶ್ಮಿ ಆಗ್ಲೇ ಲಾರಿ ಹತ್ತಿ ಕೂತಿದ್ಲು. ಶಾರ್ದಕ್ಕ ಹೊರಗೆ ಬಂದು ಜೋರಾಗಿ ಅಳ್ಳಿಕ್ಕೆ ಸುರು ಮಾಡಿದ್ರು. ಲಾರಿ ಸ್ಟಾರ್ಟ್‌ಯ್ತು. ''ನಿಲ್ಸಿ... ನಿಮ್ಮ ದಮ್ಮಯ್ಯ... ಮಗ್ನನ್ನು ಇಲ್ಲೇ ನಿಲ್ಸಿ... '' ಅಂತ ಉಡುಪ್ರ ಕಾಲಿಗೆ ಬಿದ್ರು. ಯಾರು ಎಂತದೂ ಹೇಳಿಲ್ಲ. ಲಾರಿ ಹೊರ್‍ಟೇ ಹೋಯ್ತು.

ಈ ಕಡೆ ಅಬ್ಬಾಸ್ ದನ ಕರುಗಳಿಗೆ ಹಗ್ಗ ಕಟ್ಟಿ ಲಾರಿಗೆ ದಬ್ಬಿಕ್ಕೆ ಸುರು ಮಾಡಿದ. ಅವು 'ಅಂಬಾ' ಅಂತ ಜೋರಾಗಿ ಕೂಗ್ಲಿಕ್ಕೆ ಸುರುಮಾಡಿದವು. ಅಬ್ಬಾಸ್‌ನ ಕಡೆಯವ್ರು ಚಬುಕಿನಲ್ಲಿ ಬಾರ್‍ಸಿ ಬಾರ್‍ಸಿ ಎಳ್ದು ಕಟ್ಟಿಕ್ಕೆ ಸುರು ಮಾಡಿದ್ರು. ಅಲ್ಲಿದ್ದ ಕೆಲವ್ರಿಗೆ ಆ ಸೀನ್ ನೋಡ್ಲಿಕ್ಕಾಗದೆ ಹೊರ್‍ಟು ಹೋದ್ರು. ಒಂದು ಕರು ಹದ್ನೈದು ಇಪ್ಪತ್ತು ದಿವ್ಸಗಳದ್ದು, ಸಟಕ್ಕಂತ ತಪ್ಪಿಸ್ಕೊಂಡು ಬಂತು. ಉಡುಪ್ರ, ಶಾರ್ದಕ್ಕನ ಕಾಲಿಗೆ ಗುದ್ಲಿಕ್ಕೆ ಸುರು ಮಾಡಿತು. ಅಬ್ಬಾಸನ ಕಡೆಯವ್ರು ಅದನ್ನೂ ಬಿಡದೆ ಹೊಡ್ದು ಕಟ್ಟಿ ಹಾಕಿ ಲಾರಿಗೆ ಬಿಸಾಡಿದ್ರು. 'ಅಂಬಾ' 'ಅಂಬಾ' ಅಂತ ಕೂಗ್ಲಿಕ್ಕೆ ಸುರು ಮಾಡಿತು.

ಶಾರ್ದಕ್ಕ ತಡ್ಕೊಳ್ಳಿಕಾಗದೆ, ''ನೋಡಿ... ಯಾವ ಜನ್ಮದಲ್ಲಿ ಯಾವ ತಾಯಿ ಮಗನನ್ನು ಬೇರೆ ಮಾಡಿದ್ದೆನೋ ಗೊತ್ತಿಲ್ಲ. ಇವತ್ತು ಹೀಗಾಗಿದೆ. ಮಗ ಹಬ್ಬದ ದಿವ್ಸವೇ ಹೋದ. ಅವ್ನನ್ನು ನಿಲ್ಲಿಸ್ಲಿಲ್ಲ ನೀವು. ಈಗ ಈ ಕರು ಅಷ್ಟು ಹೊತ್ತಿಂದ ಬೊಬ್ಬೆ ಹೊಡೀತಾ ಉಂಟು... ನಿಮ್ಮ ದಮ್ಮಯ್ಯ ಅದನ್ನೊಂದನ್ನಾದ್ರೂ ನಂಗೆ ಉಳಿಸಿಕೊಡಿ... ಅದ್ರ ಮುಖವನ್ನಾದ್ರೂ ನೋಡಿಕೊಂಡು ಇರ್ತೇನೆ'' ಅಂತ ಉಡುಪ್ರ ಕಾಲಿಗೆ ಬಿದ್ರು.

ಉಡುಪ್ರು ಒಂದು ಕ್ಷಣ ಸುಮ್ಮಿದ್ರು. ಆಮೇಲೆ, ''ಅಬ್ಬಾಸ್... ಆ ಕರುವನ್ನು ಬಿಡು'' ಅಂದ್ರು. ಅಬ್ಬಾಸ್ ಎಂತದೂ ಹೇಳದೆ ಬಿಟ್ಟ. ಅದು ತಟಕ ಪಟಕ ಕುಣೀತಾ ಕೊಟ್ಟಿಗೆಯತ್ರ ಓಡಿತು. ಉಳ್ದ ನಾಲ್ಕೈದು ಕರುಗಳೂ 'ಅಂಬಾ' 'ಅಂಬಾ' ಅಂತ ಕೂಗಿದ್ವು, ಸ್ವಲ್ಪ ಹೊತ್ತು ಬಿಟ್ಟು ಉಡುಪ್ರು, ''ಅವುಗಳನ್ನೂ ಬಿಡಾ'' ಅಂದ್ರು. ''ಹೇಗೂ ಲಾರಿಯಲ್ಲಿ ಜಾಗ ಇಲ್ಲ ಅಲ್ಲದೆ ಇವುಗಳಿಂದ ಎಂತ ಉಪಯೋಗವೂ ಇಲ್ಲ'' ಅಂತ ಹೇಳಿ ಎಲ್ಲ ಕರುಗಳನ್ನೂ ವಾಪಸ್ ಬಿಟ್ಟ, ಅವುಗಳ ಕುಣ್ತ ಅಂತಿಂಥದ್ದಲ್ಲ. ಇನ್ನೇನು ಲಾರಿ ಸ್ಟಾರ್ಟ್ ಮಾಡ್ಬೇಕು,

''ಏ... ಅಬ್ಬಾಸ್...ಎಲ್ಲ ದನಗಳನ್ನು ಬಿಡು !...'' ಅಂದ್ರು ಉಡುಪ್ರು

''.....! ?''

''ಎಂತದಾ ನೋಡುದು ಪಿಳಿಪಿಳಿ ? ನಿಂಗೆ ಕಿವಿ ಕೇಪ್ಪಾ ? ಎಲ್ಲ ದನಗಳನ್ನೂ ಬಿಡು. ಒಂದನ್ನೂ ನಿಂಗೆ ಕೊಡುದಿಲ್ಲ ಗೊತ್ತಾಯ್ತಾ ?''

''ಅಲ್ಲ ಭಟ್ರೆ ... ಎಂತ ಮಾರ್ರೆ ನೀವು... ಧರ್ಮಕ್ಕೆ ಬೇಡ ಮಾರ್ರೆ. ಒಂದೊಂದಕ್ಕೆ ಇಷ್ಟು ಸಾವಿರ ಅಂತ ಫಿಕ್ಸ್ ಮಾಡುವ. ಆಗುದಿಲ್ವಾ ?''

''ನೀನಿ ದನಕ್ಕೆ ಹತ್ತು ಹದ್ನೈದು ಸಾವಿರ ಫಿಕ್ಸ್ ಮಾಡ್ತೌದು... ಆದ್ರೆ ಆ ಕರು ತೋರ್‍ಸಿದ ಪ್ರೀತಿಗೆ ಎಷ್ಟು ರೇಟು ಫಿಕ್ಸ್ ಮಾಡ್ತೀ... ಮಗುವನ್ನು ಬಿಟ್ಟ ಕೂಡ್ಲೆ ತಾಯಿ ಹೇಗೆ ಬೊಬ್ಬೆ ಹೊಡೀತು ನೋಡು...ಅದಕ್ಕೆ ಹೇಳಿದ್ದು ಎಲ್ರನ್ನೂ ಬಿಡು ಅಂತ. ನೀನು ಸಾವಿರ ಅಲ್ಲ ಲಕ್ಷ ಕೊಟ್ರೂ ದನಗಳನ್ನು ಕೊಡುದಿಲ್ಲ... ಇದೆಲ್ಲ ನಿಂಗೆ ಅರ್ಥ ಆಗುದೂ ಇಲ್ಲ. ಸುಮ್ನೆ ಎಲ್ಲವನ್ನು ಕೊಟ್ಟಿಗೆಯಲ್ಲಿ ವಾಪಸ್ ಕಟ್ಟು'' ಅಂದ್ರು.

''ಭಟ್ರಿಗೆ ನಿಜವಾಗಿಯೂ ಮರ್ಲು ಹಿಡೀತು ಮಾರ್ರೆ'' ಅಂತ ಅಬ್ಬಾಸ್ ಅಲ್ಲಿದ್ದವ್ರತ್ರ ಹೇಳಿದ. ಬಂದ ದಾರಿಗೆ ಸುಂಕ ಇಲ್ಲ ಅಂತ ಎಲ್ಲ ದನಗಳ ಹಗ್ಗ ಬಿಚ್ಚಿ ಕೊಟ್ಟಿಗೆಯಲ್ಲಿ ಕಟ್ಟಿದ. ಚಪ್ಪೆ ಮುಖ ಹಾಕ್ಕೊಂಡು ಲಾರಿ ಹತ್ತಿ ವಾಪಸ್ ಹೋದ. ಉಡುಪ್ರು, ''ಶಾರದಾ... ಸ್ನಾನ ಮಾಡಿಕೊಂಡು ಬರ್ತೇನೆ ಗೋಪೂಜೆಗೆ ತಯಾರಿ ಮಾಡು'' ಅಂದ್ರು. ಕೊಟ್ಟಿಗೆಯಲ್ಲಿದ್ದ ದನಗಳೆಲ್ಲ ಕರುಗಳನ್ನು ನೆಕ್ತಾ ಇದ್ದವು.

[illegible]
[illegible]
[illegible]

# ಪ್ರಮಾಣವಚನ ನೆಲೆ ಬೆಲೆ

ಜ. ಹೊ. ನಾರಾಯಣಸ್ವಾಮಿ

ಮನುಷ್ಯನನ್ನು ನಿಜದ ನೆಲೆಯಲ್ಲಿ ನಿಲ್ಲಿಸಿ ಅವನಿಂದ ಸತ್ಯ ನುಡಿಸಲು ಮಾಡಿಕೊಂಡು ಬಂದಿರುವ ಪ್ರಯತ್ನಗಳು ನೂರಾರು. ಅದರಲ್ಲಿ ಈ 'ಪ್ರಮಾಣವಚನ' ಬೋಧನೆಯೂ ಒಂದು. ಸತ್ಯವನ್ನು ಹೊರಗೆಡಹಲು ಸ್ವರ್ಗ-ನರಕಗಳ ಕಲ್ಪನೆಯನ್ನೂ ಹುಟ್ಟುಹಾಕಿ ಸತ್ಯವನ್ನು ನುಡಿದರೆ ಸ್ವರ್ಗ, ಸುಳ್ಳು ನುಡಿದರೆ ನರಕ ಎಂದೂ ಪ್ರಚುರಪಡಿಸಲಾಗಿದೆ.

ಮನುಷ್ಯನ ಅಂತಃಸಾಕ್ಷಿಗೆ ಅನುಗುಣವಾಗಿ ನುಡಿಯಲು ಪ್ರೇರಣೆಯಾದ ಈ ಪ್ರಮಾಣವಚನ 'ಪ್ರಮಾಣ' ಮತ್ತು 'ವಚನ' ಎಂಬ ಎರಡು ಪದಗಳಿಂದ ಕೂಡಿದೆ. ಈ ವಿಭಿನ್ನ ಪದಗಳು ತಮ್ಮದೇ ಆದ ಅರ್ಥವ್ಯಾಪ್ತಿಯನ್ನೂ ಹೊಂದಿವೆ.

'ಪ್ರಮಾಣ' ಒಂದರ ಆಧಾರದ ಮೇಲೆ ಕೊಡುವಂಥದ್ದು; 'ವಚನ' – ಕೊಡುವ ವ್ಯಕ್ತಿಯ ಅಂತಃಸಾಕ್ಷಿಗೆ ಸಂಬಂಧಪಟ್ಟದ್ದು. ಆ ಕಾರಣದಿಂದಲೇ 'ದೇವರ' ಮೇಲೆ ಪ್ರಮಾಣಮಾಡಿ ವಚನಕೊಡುವುದು ರೂಢಿಯಲ್ಲಿ ಬಂದಿದೆ.

ಈ ಯಮಳ ಪದಗಳು ಒಂದಾಗಿ ಸೇರಿ ಮನುಷ್ಯನ ಅಂತಃಸಾಕ್ಷಿಗೆ ಮತ್ತೊಂದು ಗುರುತರ ಸ್ಥಾನವನ್ನು ತಂದುಕೊಡುವ ಈ ಪ್ರಮಾಣವಚನ, ಅದರ ಉದ್ದೇಶ, ವ್ಯಾಪ್ತಿ ಇತ್ಯಾದಿಗಳ ಅಧ್ಯಯನ ಹಾಗೂ ಅರಿವು ಇಂದು ಎಂದರೆ ಸಾಮಾಜಿಕವಾಗಿ ಮನುಷ್ಯನ ಅಂತಃಸಾಕ್ಷಿಯೇ ಇಲ್ಲವಾಗುತ್ತಿದೆ ಎನ್ನುವ ಈ ಪರ್ವಕಾಲದಲ್ಲಿ, ಅತ್ಯಂತ ಅನಿವಾರ್ಯವೂ ಅಗತ್ಯವೂ ಆಗಿದೆ. ಏಕೆಂದರೆ ತ್ರೇತೆ ವರ್ಗಸಂಘರ್ಷದ, ದ್ವಾಪರ ದಾಯಾದಿಗಳ ನಡುವಿನ ಸಂಘರ್ಷದ ಯುಗಗಳಾದರೆ, ಕಲಿಯುಗ ಕ್ಷಣಕ್ಷಣದಲ್ಲೂ ಅಂತಃಸಾಕ್ಷಿಯನ್ನು ಕೊಲ್ಲುವ ಯುಗವಾಗಿ ಪರಿಣಮಿಸಿದೆ.

ಕ್ರಿ.ಪೂ. ೪೬೦-೩೭೦ರಲ್ಲಿ ಜೀವಿಸಿದ್ದ ಹಿಪೋಕ್ರೇಟಿಸ್ ಗ್ರೀಸ್ ದೇಶದವನು. ವೈದ್ಯ ವಿಜ್ಞಾನದ ಜನಕ ಎಂದು ಆತನನ್ನು ಕರೆಯಲಾಗುತ್ತದೆ. ಖಾಯಿಲೆಗಳಿಗೆ ದೈವಶಕ್ತಿಯೆ ಕಾರಣ ಎಂಬ ನಂಬಿಕೆಯನ್ನು ಬುಡಮೇಲು ಮಾಡಿದವ. ಅಂತಃಸಾಕ್ಷಿಯ ಜಾಗೃತಿಗೆ ಪ್ರೇರಣೆ ನೀಡುವ ಪ್ರಮಾಣವಚನವನ್ನು ಮೊಟ್ಟಮೊದಲಿಗೆ ಬೋಧಿಸಿ ಜಾರಿಗೆ ತಂದ ಕೀರ್ತಿ ಇವನದು.

ಪ್ರಜಾಪ್ರತಿನಿಧಿಗಳಿಗೆ, ಉನ್ನತ ಹುದ್ದೆಯನ್ನು ಅಲಂಕರಿಸುವವರಿಗೆ, ವಕೀಲಿ, ವೈದ್ಯಕೀಯ ಮುಂತಾದ ವೃತ್ತಿನಿರತರಿಗೆ 'ಪ್ರಮಾಣವಚನ'ವನ್ನು ಬೋಧಿಸಲಾಗುತ್ತದೆ. ರೋಟರಿ ಮುಂತಾದ ಸಂಸ್ಥೆಗಳೂ ತಮ್ಮ ಪದಾಧಿಕಾರಿಗಳಿಗೆ ಪ್ರಮಾಣವಚನವನ್ನು ಬೋಧಿಸುತ್ತವೆ. ರಾಷ್ಟ್ರರಕ್ಷಣೆ ಮಾಡುವ ಅಧಿಕಾರಿಗಳು, ಸೈನಿಕರೂ ಇದರಿಂದ ಹೊರತಾಗಿಲ್ಲ.

ರಾಷ್ಟ್ರದ ಉನ್ನತ ಹುದ್ದೆಗಳನ್ನು ಅಲಂಕರಿಸುವವರಿಗೆ, ಪ್ರಜಾಪ್ರತಿನಿಧಿಗಳಿಗೆ 'ಪ್ರಮಾಣವಚನ' ಬೋಧಿಸುವ ವಿಧಿವಿಧಾನಗಳನ್ನು ಹಾಗೂ ಮಾದರಿಯನ್ನು ನಮ್ಮ ಸಂವಿಧಾನದಲ್ಲಿ ನಮೂದಿಸಲಾಗಿದೆ. ೬೦ನೇ ಪರಿಚ್ಛೇದದಲ್ಲಿ ರಾಷ್ಟ್ರಪತಿಗೆ, ೬೯ನೇ ಪರಿಚ್ಛೇದದಲ್ಲಿ ಉಪರಾಷ್ಟ್ರಪತಿಗೆ, ೯೯ನೇ ಪರಿಚ್ಛೇದದಲ್ಲಿ ಲೋಕಸಭಾ ಸದಸ್ಯರಿಗೆ, ೧೫೯ನೇ ಪರಿಚ್ಛೇದದಲ್ಲಿ ರಾಜ್ಯಪಾಲರಿಗೆ, ೧೮೮ನೇ ಪರಿಚ್ಛೇದದಲ್ಲಿ ಶಾಸಕರಿಗೆ, ೨೧೯ನೇ ಪರಿಚ್ಛೇದದಲ್ಲಿ ನ್ಯಾಯಾಧೀಶರಿಗೆ ಇತ್ಯಾದಿ ನಿಗದಿಪಡಿಸಲಾಗಿದೆ. ಅಲ್ಲದೆ ಸಂವಿಧಾನದ ೩ನೇ ಅನುಸೂಚಿಯಲ್ಲಿ ಪ್ರಮಾಣವಚನದ ಮಾದರಿಗಳನ್ನು ಕೊಡಲಾಗಿದೆ.

ಪ್ರಮಾಣವಚನಕ್ಕೆ ಒಂದು ಪಾವಿತ್ರ್ಯವಿದೆ, ಅದನ್ನು ಗೌರವಿಸಬೇಕು. ಅದರ ಬಗ್ಗೆ ಪೂಜ್ಯಭಾವನೆ ಇರಬೇಕು. ಬೋಧಿಸುವವರ ಹಾಗೂ ಸ್ವೀಕರಿಸುವವರ ಹೃದಯದಲ್ಲಿ ನಂಬಿಕೆ ನೆಲೆ ನಿಂತಿರಬೇಕು. ಪವಿತ್ರ ಭಾವನೆ ಇರಬೇಕು. ಆದರೆ ಈ 'ಪ್ರಮಾಣ ವಚನ' ಎಂಬುದು ಆ ನಂಬಿಕೆ ಹಾಗೂ ಪಾವಿತ್ರ್ಯದಿಂದ ದೂರ ಉಳಿದು ಕೇವಲ ಔಪಚಾರಿಕ ಕ್ರಿಯೆಯಾಗುತ್ತಿರುವುದು ಸ್ವೇಚ್ಛಾಚಾರಕ್ಕೆ ಹಾಗೂ ದುರಂತಗಳಿಗೆ ಕಾರಣವಾಗುತ್ತಿದೆ. ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಾಧೀಶರುಗಳೆ ಕೆಲವು ಸಂದರ್ಭಗಳಲ್ಲಿ ಸುಳ್ಳು ಪ್ರಮಾಣ ಪತ್ರಗಳನ್ನು ಸಲ್ಲಿಸಿ ಸಾರ್ವಜನಿಕರ ಅಸಮಾಧಾನಕ್ಕೆ ಕಾರಣವಾದ ಉದಾಹರಣೆಗಳಿವೆ. ನ್ಯಾಯಾಧೀಶರಾಗಿ ನೇಮಕವಾಗುವಾಗ ಪ್ರಮಾಣವಚನ ಸ್ವೀಕರಿಸಿಯೇ ಆ ಪವಿತ್ರ ಸ್ಥಾನವನ್ನು ಅಲಂಕರಿಸಿದವರು ಇವರು. ಇನ್ನು ರಾಜಕಾರಣಿಗಳ ವಿಚಾರವನ್ನಂತೂ ಹೇಳಲೇಬೇಕಾಗಿಲ್ಲ. ರಕ್ಷಣಾಧಿಕಾರಿಗಳೂ ರಾಷ್ಟ್ರದ ಗೌಪ್ಯಗಳನ್ನು ಅನ್ಯರಾಷ್ಟ್ರಗಳಿಗೆ ರವಾನಿಸಿರುವ ಉದಾಹರಣೆಗಳಿಗೆ ಕೊರತೆ ಇಲ್ಲ. ಅಂತಃಸಾಕ್ಷಿಗೆ ವಿರುದ್ಧವಾಗಿ ಅಧಿಕಾರಿಗಳು ಅಧಿಕಾರ ದುರುಪಯೋಗಪಡಿಸಿಕೊಳ್ಳುತ್ತಿರುವುದಂತೂ ಸ್ಫಟಿಕ ಸ್ಪಷ್ಟವಾಗಿದೆ. ಹಾಗಾದರೆ ಈ ಪ್ರಮಾಣವಚನದ ನೆಲೆ ಬೆಲೆ ಏನು ?

ಬ್ರಿಟಿಷರ ಕಾಲದಲ್ಲಿ 'ದಿ ಇಂಡಿಯನ್ ಓತ್ ಆಕ್ಟ್' ೧೮೭೩ರಲ್ಲಿ ಜಾರಿಗೆ ಬಂತು. ಅದನ್ನು ಸ್ವತಂತ್ರ ಭಾರತ ನಿರಸನಗೊಳಿಸಿ ೧೯೬೯ರಲ್ಲಿ ಬೇರೊಂದು 'ದಿ ಇಂಡಿಯನ್ ಓತ್ ಆಕ್ಟ್' ಅನ್ನು ಜಾರಿಗೆ ತಂದಿದೆ. ಸದರಿ ಕಾಯ್ದೆಯಲ್ಲಿ ಪ್ರಮಾಣವಚನದ ಬಗ್ಗೆ ಮಾಹಿತಿ ಇದ್ದು ಸಾಕ್ಷಿಗಾರ, ನ್ಯಾಯಾಧೀಶ, ಪ್ರಮಾಣ ಪತ್ರಿಕೆ ಹಾಜರ್ಪಡಿಸುವವನು, ದುಭಾಷಿ ಇವರುಗಳು ಯಾವ ಯಾವ ರೀತಿ ಪ್ರಮಾಣವಚನ ಸ್ವೀಕರಿಸಬೇಕು ಎಂಬುದನ್ನು ಆಯಾಯ ರಾಜ್ಯಗಳ ಉಚ್ಚ ನ್ಯಾಯಾಲಯಗಳಿಗೆ ನಿಗದಿಪಡಿಸಲಾಗಿದೆ.

ಎಂಬತ್ತರ ದಶಕದಲ್ಲಿ ದೆಹಲಿಯಲ್ಲಿ ಆದ ಅಂಕುರಪ್ರಾಯದ ಒಂದು ಘಟನೆ ಸರ್ವೋಚ್ಚ ನ್ಯಾಯಾಲಯದಿಂದ ಹಿಡಿದು ರಾಷ್ಟ್ರದ ಎಲ್ಲ ನ್ಯಾಯವಾದಿಗಳು ಮುಷ್ಕರ ಹೂಡುವಂತೆ ಮಾಡಿ ವಾದವಿವಾದಗಳಿಗೆ ಎಡೆಮಾಡಿತು. ಅದಕ್ಕೆ ಹಿನ್ನೆಲೆ ಎಂದರೆ ವಕೀಲರಾದ ರಾಜೇಶ್ ಕುಮಾರ್ ಅಗ್ನಿಹೋತ್ರಿ ದೆಹಲಿ ಹೆಣ್ಣುಮಕ್ಕಳ ಕಾಲೇಜೊಂದರ ವಿದ್ಯಾರ್ಥಿನಿಯ ಕೈಚೀಲವನ್ನು ಕದ್ದ ಎನ್ನುವ



ಕಾರಣಕ್ಕಾಗಿ ಪೊಲೀಸ್ ಅಧಿಕಾರಿಯಾಗಿದ್ದ ಕಿರಣ್ ಬೇಡಿ ಆತನಿಗೆ ಕೈಕೋಳ ತೊಡಿಸಿ ಕರೆದುಕೊಂಡುಹೋದರು ಎನ್ನುವುದು.

ಈ ಘಟನೆ ವಕೀಲ ಕಳ್ಳತನ ಮಾಡಿದನೆ ಇಲ್ಲವೆ ಎನ್ನುವ ಪ್ರಶ್ನೆಗಿಂತ ಹೆಚ್ಚಾಗಿ ಆತನಿಗೆ ಕೈಕೋಳ ತೊಡಿಸಿದ ಕಿರಣ್ ಬೇಡಿಯ ಕ್ರಮದ ಬಗ್ಗೆ ಒತ್ತುಕೊಟ್ಟು ನ್ಯಾಯವಾದಿಗಳ ಹಾಗೂ ಪೊಲೀಸ್ ಅಧಿಕಾರಿಯ ನಡುವಿನ ಗೌರವದ ಪ್ರಶ್ನೆಯಾಗಿ ಉದ್ಭವಿಸಿತು. ನಂತರ ವಕೀಲರಲ್ಲಿ ಎರಡು ಗುಂಪುಗಳಾಗಿ ಪ್ರತಿಭಟನೆ ಒಂದು ಹಂತಕ್ಕೆ ತಲುಪಿದ ಮೇಲೆ ಸರ್ಕಾರ ಕಿರಣ್ ಬೇಡಿಯ ಕ್ರಮದ ಕುರಿತು ಆಕೆಯ ಮೇಲೆ ಹಾಗೂ ಸಬ್‌ಇನ್ಸ್‌ಪೆಕ್ಟರ್ ಜಿಂದರ್ ಸಿಂಗ್ ಮೇಲೆ ತನಿಖೆ ಮಾಡುವಂತೆ ದೆಹಲಿಯ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾದ ಎನ್. ಎನ್. ಗೋಸ್ವಾಮಿ ಹಾಗೂ ಮತ್ತೊಬ್ಬ ನ್ಯಾಯಾಧೀಶರಾದ ಡಿ. ಪಿ. ವಾದ್ವ ಅವರುಗಳನ್ನು ನೇಮಿಸಿ ಆಯೋಗವನ್ನು ರಚಿಸಿತು. ಆಯೋಗದ ಮುಂದೆ ಬಂದ ಕಿರಣ್ ಬೇಡಿ ಹಾಗೂ ಜಿಂದರ್ ಸಿಂಗ್ ಸಾಲಿಸಿಟರ್ ಜನರಲ್ ಆದ ಜಿ. ರಾಮಸ್ವಾಮಿಯ ಸಲಹೆಯ ಮೇರೆಗೆ ಪ್ರಮಾಣವಚನ ಸ್ವೀಕರಿಸಲು ನಿರಾಕರಿಸಿದರು. ಅದಕ್ಕೆ ಕಾರಣ ಆಯೋಗದ ಮುಂದೆ ಪ್ರಮಾಣ ಮಾಡಿ ನಾವು ಹೇಳಿಕೆ

ರಾಷ್ಟ್ರದ ಉನ್ನತ ಹುದ್ದೆಗಳನ್ನು ಅಲಂಕರಿಸುವವರಿಗೆ, ಪ್ರಜಾಪ್ರತಿನಿಧಿಗಳಿಗೆ 'ಪ್ರಮಾಣವಚನ' ಬೋಧಿಸುವ ವಿಧಿವಿಧಾನಗಳನ್ನು ಹಾಗೂ ಮಾದರಿಯನ್ನು ನಮ್ಮ ಸಂವಿಧಾನದಲ್ಲಿ ನಮೂದಿಸಲಾಗಿದೆ. ೬೦ನೇ ಪರಿಚ್ಛೇದದಲ್ಲಿ ರಾಷ್ಟ್ರಪತಿಗೆ, ೬೯ನೇ ಪರಿಚ್ಛೇದದಲ್ಲಿ ಉಪರಾಷ್ಟ್ರಪತಿಗೆ, ೯೯ನೇ ಪರಿಚ್ಛೇದದಲ್ಲಿ ಲೋಕಸಭಾಸದಸ್ಯರಿಗೆ, ೧೫೯ನೇ ಪರಿಚ್ಛೇದದಲ್ಲಿ ರಾಜ್ಯಪಾಲರಿಗೆ, ೧೮೮ನೇ ಪರಿಚ್ಛೇದದಲ್ಲಿ ಶಾಸಕರಿಗೆ, ೨೧೯ನೇ ಪರಿಚ್ಛೇದದಲ್ಲಿ ನ್ಯಾಯಾಧೀಶರಿಗೆ ಇತ್ಯಾದಿ ನಿಗದಿಪಡಿಸಲಾಗಿದೆ. ಅಲ್ಲದೆ ಸಂವಿಧಾನದ ೩ನೇ ಅನುಸೂಚಿಯಲ್ಲಿ ಪ್ರಮಾಣವಚನದ ಮಾದರಿಗಳನ್ನು ಕೊಡಲಾಗಿದೆ.

ಪ್ರಮಾಣವಚನಕ್ಕೆ ಒಂದು ಪಾವಿತ್ರ್ಯವಿದೆ, ಅದನ್ನು ಗೌರವಿಸಬೇಕು. ಅದರ ಬಗ್ಗೆ ಪೂಜ್ಯಭಾವನೆ ಇರಬೇಕು. ಬೋಧಿಸುವವರ ಹಾಗೂ ಸ್ವೀಕರಿಸುವವರ ಹೃದಯದಲ್ಲಿ ನಂಬಿಕೆ ನೆಲೆ ನಿಂತಿರಬೇಕು. ಪವಿತ್ರ ಭಾವನೆ ಇರಬೇಕು. ಆದರೆ ಈ 'ಪ್ರಮಾಣವಚನ' ಎಂಬುದು ಆ ನಂಬಿಕೆ ಹಾಗೂ ಪಾವಿತ್ರ್ಯದಿಂದ ದೂರ ಉಳಿದು ಕೇವಲ ಔಪಚಾರಿಕ ಕ್ರಿಯೆಯಾಗುತ್ತಿರುವುದು ಸ್ವೇಚ್ಛಾಚಾರಕ್ಕೆ ಹಾಗೂ ದುರಂತಗಳಿಗೆ ಕಾರಣವಾಗುತ್ತಿದೆ.

ಕೊಡಬೇಕು ಎನ್ನುವುದು ಕ್ರಮವಲ್ಲ, ಯಾರು ತಮ್ಮ ಮೇಲೆ ಆರೋಪ ಹೊರಿಸಿದ್ದಾರೆಯೋ ಮೊದಲು ಅವರು ಹೇಳಿಕೆ ನೀಡಲಿ ಎಂದು. ಕಿರಣ್ ಬೇಡಿ ಹಾಗೂ ಸಿಂಗ್ ನಿರಾಕರಿಸಿದ್ದರ ಮೇಲೆ ಆಯೋಗ ಅವರ ಮೇಲೆ ಮೊಕದ್ದಮೆ ಹೂಡಲು ಆದೇಶಿಸಿತು. ಆ ಆದೇಶದ ಮೇಲೆ ಕಿರಣ್ ಬೇಡಿ ಹಾಗೂ ಸಿಂಗ್ ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದರು.

ಸರ್ವೋಚ್ಚ ನ್ಯಾಯಾಲಯದ ಮೂರು ಜನ ನ್ಯಾಯಾಧೀಶರನ್ನೊಳಗೊಂಡ ಬೆಂಚ್‌ನಲ್ಲಿದ್ದ ನ್ಯಾಯಾಧೀಶರಾದ ಇ. ಎಸ್. ವೆಂಕಟರಾಮಯ್ಯ ಇಲ್ಲಿ ಪಕ್ಷಪಾತವಾಗಿದೆ, ಕಿರಣ್ ಬೇಡಿ ಮತ್ತು ಸಿಂಗ್ ಅವರನ್ನು ಪಾಟಿಸವಾಲು ಮಾಡುವ ಮುನ್ನ ಮತ್ತೊಂದು ಪಕ್ಷದ ಪೂರ್ಣ ಹೇಳಿಕೆಯನ್ನು ಪಡೆದುಕೊಳ್ಳಬೇಕೆಂದು ಆಜ್ಞೆ ಮಾಡಿ ಕಿರಣ್ ಬೇಡಿ ಹಾಗೂ ಸಿಂಗ್ ಅವರ ಮೇಲ್ಮನವಿಯನ್ನು ಪುರಸ್ಕರಿಸಿತು.

ಆದರೆ ಎನ್. ಎನ್. ಗೋಸ್ವಾಮಿ ಅವರು ಆಯೋಗಕ್ಕೆ ರಾಜೀನಾಮೆ ಇತ್ತರು. ಅದಕ್ಕೆ ಕಾರಣ ಸರ್ವೋಚ್ಚ ನ್ಯಾಯಾಲಯ ತನ್ನ ಆಜ್ಞೆಯಲ್ಲಿ 'ಆಯೋಗದ ಆಜ್ಞೆಯನ್ನು ಅನಕ್ಷರಸ್ಥನಾದ ಒಬ್ಬ ಹಳ್ಳಿಯ ಮುಖ್ಯಸ್ಥನೂ ಕೂಡ ಆಚೆ ಎಸೆಯುತ್ತಿದ್ದ' ಎಂದು ಟೀಕೆ ಮಾಡಿದೆ ಎಂದು. ಈ ನಡುವೆ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶರಾದ ಇ. ಎಸ್. ವೆಂಕಟರಾಮಯ್ಯ, ಎನ್. ಎನ್. ಗೋಸ್ವಾಮಿಯವರಿಗೆ ಒಂದು ಬಹಿರಂಗ ಪತ್ರ ಬರೆದು ಆ ಟೀಕೆಯ ಉದ್ದೇಶ ಅವಮಾನಿಸುವುದಲ್ಲ; ಆ ಆಜ್ಞೆಯನ್ನು ಹಾಗೆ ಭಾವಿಸಬಾರದೆಂದೂ, ಅದರಿಂದ ನೋವಾಗಿದ್ದರೆ ವಿಷಾದ ವ್ಯಕ್ತಪಡಿಸುವುದಾಗಿ ಬರೆದು ಒಂದು ಉದಾತ್ತ ಪರಂಪರೆಯನ್ನು ಹುಟ್ಟುಹಾಕಿದರು.

ನ್ಯಾಯಾಲಯಗಳಲ್ಲಿ ಸಾಕ್ಷ್ಯ ನೀಡಲು ಬರುವ ಸಾಕ್ಷಿಗಳಿಗೆ ನಿಗದಿಪಡಿಸಿರುವ ಪ್ರಮಾಣವಚನದ ಮಾದರಿ ಇಂತಿದೆ :

''ದೇವರ ಹೆಸರಿನಲ್ಲಿ ಪ್ರಮಾಣ ಮಾಡಿ ಸತ್ಯವಾಗಿ ಹೇಳುತ್ತೇನೆ, ಸತ್ಯವನ್ನಲ್ಲದೆ ಬೇರೇನೂ ಹೇಳುವುದಿಲ್ಲ, ನಾನು ಹೇಳುವುದೆಲ್ಲಾ ಸತ್ಯ.'' ಹಾಗೆ ಮತ್ತೊಂದು ಮಾದರಿಯಲ್ಲಿ:

''ಸತ್ಯವಾಗಿ ಹೇಳುತ್ತೇನೆ, ಸತ್ಯವಲ್ಲದೆ ಬೇರೇನೂ ಹೇಳುವುದಿಲ್ಲ
ನಾನು ಹೇಳುವುದೆಲ್ಲಾ ಸತ್ಯ.''

ಈ ಮಾದರಿಯಲ್ಲಿ ಇಂಗ್ಲಿಷ್ ಮಾದರಿಯಲ್ಲಿರುವ ''ಶ್ರದ್ಧಾಪೂರ್ವಕವಾಗಿ ಮತ್ತು ಪ್ರಾಮಾಣಿಕವಾಗಿ'' ಎನ್ನುವ ಪದವನ್ನು ಕನ್ನಡದಲ್ಲಿ ಸೇರಿಸಿರುವುದಿಲ್ಲ. ಅದಕ್ಕೆ ಕಾರಣ ತಿಳಿಯದು.

ನ್ಯಾಯಾಲಯಗಳಲ್ಲಿ ಪ್ರಮಾಣವಚನ ಸ್ವೀಕರಿಸುವಾಗ ಕೆಲವು ಆಕ್ಷೇಪಗಳು ಉದ್ಭವವಾಗುವುದುಂಟು. ''ದೇವರ ಮೇಲೆ ಪ್ರಮಾಣ ಮಾಡಿ...'' ಎಂದು ಹೇಳಬೇಕೆಂದು ನ್ಯಾಯಾಲಯ ಆದೇಶಿಸಿದಾಗ ದೇವರ ಅಸ್ತಿತ್ವದಲ್ಲಿ ನಂಬಿಕೆ ಇರದ ಸಾಕ್ಷಿ ಹಾಗೆ ಪ್ರಮಾಣವಚನ ತೆಗೆದುಕೊಳ್ಳಲು ನಿರಾಕರಿಸುವುದು ಸಹಜ. ಅಂತಃಸಾಕ್ಷಿ ಇಲ್ಲವಾಗುತ್ತಿರುವ ಮತ್ತೊಂದು ಮುಖವೇ ಅಂತಃಸಾಕ್ಷಿಯ ಎಚ್ಚರವೂ ಆಗಿರುತ್ತದೆ. ಇಂತಹ ಸಂದರ್ಭಗಳ ಸೂಕ್ಷ್ಮ ವಿವೇಚನೆಯ ಅಗತ್ಯವಿದೆ.

ವಚನ ಇಂದಿನದಲ್ಲ, ಅದು ಮನುಷ್ಯನ ಚಿಂತನಶಕ್ತಿ ಪ್ರಾರಂಭವಾದ ಕಾಲದಿಂದ ಒಂದಲ್ಲ ಒಂದು ರೀತಿಯಲ್ಲಿ ವ್ಯಕ್ತಿಯ, ಸಮಾಜದ ನಡುವೆ ನಡೆದುಬಂದದ್ದೇ ಆಗಿದೆ. ಇದು ಎಲ್ಲ ದೇಶಕಾಲಗಳಲ್ಲೂ ಆಗಿರುವಂಥದ್ದು. ರಾಮಾಯಣದಲ್ಲಿ ದಶರಥ ಕೈಕೇಗೆ ಕೊಡುವ ವರರೂಪದ ವಚನವಾಗಲಿ, ಜಗತ್ತಿನಲ್ಲಿ ಅದ್ವಿತೀಯ ಬಿಲ್ಲುಗಾರನನ್ನಾಗಿ ಮಾಡುತ್ತೇನೆಂದು ದ್ರೋಣಾಚಾರ್ಯರು ಅರ್ಜುನನಿಗೆ ಇತ್ತ ವಚನವಾಗಲಿ, ತೊಟ್ಟ ಬಾಣವನ್ನು ಮತ್ತೆ ತೊಡುವುದಿಲ್ಲ ಎಂದು ಕರ್ಣ ತನ್ನ ತಾಯಿ ಕುಂತಿಗೆ ಇತ್ತ ವಚನವಾಗಲಿ ಇವು ಔಚಿತ್ಯದ ಪ್ರಜ್ಞೆಯಿಂದ ದೂರವಾದವುಗಳು. ಅಷ್ಟೇ ಅಲ್ಲ, ಅದರ ದುಷ್ಪರಿಣಾಮದ ಅರಿವಿದ್ದೂ 'ವಚನ ಭ್ರಷ್ಟ' ಎನ್ನುವ ಲೋಕಾಪವಾದಕ್ಕೆ ಗುರಿಯಾಗುವ ಭಯದ ಹಿನ್ನೆಲೆಯಲ್ಲಿ ಆವರಿಸಿದ್ದು. ಅದರಲ್ಲಿ ಅನುಕೂಲಕ್ಕಿಂತ ಹೆಚ್ಚಾಗಿ ಅನರ್ಥ, ಉಪಯೋಗಕ್ಕಿಂತ ಹೆಚ್ಚಾಗಿ ವ್ಯಕ್ತಿತ್ವದ ಉಪೇಕ್ಷೆ ಇತ್ಯಾದಿ ಮಾನವ ವಿರೋಧಿ ಪರಿಣಾಮಗಳಿರುವುದನ್ನು ಕಾಣುತ್ತೇವೆ.

ಈ 'ವಚನ'ಗಳು ಜನಸಾಮಾನ್ಯರ ಚಿಂತನೆಯ ಅಗ್ನಿಪರೀಕ್ಷೆಗೆ ಒಳಗಾಗಿ ತಂತ್ರ ಮೇಲುಗೈ ಪಡೆದು ಕುತಂತ್ರವೇ ವಾಸ್ತವ ಎನ್ನುವ ಅರಿವು ಮೂಡಿದಾಗ ಈ ವಚನದ ಪುಷ್ಟಿಗೆ 'ಪ್ರಮಾಣ'ದ ಬೆಂಬಲವನ್ನು ಪಡೆಯಲಾಯ್ತು. ಯಾವ ಅಥವಾ ಯಾವುದರ ಪ್ರಮಾಣದ ಮೇಲೆ ವಚನ ತೆಗೆದುಕೊಂಡರೆ ಅವನ ಅಂತಃಸಾಕ್ಷಿಗೆ ವಿರುದ್ಧವಾಗದ ರೀತಿ ಸತ್ಯವನ್ನು ಅಭಿವ್ಯಕ್ತಿಗೊಳಿಸಲು ಸಾಧ್ಯವಾಗುತ್ತದೆ ಎಂಬ ಚಿಂತನೆಯ ಹಿನ್ನೆಲೆಯಲ್ಲಿ ಈ 'ಪ್ರಮಾಣ' ತನ್ನ ಪ್ರವೇಶ ಪಡೆದಿದೆ.

ಮನುಸ್ಮೃತಿಯ ಕಾಲದಲ್ಲಿ ಜಾತಿಗಳ ಆಧಾರದ ಮೇಲೆ ಪ್ರಮಾಣವಚನ ಅಥವಾ ಆಣೆ ಅಥವಾ ಶಪಥ ಮಾಡಿಸುತ್ತಿದ್ದುದು ಕಂಡುಬರುತ್ತದೆ. ಉದಾಹರಣೆಗೆ (೧) ನ್ಯಾಯಪತಿಯು ಸಾಕ್ಷಿದಾರ ಕ್ಷತ್ರಿಯನಾಗಿದ್ದರೆ ಅವನಿಗೆ ''ಸತ್ಯ ಹೇಳು'' ಎನ್ನಬೇಕು; ವೈಶ್ಯನಾಗಿದ್ದರೆ ''ಚಿನ್ನ, ಬೀಜ, ಗೋವುಗಳ ಸಾಕ್ಷಿಯಾಗಿ ಸತ್ಯಹೇಳು'' ಎನ್ನಬೇಕು; ಶೂದ್ರನಿಗೆ ''ಪಾಪವಿದೆ ಸತ್ಯಹೇಳು'' ಎನ್ನಬೇಕು; ಬ್ರಾಹ್ಮಣನಿಗೆ ''ಹೇಳು'' ಎಂದರೆ ಸಾಕು... (ಮನುಸ್ಮೃತಿ ೮-೮೮). (೨) ''ಶೂದ್ರನನ್ನು ಪಾಪಗಳ, ವೈಶ್ಯನನ್ನು ಧನಧಾನ್ಯಗಳ, ಕ್ಷತ್ರಿಯನನ್ನು ವಾಹನಾಯುಧಗಳ, ಬ್ರಾಹ್ಮಣನನ್ನು ಸತ್ಯದ ಆಣೆಯಾಗಿ ಶಪಥ ಮಾಡಿಸಬೇಕು.''... (ಮನುಸ್ಮೃತಿ ೮-೧೧೩)

ಇದರಿಂದ ನಮಗೆ ಅರಿವಾಗುವ ಒಂದಂಶ ಎಂದರೆ ಯಾರು ಯಾರಿಗೆ ಯಾವ ಯಾವುದರ ಮೇಲೆ ನಂಬಿಕೆ ಇದ್ದಿತ್ತೋ ಅಥವಾ ಯಾರು ಯಾರು ಯಾವ ಯಾವ ವೃತ್ತಿಯನ್ನು ಅವಲಂಬಿಸಿದ್ದರೋ ಆ ವಸ್ತುಗಳ, ಜೀವಗಳ ಮೇಲೆ ಆಣೆ ಮಾಡಿಸುವುದರಿಂದ ನಿಜವನ್ನು ನೆಲೆನಿಲ್ಲಿಸಿ ಸತ್ಯವನ್ನು ಅಭಿವ್ಯಕ್ತಿಗೊಳಿಸಲು ಯತ್ನಿಸಿರುವುದು. ಕ್ಷತ್ರಿಯನ ವೃತ್ತಿ ರಕ್ಷಣೆ ಆದ್ದರಿಂದ ಅವನ ಆತ್ಮ ವಾಹನ ಹಾಗೂ ಆಯುಧ. ಅವುಗಳ ಮೇಲೆ ಪ್ರಮಾಣ ಮಾಡಿಸುವುದು; ವೈಶ್ಯನ ವೃತ್ತಿಗೆ ಅನುಗುಣವಾಗಿ ಚಿನ್ನ, ಬೀಜ, ಧನಧಾನ್ಯಗಳೆ ಅವನ ಆತ್ಮವಾಗಿರುವುದರಿಂದ ಅವುಗಳ ಮೇಲೆ ಆಣೆ ಮಾಡಿಸುವುದು; ಬ್ರಾಹ್ಮಣನ ವೃತ್ತಿ 'ಜ್ಞಾನ'. ಆದ್ದರಿಂದ ಸತ್ಯದ ಆಣೆಯಾಗಿ ಶಪಥ ಮಾಡಿಸುವುದು ಸರಿಯಾದದ್ದೆ. ಆದರೆ ಶೂದ್ರನ ವೃತ್ತಿ ಸೇವೆ ಎಂದು ಇಟ್ಟುಕೊಂಡರೂ ಅವನು 'ಪಾಪಗಳ' ಮೇಲೆ ಏಕೆ ಆಣೆಮಾಡಬೇಕು ? ಬ್ರಾಹ್ಮಣನಿಗೆ 'ಸತ್ಯ' ಆತ್ಮವಾಗಿರುವಂತೆ ಶೂದ್ರನಿಗೆ 'ಪಾಪ' ಆತ್ಮವೇ ? ಅಲ್ಲ, ಎಲ್ಲರ ಹೃದಯ ಮೂಲವೂ ಒಂದೇ ಎನ್ನುವುದು ಸತ್ಯ. ಎಲ್ಲರ ಪಯಣವೂ ಸತ್ಯದ ಕಡೆಗೇ. ಆದರೆ ಬಹುಸಂಖ್ಯಾತ ಶೂದ್ರರಿಗೆ, ಸ್ತ್ರೀಯರಿಗೆ ಪಾಪಪ್ರಜ್ಞೆಯನ್ನೇ ಆತ್ಮವಾಗಿಸಿದ ಕ್ರೂರತೆಯನ್ನು ಇಲ್ಲಿ ಕಾಣಬಹುದು. ಈ ಜಾತಿಯ ಕ್ರೌರ್ಯವೇ ಭಾರತದ ಆತ್ಮವನ್ನು ಕುಗ್ಗಿ ಕುಸಿಯುವಂತೆ ಮಾಡಿ ಅದರ ನಾಡಿಯೆ ಆಡದಂತೆ ಮಾಡುತ್ತಿದೆ.

ಪ್ರಮಾಣವಚನಕ್ಕೆ ಸಂಬಂಧಿಸಿದಂತೆ ಭಾರತ ದಂಡ ಸಂಹಿತೆ ೧೮೬೦, ಪ್ರಕರಣ ೫೧ರಲ್ಲಿ ಉಲ್ಲೇಖವಿದೆ. ಸಾರ್ವಜನಿಕ ಕೆಲಸವನ್ನು ನಿರ್ವಹಿಸುವ ಅಧಿಕಾರಿಯ ಅಥವಾ ನ್ಯಾಯಾಂಗದಲ್ಲಿ ನ್ಯಾಯ ವಿತರಣೆ ಮಾಡುವ ನ್ಯಾಯಾಧೀಶರ ಮುಂದೆ ಪ್ರಾಮಾಣಿಕವಾಗಿ ಅಥವಾ ಪ್ರಜ್ಞಾಪೂರ್ವಕವಾಗಿ ಹೇಳಬೇಕೆನ್ನುವ ನಿಯಮವಿದೆ. ಒಂದು ಕಾಲದಲ್ಲಿ ಪ್ರಮಾಣ ವಚನವನ್ನು ಬೋಧಿಸುವಾಗ ಗ್ರಂಥಗಳನ್ನು ಅಥವಾ ಅವರವರ ನಂಬಿಕೆಗೆ ಆಧಾರವಾಗಿದ್ದರ ಮೇಲೆ ಪ್ರಮಾಣ ಮಾಡಿಸುವ ಪದ್ಧತಿ ಇದ್ದುದು ಕಂಡುಬರುತ್ತದೆ. ಅದರ ಉದ್ದೇಶ ಸತ್ಯವನ್ನು ಅಭಿವ್ಯಕ್ತಿಸಲು ಪೂರಕವಾಗುವ ಒಂದು ರೀತಿಯ ಉದ್ದೀಪನೆ. ಆ ಹಿನ್ನೆಲೆಯಲ್ಲಿ ಅವರವರಿಗೆ ಪಾವಿತ್ರವೆಂದು ಪರಿಗಣಿತವಾಗಿದ್ದರಮೇಲೆ ಪ್ರಮಾಣ ಮಾಡಿಸುವುದು

ಹೀಗಾಗಿ ಕ್ರಿಶ್ಚಿಯನ್ನರು ಬೈಬಲ್ ಮೇಲೆ ಮಾಡಿದರೆ ಮುಸಲ್ಮಾನರು ಕುರಾನ್ ಮೇಲೆ ಸ್ವೀಕರಿಸುವ ರೂಢಿ ಇತ್ತು.

ಚೈನಾ ದೇಶದಲ್ಲಿದ್ದ ರೂಢಿ ಸ್ವಾರಸ್ಯಕರವಾಗಿದೆ. ಚೈನಾದೇಶದ ಪ್ರಜೆಯ 'ಪ್ರಮಾಣ'ಕ್ಕೆ 'ಚೀನಾ ಸಾಸರ್' ಕೊಡಬೇಕಾಗಿತ್ತು. ಆತ ಅದನ್ನು ತೆಗೆದುಕೊಂಡು ಚೂರು ಚೂರಾಗಿ ಒಡೆದು ಹೀಗೆ ಹೇಳುತ್ತಿದ್ದ: ''ನಾನು ಸತ್ಯವನ್ನು ಹೇಳುತ್ತೇನೆ. ನಾನು ಹೇಳುವುದೆಲ್ಲ ಸತ್ಯವೆ. ನಾನು ಸತ್ಯವನ್ನು ಹೇಳದಿದ್ದರೆ ಚೂರುಚೂರಾದ ಸಾಸರಿನಂತೆ ನನ್ನ ಆತ್ಮ ಒಡೆದು ಚೂರು ಚೂರಾಗಲಿ.'' ಪ್ರಮಾಣ ವಚನದ ದೀರ್ಘ ಪಯಣದಲ್ಲಿ ಇವು ಕೆಲವು ಮೈಲಿಗಲ್ಲುಗಳು ಅಷ್ಟೆ.

ಈ ಪದ್ಧತಿ ನಡೆದುಕೊಂಡು ಬರುತ್ತಿದ್ದ ಕಾಲದ ದಾವೆಯೊಂದರಲ್ಲಿ ಒಂದು ಕುತೂಹಲಕರ ಘಟನೆ ನಡೆದಿದೆ. ಬಹುಶಃ ಅದು ಒಂದುನೂರು ವರ್ಷಗಳಿಗೂ ಹಿಂದಿನದಿರಬೇಕು. ಆ ದಾವೆ ಓಮಿಚಂದ್ ವಿರುದ್ಧ ಬಾರ್ಕರ್ ಇವರ ನಡುವೆ ೧ ಎ.ಟಿ.ಕೆ. ೨೧ರಲ್ಲಿ ನಡೆದಿರುವುದು. ಅದರಲ್ಲಿ ಪ್ರಮಾಣವಚನ ಸ್ವೀಕರಿಸುವಾಗ ಹಿಂದೂ ಆದವನು ''ಗೀತೆಯ ಮೇಲೆ ಆಣೆ ಇಟ್ಟು ಅಥವಾ ಬ್ರಾಹ್ಮಣನ ಪಾದಮುಟ್ಟಿ'' ಪ್ರಮಾಣವಚನ ಸ್ವೀಕರಿಸಬೇಕೆಂದು ಉಲ್ಲೇಖವಿದೆ.

ಇಲ್ಲಿ ಎರಡು ಅಂಶಕ್ಕೆ ಒತ್ತು ಇದೆ. ಒಂದು ಭಗವದ್ಗೀತೆ, ಮತ್ತೊಂದು ಬ್ರಾಹ್ಮಣನ ಪಾದ. ಇಲ್ಲಿ ಗಮನಿಸಬೇಕಾದ್ದು ಬ್ರಾಹ್ಮಣ ಪದವಿಗಿದ್ದ ಪಾವಿತ್ರ್ಯ ಹಾಗೂ ಔನ್ನತ್ಯ. ಆದರೆ ಆ ಪಾವಿತ್ರ್ಯವನ್ನೊಳಗೊಂಡ ಬ್ರಾಹ್ಮಣ ಭಾರತದಲ್ಲಿ ಇದ್ದಾನೆಯೆ? ಅಲ್ಲದೆ ''ಆತ್ಮವತ್ ಸರ್ವ ಭೂತೇಷು'' ಎನ್ನುವ ಸಮಾನವಾದ, ಸಾರ್ವತ್ರಿಕವಾದ, ಸಾರ್ವಕಾಲಿಕ ವಾದ, ಸರ್ವಮಾನ್ಯವಾದ ನಿತ್ಯ ಸತ್ಯ ಪ್ರಕೃತಿಯ ಅಂತರಂಗವಾಗಿರುವಾಗ ಯಾರ ಪಾದವೇ ಆಗಲಿ ಅದು ಎಷ್ಟೇ ಶ್ರೇಷ್ಠ, ಪವಿತ್ರ ಎಂದರೂ ಅದರ ಆಚರಣೆ ವಿವೇಕರಹಿತವಾದದ್ದು, ತರ್ಕಶೂನ್ಯವಾದದ್ದು. ಅದು ಇತ್ತೀಚೆಗೆ ನ್ಯಾಯಾಲಯದ ದಾವೆಯೊಂದರಲ್ಲಿ ಉಲ್ಲೇಖ ವಾಗಿರುವುದಂತೂ ಅವಿವೇಕದ ಪರಮಾವಧಿ. ಅಷ್ಟೇ ಅಲ್ಲ, ಅದು ಯಾವ ಮಾನವೀಯ ಹೃದಯವೂ ಸಹಿಸಲಸಾಧ್ಯವಾದ ಅತ್ಯಂತ ಅಸಹ್ಯ ಕೂಡ. ಏಕೆಂದರೆ ಅದು ಮಾನವ ವಿರೋಧಿ ಹಾಗೂ ಜಾತಿಯ ನೆಲೆಯಲ್ಲಿ ನಿಂತಿರುವಂಥದ್ದು. ಈ ದೇಶದಲ್ಲಿ ನಿಜವಾದ ಬ್ರಾಹ್ಮಣ ಸತ್ತು ಯುಗಯುಗಗಳೇ ಕಳೆದಿವೆ. ಇದನ್ನು ಸ್ಪಷ್ಟವಾಗಿ ಧೀರೋದಾತ್ತವಾಗಿ ಘೋಷಿಸಿರುವವರು ವಿವೇಕಾನಂದರು:

''ಬ್ರಾಹ್ಮಣರೇ – ನಿಮ್ಮ ಜಾತಿ ಕುಲಗಳ ಹೆಮ್ಮೆ ವ್ಯರ್ಥ. ಅದರಿಂದ ಪಾರಾಗಿ, ನಿಮ್ಮ ಶಾಸ್ತ್ರ ಪ್ರಕಾರದ ಬ್ರಾಹ್ಮಣ ನಿಮ್ಮಲ್ಲಿ ಇಂದು ಇಲ್ಲ.'' ಈ ನಿಜ ಸ್ಥಿತಿಯು [illegible] ಸರ್ವೋದಯದ ಗುರು.

ಯಾವ ಧರ್ಮಗ್ರಂಥಗಳು ಹಾಗೂ ಅವುಗಳ ಅಧ್ಯಯನದಿಂದ ಮಾನವನ ಹೃದಯ ವಿಕಾಸಹೊಂದಿ ಅಂತಃಸಾಕ್ಷಿಯ ಜಾಗೃತಿಯಾಗಬೇಕಿತ್ತೋ ಅದೇ ಧರ್ಮ ಗ್ರಂಥಗಳು ಮುಗ್ಧಮಾನವನ ಮೌಢ್ಯಕ್ಕೆ ಕಾರಣವಾಗಿ ಅವನಿಗೆ ಭಯದ ಪ್ರತಿರೂಪವಾಗಿ ಪರಿಣಮಿಸಿರುವುದು ಜನಾಂಗದ ಅವನತಿಯ ಕುರುಹಾಗಿದೆ. ''ಗ್ರಂಥಾಲಯ ಗಳನ್ನು ಸುಟ್ಟುಹಾಕಿ, ಏಕೆಂದರೆ ಅವುಗಳ ಬೆಲೆ ಈ ಒಂದು




ಭಯೋತ್ಪಾದಕರಿಗಾಗಿಯೇ ಪ್ರತ್ಯೇಕ 'ಶೂಟಿಂಗ್' ಸ್ಪರ್ಧೆ ಇಟ್ಟಿದ್ದರೆ... ಒಲಿಂಪಿಕ್ ಕ್ರೀಡಾಕೂಟ ಯಶಸ್ವಿಯಾಗ್ತಾ ಇತ್ತೇನೋ??

ಪುಸ್ತಕದಲ್ಲಿದೆ – ಅದೇ ಕುರಾನ್'' ಎಂದು ಹೇಳುವ ಅಲೆಕ್ಸಾಂಡ್ರಿಯಾವನ್ನು ವಶಪಡಿಸಿಕೊಂಡ ಒಂದನೆ ಒಮರ್‌ನ ಮೌಢ್ಯಕ್ಕೆ ಕಾರಣವಾಗುತ್ತದೆ. ವಿವೇಕಾನಂದರು ''...ಸಿದ್ಧಾಂತಗಳೆಲ್ಲ ಗ್ರಂಥದಿಂದ ಬರುವುವು. ಮತಾಂಧತೆ, ಅನ್ಯ ಧರ್ಮೀಯರನ್ನು ಹಿಂಸಿಸುವುದು ಇವಕ್ಕೆಲ್ಲ ಗ್ರಂಥಗಳೇ ಕಾರಣ. ಇಂದಿನ ಕಾಲದಲ್ಲಿ ಗ್ರಂಥಗಳು ಎಲ್ಲ ಕಡೆಯಲ್ಲಿಯೂ ಕಪಟಿಗಳನ್ನು ಉಂಟುಮಾಡುತ್ತಿರುವುವು'' ಎಂದರೆ ರಾಷ್ಟ್ರಕವಿ ಕುವೆಂಪು ಅವರು ''ಯಾವ ಒಂದು ಗ್ರಂಥವೂ 'ಏಕೈಕ ಪರಮಪೂಜ್ಯ' ಧರ್ಮಗ್ರಂಥವಾಗಬಾರದು. ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಸಾಧ್ಯವಾದವುಗಳನ್ನೆಲ್ಲ ಓದಿ ತಿಳಿದು ತನ್ನ 'ದರ್ಶನ'ವನ್ನು ತಾನೆ ನಿರ್ಣಯಿಸಿ ಕಟ್ಟಿಕೊಳ್ಳಬೇಕು'' ಎಂದಿದ್ದಾರೆ. ಯಾವುದೇ ಧರ್ಮಗ್ರಂಥ ಆಗಿರಲಿ ಅಲ್ಲಿಯ ಪುರೋಹಿತರಾದಿಯಾಗಿ ಯಾರೂ ಮುಕ್ತ ಮನಸ್ಸನ್ನು ಒಳಗೊಳ್ಳದ ಕಾರಣ ಆ ಧರ್ಮಗ್ರಂಥಗಳು ಅವರ ಶೋಷಣೆಯ ಅಸ್ತ್ರಗಳಾಗಿ ಪರಿಣಮಿಸಿ ಅವುಗಳ ಅಧ್ಯಯನಕ್ಕಿಂತ ಅಂಧ ಆಚರಣೆಯ ಕಿರಾತ ನರ್ತನ ನಿರಂತರ ನಡೆಯುತ್ತದೆ. ಅದರಿಂದ ಬಿಡುಗಡೆ ಹೊಂದುವ ವ್ಯಕ್ತಿಗತ ಆಂತರಿಕ ಜಾಗೃತಿ ಎಷ್ಟು ಜಾಗ್ರತೆ ಆಗುತ್ತದೆಯೋ ಮನುಕುಲಕ್ಕೆ ಅಷ್ಟು ಒಳಿತು.

ಒಂದು ರಾಜಿ ಸಂದರ್ಭದಲ್ಲಿ ಶಾಸಕರೋರ್ವರು ಹೇಳಿದ ಮಾತು ಆಶ್ಚರ್ಯ ತರುತ್ತದೆ. ಅದು ಅವರು ಸ್ವೀಕರಿಸಿರುವ ಪ್ರಮಾಣವಚನದ ಪಾವಿತ್ರ್ಯತೆಗೆ ಹಿಡಿದ ಕನ್ನಡಿಯಾಗಿದೆ. ಒಂದು ಹಳ್ಳಿಯ ಎರಡು ಗುಂಪಿನವರನ್ನು ರಾಜಿ ಮಾಡಿಸಿ ಆ ಊರಿನ ಗ್ರಾಮದೇವತೆ 'ಬೆಂಕಿಯಮ್ಮ'ಳಿಗೆ ಮಂಗಳಾರತಿ ಮಾಡಿಸಿದರು. ರಾಜಿ ಆದವರಿಗೆ ಆ ದೇವತೆ ಹೆಸರಿನಲ್ಲಿ ಪ್ರಮಾಣ ಮಾಡಿ ಎಂದು ಹೇಳುತ್ತಾ ಆ ಶಾಸಕರು ''ಹೇಳಿ ಕೇಳಿ ಬೆಂಕಿಯಮ್ಮ; ನಿಜವಾಗಿ ಪ್ರಮಾಣ ಮಾಡಿ. ನಾವು ವಿಧಾನಸೌಧದಲ್ಲಿ ಸುಮ್‌ಸುಮ್ಮೆ ಮಾಡ್ತೀವಲ್ಲ ಹಂಗೆ ಮಾಡ್ಬೇಡಿ'' ಎಂದರು. ಈ ಮಾತು ಏನನ್ನು ಹೇಳುತ್ತದೆ? ಅದು ಹೇಳುವುದು ಅವರ ಭಗ್ನಗೊಂಡ ಹೃದಯವನ್ನು, ಆತ್ಮವಂಚಕ ಸಂಸ್ಕೃತಿಯನ್ನು.

ನ್ಯಾಯಾಲಯಗಳಲ್ಲಿ ದಾವಾ ನಡೆಯುವ ಸಂದರ್ಭಗಳಲ್ಲಿ ಕೆಲವು ಸ್ವಾರಸ್ಯಕರ ಘಟನೆಗಳು ಜರುಗುತ್ತವೆ.

೧. ಒಬ್ಬ ಮುಸ್ಲಿಂ ಮಹಿಳೆಗೂ ಮತ್ತೊಬ್ಬ ಮುಸ್ಲಿಮನಿಗೂ ಕೋಳಿಯ ವಿಷಯದಲ್ಲಿ ಜಗಳವಾಯ್ತು. ಇವನಿಗೆ ಬುದ್ಧಿ ಕಲಿಸಬೇಕೆಂದು ಆಕೆ ತೀರ್ಮಾನಿಸಿದಳು. ಈಕೆಗೂ ಆತನಿಗೂ ಹಣದ ವ್ಯವಹಾರವಿತ್ತು. ಪ್ರೊನೋಟ್ ಬರೆಸಿಕೊಂಡಿದ್ದ ಆಕೆಗೆ ಆತ ಹಣ ಪಾವತಿಸಿದ್ದರೂ ನಂಬಿಕೆಯ ಮೇಲೆ ಆತ ಪ್ರೊನೋಟ್ ಮೇಲೆ ಷರಾ ಬರೆದಿರಲಿಲ್ಲ. ಅದನ್ನು ಬಂಡವಾಳ ಮಾಡಿಕೊಂಡು ಆಕೆ ಹಣ ಬರಬೇಕೆಂದು ಆತನ ಮೇಲೆ ದಾವಾ ಹೂಡಿದಳು. ವಿಚಾರಣೆಗೆ ಬಂದಾಗ ಆತ ನ್ಯಾಯಾಧೀಶರ ಮುಂದೆ ''ಹಣ ಕೊಟ್ಟಿಲ್ಲ ಎಂದು ಆಕೆ ಮಸೀದಿಯಲ್ಲಿ ಪ್ರಮಾಣ ಮಾಡಲಿ. ನಾನು ಕೊಡುತ್ತೇನೆ'' ಎಂದ. ಆಕೆ ಮಾಡ್ತೀನಿ ಎಂದು ಕೋರ್ಟ್ ಕಮಿಷನರ್ ಜೊತೆ ಹೊರಟಳು. ಮಸೀದಿ ಹತ್ತಿರ ಹತ್ತಿರ ಬರುತ್ತಿದ್ದಂತೆ ಆಕೆ ತನ್ನ ವಕೀಲರಿಗೆ ಹೇಳಿದಳು ''ನಾನು ಪ್ರಮಾಣ ಮಾಡಲ್ಲ ಸ್ವಾಮಿ, ಅವನು ದುಡ್ಡು ಕೊಟ್ಟಿದ್ದಾನೆ'' ಎಂದಳು. ದಾವಾ ವಜಾ ಆಯ್ತು.

೨. ಹೆಂಡತಿಯನ್ನು ಕಳೆದುಕೊಂಡಿದ್ದ ಒಬ್ಬ ಕ್ರಿಶ್ಚಿಯನ್ ಮತ್ತೊಬ್ಬ ಮಹಿಳೆಯನ್ನು ಇಟ್ಟುಕೊಂಡಿದ್ದ. ಆತ ತನ್ನ ತೋಟದಲ್ಲಿ ನಾಯಿಯನ್ನು ಹಿಡಿದುಕೊಂಡು ಹೋಗುತ್ತಿದ್ದಾಗ ''ನಾಯಿಗೆ ಒಂದು ನಾಯಿ'' ಎಂದು ಬೈದ ವ್ಯಕ್ತಿಯ ಮೇಲೆ ಮಾನನಷ್ಟ ಮೊಕದ್ದಮೆ ಹಾಕಿದ. ನ್ಯಾಯಾಲಯದಲ್ಲಿ ಎದುರು ವಕೀಲರು ಹಾಕಿದ ಪ್ರಶ್ನೆಗಳಿಗೆ ಸುಳ್ಳು ಹೇಳದೆ ''ಹೌದು, ನಾನು ಮಹಿಳೆಯನ್ನು ಇಟ್ಟುಕೊಂಡಿದ್ದೇನೆ. ಆಕೆಗೆ ಇಂತಿಂಥ ಆಸ್ತಿಗಳನ್ನು ಬರೆದಿದ್ದೇನೆ'' ಎಂದು ನಿಜ ಹೇಳಿದ. ಅಮೆರಿಕಾದ ಅಧ್ಯಕ್ಷನಾಗಿದ್ದ ಬಿಲ್ ಕ್ಲಿಂಟನ್ ಲೆವೆನ್‌ಸ್ಕಿ ಕೇಸಿನಲ್ಲಿ ಸುಳ್ಳು ಹೇಳದೆ ಒಪ್ಪಿಕೊಂಡದ್ದು ಆತ ನಿಜವಾದ ಕ್ರಿಶ್ಚಿಯನ್ ಎಂಬುದನ್ನು ಸಾಬೀತುಪಡಿಸಿದೆ!

೩. ಹಿಂದೂ ಒಬ್ಬ ತನ್ನ ಜಾತಿಯವನ ಮೇಲೆ ಹಣ ಬರಬೇಕೆಂದು ದಾವಾ ಹಾಕಿದ್ದ. ಎದುರು ಕಕ್ಷಿದಾರ ನ್ಯಾಯಾಲಯದಲ್ಲಿ ನಾನು ಹಣಕೊಡಬೇಕಾಗಿಲ್ಲ ಎಂದ. ಆಗ ವಾದಿ ''ಹಾಗಂತ ಸಿದ್ಧೇಶ್ವರ ದೇವಸ್ಥಾನದಲ್ಲಿ ದೇವರ ಮೇಲೆ ಪ್ರಮಾಣ ಮಾಡಲಿ, ಬಿಟ್ಟುಬಿಡುತ್ತೇನೆ'' ಎಂದ. ಎದುರು ಕಕ್ಷಿದಾರ ನಾಳೆ ಮಾಡುತ್ತೇನೆ ಎಂದ. ಮಾರನೆ ದಿನ ಎದುರು ಕಕ್ಷಿದಾರ ಕೋರ್ಟ್ ಕಮೀಷನರ್ ಜೊತೆ ಹೋದ. ''ನಾನು ಹಣ ಕೊಡಬೇಕಾಗಿಲ್ಲ'' ಎಂದು ದೇವರ ಮುಂದೆ ಪ್ರಮಾಣ ಮಾಡಿದ. ಆತನ ವಕೀಲರು ಪ್ರತ್ಯೇಕವಾಗಿ ಕರೆದು ನೀನು ಇದನ್ನು ನಿನ್ನೆಯೇ ಮಾಡಬಹುದಿತ್ತು, ಏಕೆ ಇವತ್ತಿಗೆ ಹಾಕಿಸಿಕೊಂಡೆ ಎಂದು ಕೇಳಿದರು. ಅದಕ್ಕೆ ಕಕ್ಷಿದಾರ ಹೇಳಿದ ''ಇಲ್ಲಾ ಸ್ವಾಮಿ, ನಿನ್ನೆ ಸಂಜೆ ಬಂದು ದೇವರಿಗೆ ಹರಿಕೆ ಕಟ್ಟಿಕೊಂಡಿದ್ದೀನಿ. ನಾಳೆ ಸುಳ್ಳೇಳಿ ಹರಕೆ ತೀರುಸ್ತೀನಿ ಅಂತ'' ಎಂದ.

ಇವು ನಿಜವಾದ ಧಾರ್ಮಿಕ ವ್ಯಕ್ತಿಗೂ, ಸ್ವಾರ್ಥಕ್ಕಾಗಿ ಧರ್ಮ, ದೇವರುಗಳನ್ನು ಬಳಸಿಕೊಳ್ಳುವವನಿಗೂ ಇರುವ ವ್ಯತ್ಯಾಸವನ್ನು, ಆಂತರಿಕ ನೆಲೆಗಟ್ಟನ್ನು ತಿಳಿಯಪಡಿಸುತ್ತವೆ.

ಯಾರೇ ಆಗಿರಲಿ ಆತ ತೊಡಗಿಸಿಕೊಳ್ಳುವ ವೃತ್ತಿಯ ಪಾವಿತ್ರ್ಯತೆಗೆ ಧಕ್ಕೆ ಬರದಂತೆ ಆತನ ಅಂತಃಸಾಕ್ಷಿಯನ್ನು ಜಾಗೃತಗೊಳಿಸಿ ವೃತ್ತಿಗೌರವಕ್ಕನುಗುಣವಾಗಿ ಪ್ರಾಮಾಣಿಕತೆಯಿಂದ ಕೆಲಸಮಾಡಲು ಈ ಪ್ರಮಾಣವಚನವನ್ನು ತೆಗೆದು

ಕೊಳ್ಳಬೇಕೆಂಬ ನಿಯಮವಿದೆ. ವಕೀಲರಿಗೆ, ವೈದ್ಯರಿಗೆ ಹಾಗೂ ಇತರ ವೃತ್ತಿಯವರಿಗೆ ಅವರವರು ನೋಂದಾಯಿಸಿ ಕೊಂಡ ವೃತ್ತಿಯ ಅನುಮತಿ ಪತ್ರ ಪಡೆಯುವಾಗ ಪ್ರಮಾಣ ವಚನ ಬೋಧಿಸುವ ಕ್ರಮವಿದೆ. ಎಲ್ಲರೂ ಅದರಂತೆ ನಡೆದರೆ ಮಾನವಕುಲ ಸತ್ವದ ಸನಿಹಕ್ಕೆ ಸಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ಹಣ, ಆಸ್ತಿ, ಅಧಿಕಾರ, ಸ್ವಾರ್ಥ, ಜಾತಿ, ಮತ, ಕುಲ, ಗೋತ್ರಗಳ ಅನಿಷ್ಟ ಅಮರಿಕೊಂಡು ಇಡೀ ವ್ಯಕ್ತಿತ್ವವನ್ನೇ ನುಂಗಿ ನೊಣೆಯುತ್ತಿದೆ. ಇದರ ಭಾರದಡಿಯಲ್ಲಿ ಸಿಕ್ಕಿ, ಅಂತಃಸಾಕ್ಷಿಯನ್ನು ಜಾಗೃತಿಗೊಳಿಸಬೇಕಾಗಿದ್ದ ಪ್ರಮಾಣವಚನ ನಲುಗಿಹೋಗಿದೆ.

ವಕೀಲನ ವೃತ್ತಿಗೆ ಹೋಲಿಸಿದಾಗ ವರ್ತಕನ ವೃತ್ತಿಯಲ್ಲಿ ನ್ಯಾಯ ಸುಲಭ ಮತ್ತು ಅವನ ಹಸ್ತ ಸಿದ್ಧ. ಸಮಾಜವು ವರ್ತಕನ ಮೇಲೆ ಇಟ್ಟಿರುವ ನಂಬಿಕೆ ಅಭೂತಪೂರ್ವ. ವಕೀಲ ಕಕ್ಷಿಗಾರನ ಪರ ವಾದ ಮಾಡಬಹುದು. ಆದರೆ ನ್ಯಾಯಾನ್ಯಾಯಗಳ ತೀರ್ಪು ಅವನ ಕೈಲಿ ಇರುವುದಿಲ್ಲ. ಅದು ನ್ಯಾಯಾಧೀಶರಿಗೆ ಸೇರಿದ್ದು. ವರ್ತಕನ ವೃತ್ತಿ ಹಾಗಲ್ಲ. ನ್ಯಾಯವನ್ನು ಒದಗಿಸುವ ಸಂಪೂರ್ಣ ಅಧಿಕಾರವನ್ನು ಸಹ ಸಮಾಜ ಅವನಿಗೆ ಕೊಟ್ಟಿದೆ. ಆದ್ದರಿಂದ ವರ್ತಕನ ಅಂತಃಸಾಕ್ಷಿಯೂ ಕೂಡ ಅಷ್ಟೇ ಜಾಗೃತವಾಗಿರಬೇಕು. ನ್ಯಾಯದ ತ್ರಾಸು ಅಥವಾ ತಕ್ಕಡಿ (ನ್ಯಾಯ) ಅವನ ಕೈಯಲ್ಲೇ ಇರುತ್ತದೆ. ಎಂದರೆ ವರ್ತಕ ಒಂದು ದೃಷ್ಟಿಯಲ್ಲಿ ನ್ಯಾಯಾಧೀಶ ಕೂಡ ಹೌದು. ಆ ಸ್ಥಾನ ವಕೀಲನಿಗೆ ಇಲ್ಲ. ಹೀಗಾಗಿ ಸಮಾಜಕ್ಕೆ ವರ್ತಕನ ನ್ಯಾಯವಿತರಣೆ ನೇರವಾದದ್ದು, ಅಷ್ಟೇ ಜವಾಬ್ದಾರಿಯುತವಾದದ್ದು. ಕಲಬೆರಕೆ ಇಲ್ಲದೆ, ಅಳತೆ ತೂಕದಲ್ಲಿ ವ್ಯತ್ಯಾಸವಿರದ ಪ್ರಾಮಾಣಿಕ ನ್ಯಾಯವಿತರಣೆಯ ನ್ಯಾಯಾಧೀಶ ವರ್ತಕ. ಈ ಗೌರವವನ್ನು ಮಾನ್ಯ ಮಾಡುವ ಅಂತಃಸಾಕ್ಷಿ ಎಷ್ಟು ವರ್ತಕರಲ್ಲಿದೆ ? ಅವರವರ ಸ್ಥಾನ ಗೌರವವನ್ನು ಮನ್ನಣೆ ಮಾಡುವ ಅಂತಃಸಾಕ್ಷಿ ಎಷ್ಟು ಜನ ವೈದ್ಯರಿಗಿದೆ ? ವಕೀಲರಿಗಿದೆ ? ನ್ಯಾಯಾಧೀಶರಿಗಿದೆ ? ಮಠಾಧೀಶರಿಗಿದೆ ! ಆಯಾಯ ವೃತ್ತಿಯಲ್ಲಿ ನಿರತರಾಗಿರುವವರಿಗೆ ಇದೆ ? ಇದನ್ನು ಇಂದು ನಾವು ಅತ್ಯಂತ ಹೆಚ್ಚಿನ ಗುರುತರ ಜವಾಬ್ದಾರಿಯಿಂದ ಆಲೋಚಿಸಬೇಕಾಗಿದೆ.

ಮಾನವ ಇತಿಹಾಸದ ಅನುಭವದ ಹಿನ್ನೆಲೆಯಲ್ಲಿ ಹೇಳುವುದಾದರೆ ಈ ಪ್ರಮಾಣವಚನ ಪರಿಣಾಮಕಾರಿ ಎನಿಸಿಲ್ಲ. ಅಂತಃಸಾಕ್ಷಿಯನ್ನು ಕಳೆದುಕೊಂಡ ಯಾವ ವ್ಯಕ್ತಿಗೂ ನಿಜವನ್ನು ನುಡಿಯಲು ಸಾಧ್ಯವಿಲ್ಲ. ಈ ಹಿನ್ನೆಲೆಯಲ್ಲಿ ಎಲ್ಲ ಕಾನೂನುಗಳೂ ನಿರುಪಯುಕ್ತ. ಹೀಗಾಗಿ ಕಾನೂನುಗಳು ಮನುಷ್ಯನ ಸ್ವಾಭಾವಿಕ ಅಂತಃಕರಣಕ್ಕೆ ವಿರುದ್ಧವಾಗಿ ಅನುಕೂಲಕ್ಕಿಂತ ಹೆಚ್ಚಾಗಿ ಅನಾನುಕೂಲಕ್ಕೆ ಕಾರಣವಾಗಿವೆ. ಪ್ರಮಾಣವಚನ ಬೋಧಿಸುವುದು, ತೆಗೆದುಕೊಳ್ಳುವುದು ಒಂದು ಯಾಂತ್ರಿಕ ಕ್ರಿಯೆಯಾಗಿ ಉಳಿದಿದೆ.

ಅಂತಃಸಾಕ್ಷಿಯನ್ನು ಹಿಡಿಯಹೊರಟಿರುವ ಈ ಮರಳುಗಾಡಿನಲ್ಲಿ ಪ್ರಮಾಣವಚನದ ಪರಿಣಾಮ ಕೈ ಹಿಡಿಯುವಷ್ಟು ಮಾತ್ರ. ಧರ್ಮಗ್ರಂಥಗಳಿಂದ ಸಾಧ್ಯವಾಗದ, ಕಾನೂನು ಹಿಡಿತಕ್ಕೆ ದಕ್ಕದ ಈ ಅಂತಃಸಾಕ್ಷಿ ಎಂಬ ಪಾದರಸವನ್ನು ಹಿಡಿಯಲು ಯಾವ ಮಾರ್ಗದಲ್ಲಿ ದುಡಿಯಬೇಕು ? ಇದು ಮಾನವ ಕುಲ ಬದುಕುಳಿಯ ಬೇಕಾದರೆ ತಾನು ಎದುರಿಸಬೇಕಾದ ಸವಾಲು !

ಒಟ್ಟಾರೆ ಸಾಮಾಜಿಕ ಜೀವನದ ಸತ್ಯ ಸಾಕ್ಷಾತ್ಕಾರಕ್ಕಾಗಿ, ಶುದ್ಧಿಗಾಗಿ, ಪಾವಿತ್ರ್ಯತೆಗಾಗಿ ಮನುಷ್ಯನ ಅಂತಃಸಾಕ್ಷಿಯ ಜಾಗೃತಿ ಅನಿವಾರ್ಯ. ಅದನ್ನು ಜಾಗೃತಿಗೊಳಿಸುವಲ್ಲಿ ನಡೆದಿರುವ ಪ್ರಯತ್ನಗಳೂ ಅಪಾರ. ಅಂತಹ ದೀರ್ಘ ಪಯಣದ ಮೈಲಿಗಲ್ಲುಗಳಲ್ಲಿ ನಾವೀಗ ಕ್ರಮಿಸುತ್ತಿರುವುದು ಈ 'ಪ್ರಮಾಣವಚನ'. ಇನ್ನು ಮುಂದೆ ನಾವು ಕ್ರಮಿಸಬೇಕಾಗಿರುವ ಮೈಲಿಗಲ್ಲುಗಳ ಕಡೆಗೆ ಕಡು ಎಚ್ಚರಿಕೆಯಿಂದ ಪಯಣಿಸೋಣ.

ಜ. ಹೊ. ನಾರಾಯಣಸ್ವಾಮಿ
೨೦೬೪/ಅ, 'ಮಾನವ', ಉತ್ತರ ಬಡಾವಣೆ, ಹಾಸನ - ೫೭೩ ೨೦೧



# ನೆಲದೊಳಗಿನ ಬೇರು

ಕಸಿ ಮಾಡಿದ ಹೊಸದೊಂದು ಅಂದದ ಸಸಿ
ಮುಕ್ತಮಾರುಕಟ್ಟೆಯಲ್ಲಿ ತಂದು
ಮನೆಯ ಅಂಗಳದಲ್ಲಿ ನೆಡಲು
ಒಡೆಯಿತು ಗುದ್ದಲಿಯ ಅಗೆಯಲು
ನೆಲದೊಳಗಿನ ಬೇರು

ಅಡ್ಡ ಆಧಾರ ಕೊಟ್ಟು ಎಬ್ಬಿದರೂ ಬರಲಿಲ್ಲ ಗಟ್ಟಿ
ನೆಲದ ಸಂಬಂಧದ ಭದ್ರಬಾಹು
ದಣಿದ ಹಣೆಯ ಬೆವರುಹನಿ
ಮಣ್ಣಿಗೆ ಮುತ್ತಿಡಲು
ಬೇರಿನ ಮರದ ನೆನಪುಗಳ ಸುರಳಿ
ಬಿಚ್ಚುತ್ತವೆ ಗಿಡದ ಟೊಂಗೆ ಝಲಿಸಿದಂತೆ
ಎಲೆಗಳ ಸಪ್ಪಳದಲ್ಲಿ ಕಾಯಿ ಉದುರಿದಂತೆ

ಬೇರು ಹೆಣಿಕೆಯ ಜಡೆಯ ಜಾಡು
ಈ ಮನೆಯೊಳಗಿನಿಂದ ಆ ಓಣಿಗೂ ಹಬ್ಬಿತ್ತು
ಬಿದ್ಹೋದ ಹಾಳುಮಣ್ಣಿನ ಗೋಡೆಯಲ್ಲೂ ಅದರ ಬಾಲ
ಓಣಿಯನ್ನೇ ತಬ್ಬಿಕೊಂಡಿದ್ದವು
ದೆವ್ವದಾಕಾರದ ಟೊಂಗೆಗಳು
ಊರಿಗೆಯೇ ಸ್ವಾಗತದ ತೋರಣ
ಸಮುದ್ರದಂತೆ ಬಿದ್ದ ಕರಿನೆರಳು ಗಾಳಿಸುಖ
ಮಾನವರಿಗೆ ಪಶುಗಳಿಗೂ ತಂಪಿನಗೂಡು
ದಣಿದವರಿಗೆ ತಂಬಿಗೆ ತುಂಬಿದ ಮಜ್ಜಿಗೆ
ಹಿರಿಯರಿಗೆ ಅನುಭಾವದ ಕಟ್ಟೆ
ಆಡೋ ಹುಡುಗರಿಂದ ಗಿಡಕೆಲ್ಲ ಕಚಗುಳಿ

ಅದೆಷ್ಟೋ ಜಾತಿವಂತರ ಕೇಕೆ
ಜಾತಿಹೀನರ ಕೂಗು ಗಿಡದ ಒಡಲಿನಲ್ಲಿ
ಅನಾಥ ಹೆಣ್ಣಿನ ಸೆರಗು ಸುತ್ತಿದಂತೆ
ತೊಗಟೆ ಬಿಚ್ಚಿದ ಗೆರೆಗಳ ಲೆಕ್ಕಾಚಾರ

ಬಿದ್ಹೋಗಿದೆ ಮುದಿಮರ
ತನ್ನ ಹಳೆಯ ಬೇರುಗಳನ್ನು ನೆಲದಲ್ಲಿ ಹಾಗೇ ಕಾಯ್ದು
ಅಲ್ಲಿ ನೆಡಲು ಹೊರಟಿದ್ದೇನೆ
ಅದೆಲ್ಲಿಂದಲೋ ದಾಟಿ ಬಂದ
ಮುಕ್ತಮಾರುಕಟ್ಟೆಯೊಳಗಿನ ಕಸಿ ಮಾಡಿದ ಸಸಿಯನು.

ಡಾ|| ಕೆ. ಎಸ್. ದೊಡ್ಡಮನಿ
ನಂ. ೮೦, ಸರಾಫ ಕಾಲನಿ,
ಟಿಳಕವಾಡಿ, ಬೆಳಗಾವಿ - ೫೯೦ ೦೦೬

# ಮನೆ ಬದಲಾಯಿಸುವ ಸಂಕಟ

**ನೋ**ವುಗಳಲ್ಲಿ ಮಹಾ ನೋವು ಎಂದರೆ ಹೆಣ್ಣಿಗೆ ಹೆರಿಗೆ ನೋವು, ಸರ್ವರಿಗೂ ಅನ್ವಯಿಸುವದಾದರೆ ಹಲ್ಲು ನೋವು. ಹಾಗೆಯೇ ಮಹಾ ಸಂಕಟವೆಂದರೆ ಪ್ರಾಣಸಂಕಟವೊಂದನ್ನು ಬಿಟ್ಟರೆ ಅದಕ್ಕೆ ಹತ್ತಿರದ್ದು ಮನೆ ಬದಲಾಯಿಸುವ ಸಂಕಟ ಎಂದು ನಾನಂದುಕೊಂಡಿದ್ದೇನೆ ! 'ಮದುವೆ ಮಾಡಿ ನೋಡು, ಮನೆ ಕಟ್ಟಿ ನೋಡು' ಎಂದು ಜನ ನಮ್ಮನ್ನು ಹೆದರಿಸುತ್ತಾರಲ್ಲ, ಅದಕ್ಕೆ 'ಮನೆ ಬದಲಾಯಿಸಿ ನೋಡು' ಎಂಬುದನ್ನೂ ಸೇರಿಸಬಹುದೇನೋ !

ನಾವೆಲ್ಲ ಹುಟ್ಟುವಾಗಲೇ ಶ್ರೀಮಂತರಾಗಿ ಸ್ವಂತ ಮನೆಯ ಭಾಗ್ಯ ಪಡೆದವರಲ್ಲ. ಸ್ವಂತ ಮನೆ ಇದ್ದರೂ ಕೆಲಸದ ಅನಿವಾರ್ಯತೆಯಿಂದಾಗಿ ನಮಗಾಗಲಿ ಅಥವಾ ನಮ್ಮ ಮಕ್ಕಳು ಮರಿಗಳಿಗಾಗಲಿ ಬೇರೆ ಮನೆ ಮಾಡಿದವರು. ನನ್ನ ತಂದೆಯವರಂತೂ ಸರ್ಕಾರಿ ಮಾಧ್ಯಮಿಕ ಶಾಲೆಯ ಮೇಷ್ಟ್ರಾಗಿದ್ದುದರಿಂದ ವರ್ಗವಾದ ಕಡೆಗೆ ಹೋಗಲೇಬೇಕಾಗಿತ್ತು. ಅದೆಲ್ಲಾ ಶಿವಮೊಗ್ಗ ಜಿಲ್ಲೆಯೊಳಗೆ ಆಯ್ತೆನ್ನಿ. ಶಿರಾಳಕೊಪ್ಪದಿಂದ ಪ್ರಾರಂಭವಾಗಿ, ಅಲ್ಲಿಂದ ಭೀಮನ ಕೋಣೆ, ಸಾಗರ, ಸೊರಬ,ಆನವಟ್ಟಿ, ಕೊನೆಯಲ್ಲಿ ಮತ್ತೆ ಸಾಗರದಲ್ಲಿ ಹೆಡ್ಮಾಸ್ಟರ್ ಆಗಿ ನಿವೃತ್ತಿ. ಒಂದು ಊರಲ್ಲಿ ಒಂದು ಮನೆ ಮಾಡಿದ ನಂತರ ಅದು ಎಷ್ಟೇ ಅನಾನುಕೂಲವಾಗಿರಲಿ ಮತ್ತೆ ಬೇರೊಂದು ಮನೆ ಅವರು ಹುಡುಕಿದವರಲ್ಲ. ಬಡತನದಿಂದಾಗಿ ತಿಂಗಳ ಬಾಡಿಗೆ ಕೊಡುವುದರಲ್ಲಿ ಹೆಚ್ಚು ಕಡಿಮೆ ಆದರೂ ಮನೆ ಬಿಡಿ ಎಂದು ಮಾಲೀಕರು ನಮ್ಮನ್ನು ಎಬ್ಬಿಸುತ್ತಿರಲಿಲ್ಲ. ಬಾಡಿಗೆ ಮನೆಯಾದರೂ ಅದು ನಾವು ಬಿಟ್ಟು ಹೋಗುವ ತನಕ ನಮ್ಮ ಸ್ವಂತ ಮನೆ ಇದ್ದಂತೆಯೇ. ಈಗೀಗ ಮನೆ ಬಾಡಿಗೆ ಮನಸ್ಸಿಗೆ ಬಂದಂತೆ ಹೆಚ್ಚುಸುವುದಕ್ಕಾಗಿ ನಾಲ್ಕೈದು ವರ್ಷ ಆಯ್ತೆಂದರೆ ಸಾಕು ನಗರಗಳಲ್ಲಿ ಮನೆ ಮಾಲೀಕನ ಕಾಟ, ಮನೆ ಬಿಡಿ ಎಂದು. ಹೀಗಾಗಿ ಎಲ್ಲರೂ ಸ್ವಂತ ಮನೆ ಆದಷ್ಟು ಬೇಗ ಕಟ್ಟಿಕೊಂಡು ಹಾಯಾಗಿ ಇರೋಣ, ಮನೆ ಬದಲಾಯಿಸುವ ಕಾಟವಿಲ್ಲದೆ ಎಂದು ಬಯಸುವುದು, ಅದಕ್ಕಾಗಿ ಹೆಣಗಾಡುವುದು.

ನಮ್ಮ ತಂದೆಯವರು ಮನೆ ಬದಲಾಯಿಸುವಾಗ ಅಷ್ಟೊಂದು ಕಷ್ಟ ಇರಲಿಲ್ಲ. ಮನೆ ಸಾಮಾನು ಅಂದ್ರೆ ಎಷ್ಟಪ್ಪ! ಮಡಿಚಿದ ಒಂದು ಸೀರೆಯಲ್ಲೋ, ಹರಕು ಪಂಚೆಯಲ್ಲೋ ಗಂಟು ಕಟ್ಟುವಷ್ಟು ಬಟ್ಟೆ ಬರೆ . ಪಾಪ ಅವು ಇಸ್ತ್ರಿಯನ್ನು ಬಯಸುವ ಬಟ್ಟೆಬರೆಗಳಾಗಿರಲಿಲ್ಲ, ಒರಟು ಮುಂಡೇವು ! ಪಾತ್ರೆ ಪಡಗಗಳೂ ಅಷ್ಟೇ, ಒಡೆದು ಹೋಗುವಂತಹ ಗಾಜಿನ ಲೋಟಗಳು, ಬೋಗುಣಿಗಳು ಆಗ ಇರಲಿಲ್ಲ. ಎಲ್ಲಾ ತಾಮ್ರ, ಹಿತ್ತಾಳೆ, ಕಂಚಿನ ಪಾತ್ರೆಗಳು. ಹೀಗಿದ್ದರೂ ಬಚ್ಚಲು ಮನೆಗೆಂದು ಒಂದು ಹಂಡೆ ಇದ್ದೇ ಇರುತ್ತಿತ್ತು. ಅದರೊಳಗೆ ಪಾತ್ರೆಗಳಲ್ಲದೆ, ಜರಡಿ,ಬೀಸಣಿಗೆ,ಕಸಬರಿಗೆ ಹೀಗೆ ಕಾಟು ಕೂಟು ಎಲ್ಲಾ ಹಿಡಿಸುತ್ತಿದ್ದವು. ಜಡ ಭರತ ಅಂದರೆ ಬೀಸೋಕಲ್ಲು ಮಾತ್ರ. ಇದನ್ನೆಲ್ಲಾ ಒಂದು ಎತ್ತಿನ ಗಾಡಿಯಲ್ಲೋ ಅಥವಾ ಬಸ್ಸಿನ ಟಾಪಿನ ಮೇಲೋ ಹಾಕಿ ಸುಲಭವಾಗಿ ಸಾಗಿಸಬಹುದಿತ್ತು. ಜೋಪಾನವಾಗಿ ಕಂಕುಳಲ್ಲೇ ಇಟ್ಟುಕೊಂಡು ಬರುವಂಥಾದ್ದು ಎಂದರೆ ಅಮ್ಮನ ವಶದಲ್ಲಿರುವ ಉಪ್ಪಿನ ಕಾಯಿಯ ಜಾಡಿ, ನನ್ನ ವಶದಲ್ಲಿರುವ ಫ್ರೇಮ್ ಹಾಕಿದ ದೇವರ ಪಟಗಳು ! ಪ್ಯಾಕ್ ಮಾಡುವಾಗ, ಬಂಡಿಗೇರಿಸುವಾಗ, ಕೂಲಿಯವರನ್ನು ನಾವು ಹುಡುಕಬೇಕಾಗಿರಲಿಲ್ಲ. ಗುರು ಸೇವೆಗಾಗಿ ಒಂದು ಕಪಿ ಸೈನ್ಯವೇ ಇರುತ್ತಿತ್ತಲ್ಲ! ಹಾಗಾಗಿ ಮನೆ ಬದಲಾಯಿಸುವುದು ನಮಗೊಂದು ಸಂಕಟವೆಂದು ತೋರುತ್ತಿರಲಿಲ್ಲ. ಅದೊಂದು ಆಟವಾಗಿತ್ತು. ಮಾನಸಿಕವಾಗಿಯೂ ನಮಗೆ ಇದೊಂದು ಕಿರಿಕಿರಿ ಎನಿಸುತ್ತಿರಲಿಲ್ಲ.



ನಾವೀಗ ನಾಗರಿಕತೆಯೆಂಬ ಹುಚ್ಚಲ್ಲಿ ಬಹಳಷ್ಟು ಮುಂದೆ ಸಾಗಿ ಜಂಗಮ ಗುಣಗಳನ್ನು ತೊರೆದು ''ನೆಲ್ಸನ್'' ಆಗಿಬಿಟ್ಟಿದ್ದೇವೆ. ಫರ್ನಿಚರ್ ಅಂತೆ, ಟಿ.ವಿ ಅಂತೆ, ಕಂಪ್ಯೂಟರಂತೆ, ವಾಷಿಂಗ್ ಮಷಿನ್ಅಂತೆ, ಫ್ರಿಜ್ಜಂತೆ, ಫ್ಯಾನಂತೆ, ಫೋನಂತೆ, ರುಬ್ಬುವ ಯಂತ್ರವಂತೆ, ಮಿಕ್ಸಿ ಅಂತೆ, ಜೂಸ್ ಮೇಕರ್ ಅಂತೆ, ಕಾಫಿ ಮೇಕರ್ ಅಂತೆ, ವ್ಯಾಕ್ಯೂಮ್ ಕ್ಲೀನರ್ ಅಂತೆ. ಮನೆ ಬದಲಾಯಿಸಬೇಕಂದರೆ 'ಪ್ಯಾಕರ್ಸ್ ಆಂಡ್ ಮೂವರ್ಸ್' ಅವರನ್ನು ಹುಡುಕಬೇಕಾಗುತ್ತದೆ. ಅವರಿಗೆ ಹಣ ಸುರಿಯುವ ಬದಲು ದೊಡ್ಡ ದೊಡ್ಡ ಸಾಮಾನುಗಳನ್ನು ಸಿಕ್ಕಷ್ಟು ಬೆಲೆಗೆ ಮಾರಿ ಆದಷ್ಟು ಹಗುರ ಮಾಡಿಕೊಂಡು ಹೋದ ಕಡೆ ಮತ್ತೆ ಹೊಸತಾಗಿ ಕೊಂಡರಾಯ್ತು ಎನ್ನುವವರು ಇದ್ದಾರೆ. ನಾವು ಬಳಸುವ ನಿರ್ಜೀವ ವಸ್ತುಗಳೊಡನೆ ಭಾವನಾತ್ಮಕವಾದ ಸಂಬಂಧವನ್ನು ಬೆಳೆಸಿಕೊಂಡು ಎಲ್ಲವನ್ನೂ ಹೊತ್ತುಕೊಂಡು ಹೋಗುವವರ ಬಗ್ಗೆ ನನಗೆ ಏನು ಹೇಳಬೇಕೆಂದು ತಿಳಿಯುವುದಿಲ್ಲ.

ಈ ವಿಷಯದಲ್ಲಿ ವಿದೇಶಿಯರೇ ವಾಸಿ. ಬಾಡಿಗೆ ಮನೆ ಆಗಲಿ, ಮಾರುವ ಮನೆ ಆಗಲಿ, ಅಲ್ಲಿ ಫ್ರಿಜ್, ಫ್ಯಾನು, ಫೋನಿಂದ ಹಿಡಿದು ಸಕಲ ಔಪಯೋಗಿಕ ಸಲಕರಣೆಗಳೂ ಲಭ್ಯ. ಮನೆ ಬದಲಾಯಿಸುವವನು ಕೇವಲ ತನ್ನ ಬಟ್ಟೆ ಬರೆಗಳ ಸೂಟ್ ಕೇಸ್ ಒಯ್ದರಾಯ್ತು. ಯಾವುದೇ ವಸ್ತುವಿಗೆ ಅಂಟಿಕೊಳ್ಳದೆ ಸೌಲಭ್ಯ ಇದ್ದರೆ ಸಾಕು ಎಂಬ ರೀತಿಯಲ್ಲಿ ಬದುಕುವ ಅವರ ವೈರಾಗ್ಯಭಾವ ನನಗೆ ತುಂಬಾ ಹಿಡಿಸುತ್ತದೆ. ಆದರೆ ಈ ಡಿಟ್ಯಾಚ್‌ಮೆಂಟನ್ನು ಮೂಲದಲ್ಲೇ ಅಳವಡಿಸಿಕೊಂಡರೆ ಹೆಚ್ಚು ನೆಮ್ಮದಿಯಿಂದ ಇರಬಹುದೆಂದು ತಾತ್ವಿಕವಾಗಿ ಭಾರತೀಯರಾದ ನಾವು ಅರಿತುಕೊಂಡರೆ, ರಾಜಕೀಯವಾಗಿಯೂ ಇದನ್ನು ಸಾಧಿಸಬಹುದು ಎಂದು ನಮಗೆ ತೋರಿಸಿಕೊಟ್ಟವರು ಕಮ್ಯೂನಿಸ್ಟರು. ರೈಲು ನಮ್ಮದಲ್ಲ, ಸರ್ಕಾರಕ್ಕೆ ಸೇರಿದ್ದು. ಅದರಲ್ಲಿ ಸುಖಕರವಾಗಿ ಪ್ರಯಾಣ ಮಾಡುವುದಷ್ಟೇ ನಮ್ಮ ಕಾಳಜಿ. ಪ್ರಯಾಣ ಮುಗಿದ ಮೇಲೆ ನಮಗೆ ಸೀಟು ಬೇಕಾಗುವುದಿಲ್ಲ. ಅದೇ ರೀತಿ ಆಸ್ತಿಯ ಹಕ್ಕು ನಮಗಿಲ್ಲದಂತಾದರೆ, ವಸತಿ ಸೌಕರ್ಯ, ಉದ್ಯೋಗ ಸೌಕರ್ಯ ಪಡೆಯುವುದು ಮಾತ್ರ ನಮ್ಮ ಹಕ್ಕಾದರೆ ನಮ್ಮಲ್ಲಿ ಆಸ್ತಿಗಾಗಿ ಜಗಳ, ವಂಚನೆ, ಕೋರ್ಟು, ಕಚೇರಿ ಯಾವ ತಾಪತ್ರಯವೂ ಇರುವುದಿಲ್ಲ. ರೈಲಲ್ಲಿ ಬಡವ ಶ್ರೀಮಂತ ಎಂಬ ಭೇದ ಭಾವ, ತಾರತಮ್ಯ ಸಾಧ್ಯವಿಲ್ಲ. ದುಡಿದು ತಿಂದು ಇದು ನನ್ನದು,ಅದು ನಿನ್ನದು ಎಂದು ಗುದ್ದಾಡದಂತೆ ಎಲ್ಲರೂ ಒಟ್ಟಾಗಿ ಒಂದೇ ಸಮವಾಗಿ ಬದುಕುವ ಹಾದಿ ಹಿಡಿಯದೆ ನಾವು ಪಾಶ್ಚಿಮಾತ್ಯರ ಬಂಡವಾಳಶಾಹಿ ಸ್ಟೈಲಿಗೆ ಏಕೆ ಮಾರುಹೋಗಿದ್ದೇವೆ ? ಈಗಂತೂ ಎಲ್ಲರಿಗೂ ಹಣದ ಹುಚ್ಚು ಹೆಚ್ಚಾಗಿ ಮಾತೆತ್ತಿದರೆ ಕೋಟಿಯಂತೆ ! ಇದು ಯಾವುದೊ ಒಂದು ಕೋಟಲೆಗೆ ನಮ್ಮ ದೇಶವನ್ನು ಎಳೆದುಕೊಂಡು ಹೋಗುತ್ತಿದೆ ಎಂದು ನಮಗನಿಸುವುದಿಲ್ಲವೇ ? ಮನೆ ಬದಲಾಯಿಸುವ ಸಂಕಟಕ್ಕಿಂತ ದೇಶದ ದಿಸೆಯನ್ನು ಬದಲಾಯಿಸುವ ಸಂಕಟ ದೊಡ್ಡದಲ್ಲವೇ ?

**ಹಾಲಾಡಿ ಮಾರುತಿರಾವ್**

೧೮೦/೨೮,'ಇಂಚರ', ೧೫ನೇ ಮುಖ್ಯರಸ್ತೆ, ಕುರುಬರಹಳ್ಳಿ, ಬೆಂಗಳೂರು-೫೬೦೦೮೬

**ನಾ**ವು ಸ್ವಾತಂತ್ರ್ಯ ಪಡೆಯುವಾಗ 'ಸ್ವರಾಜ್ಯ ಕಲ್ಪನೆ' ನಮ್ಮ ಮುಂದಿತ್ತು. 'ಕಟ್ಟುವೆವು ನಾವು ಹೊಸ ನಾಡೊಂದನು ರಸದ ಬೀಡೊಂದನು' ಎನ್ನುವ ಉತ್ಸಾಹ ನಮ್ಮದಾಗಿತ್ತು. ಆದರೆ ಈ ಆರು ದಶಕಗಳಲ್ಲಿ ನಮ್ಮ ಕಟ್ಟುವ ಉತ್ಸಾಹ ಉಡುಗಿಹೋಗಿದೆ. ಇದಕ್ಕೆ ಬೇಕಾದ ಪರಿಸರ ರೂಪುಗೊಳ್ಳಲೇ ಇಲ್ಲ. ಹಾಗಾಗಿ, ಸಾಮಾಜಿಕ ನ್ಯಾಯ ರೋದಿಸುತ್ತಿದೆ; ಸಹಬಾಳ್ವೆ ಕನಸಾಗಿದೆ. ಅಭಿವೃದ್ಧಿಶೀಲ ರಾಷ್ಟ್ರಗಳ ಪಟ್ಟಿಯಲ್ಲಿ ದೇಶದ ಹೆಸರು ರಾರಾಜಿಸುತ್ತಿದೆ, ನಿಜ. ಆದರೆ ಅದರ ಅಳತೆಗೋಲು ಯಾವುದು? ಯಾರದು? ಅಂತಾರಾಷ್ಟ್ರೀಯ ಹಣಕಾಸು ಸಂಸ್ಥೆಯ ಮಾಪನವೇ? ಅದು ಯಾರ ಹಿಡಿತಕ್ಕೆ ಒಳಪಟ್ಟಿದೆ ಎನ್ನುವುದು ತಿಳಿಯದ ಸಂಗತಿಯೇನಲ್ಲ. ಮೇಲುನೋಟಕ್ಕೆ ನಮ್ಮ ದೇಶದ ಆರ್ಥಿಕತೆ ಸಬಲೀಕರಣದತ್ತ ದಾಪುಗಾಲಿಡುವಂತೆ ಕಾಣುತ್ತಿದೆ. ಇದರಿಂದ ಇಲ್ಲಿನ ಜನ-ಜೀವನ, ಸಾಮಾಜಿಕ ನ್ಯಾಯಕ್ಕಾಗಿ ತಹತಹಿಸುತ್ತಿರುವವರಿಗೆ ನ್ಯಾಯ ದೊರಕುತ್ತಿದೆಯೇ? ಬಡವರ/ಶೋಷಿತರ ಸ್ಥಿತಿಯಲ್ಲಿ ಸುಧಾರಣೆ ಆಗಿದೆಯೇ? ಈ ಆರ್ಥಿಕತೆ ದೇಶದ ಎಲ್ಲ ಭಾಗದ/ಎಲ್ಲ ವರ್ಗದ ಜನರನ್ನು ತಲುಪಿದೆಯೇ? ಆರ್ಥಿಕ ಅಭಿವೃದ್ಧಿಯೊಂದೇ ದೇಶದ ಪ್ರಗತಿಯ ದ್ಯೋತಕವೇ? – ಎನ್ನುವ ಪ್ರಶ್ನೆಗಳು ಈಗ ನಮ್ಮ ಮುಂದೆ ಭೂತಾಕಾರವಾಗಿ ನಿಂತಿವೆ.

ದೇಶ ಅಭಿವೃದ್ಧಿ ಪಥದತ್ತ ಸಾಗಲು ಔದ್ಯೋಗಿಕ ಕ್ರಾಂತಿ ಅನಿವಾರ್ಯ, ಅವಕ್ಕೆ ವಿದೇಶೀ ಬಂಡವಾಳ ಹರಿದು ಬರಬೇಕು ಎನ್ನುವುದು ಆರ್ಥಿಕ ತಜ್ಞರ ಲೆಕ್ಕಾಚಾರ. ಇದನ್ನು ಆಧರಿಸಿದ ಆರ್ಥಿಕತೆಯನ್ನು ಒಪ್ಪಿಕೊಂಡ ಕೇಂದ್ರ ಸರಕಾರ ವಿಶೇಷ ಆರ್ಥಿಕ ವಲಯಕ್ಕೆ ಸಹಕಾರಿಯಾಗುವಂತೆ ಕಾನೂನನ್ನು ರಚಿಸಿತು. ಆ ಬಗ್ಗೆ ಜನಸಾಮಾನ್ಯರಾಗಲಿ, ರೈತರಾಗಲಿ ತಲೆಕೆಡಿಸಿಕೊಂಡಿರಲಿಲ್ಲ. ಇದನ್ನು ಕಾರ್ಯರೂಪಕ್ಕೆ ತರಲು ಹೊರಟಾಗ ಅದರ ನಿಜಸ್ವರೂಪ ಏನೆಂಬುದು ಅರಿವಿಗೆ ಬಂದು ಸರಕಾರ ಮತ್ತು ರೈತರ ನಡುವೆ ಸಂಘರ್ಷ ಪ್ರಾರಂಭವಾಯಿತು. ಬಣ್ಣ ಬಣ್ಣದ ಕನಸಿನ ಸರಮಾಲೆಯನ್ನೇ ಸೃಷ್ಟಿಸಿ ಅವರ ಬದುಕನ್ನು ಅತಂತ್ರಗೊಳಿಸಲು, ಅಭದ್ರತೆಗೆ ತಳ್ಳಲು ಸರಕಾರ ಮುಂದಾಗಿರುವುದರ ಕುರಿತು ರೈತರಿಗೆ ಅರ್ಥವಾದುದರ ಪರಿಣಾಮವೇ ಪಶ್ಚಿಮ ಬಂಗಾಳದ ನಂದಿಗ್ರಾಮದ ಘಟನೆ. ಇದು ಎಸ್.ಇ.ಝೆಡ್. ವಿರುದ್ಧ ನಡೆಯುತ್ತಿರುವ ಪ್ರಪ್ರಥಮ ಸಂಘಟಿತ ಹೋರಾಟ.

# ಎಸ್. ಇ. ಝೆಡ್.ನ

# ಒಂದು ಕರಾಳ ಅಧ್ಯಾಯ

ಚಂದ್ರಮತಿ ಸೋಂದಾ

೨೦೦೭ರ ಜನವರಿ ೨೦ರಂದು ಕ್ಷೇತ್ರಾಭಿವೃದ್ಧಿ ಅಧಿಕಾರಿಯು ವಿಶೇಷ ಆರ್ಥಿಕ ವಲಯ ನಿರ್ಮಿಸಲು ಭೂಮಿಯನ್ನು ವಶಪಡಿಸಿಕೊಳ್ಳುವುದಾಗಿ ಪ್ರಕಟಿಸಿದ ಮರುದಿನ ಹಳ್ಳಿಯ ಜನ ಒಗ್ಗಟ್ಟಾಗಿ ಇದನ್ನು ಪ್ರತಿಭಟಿಸಲು ಮುಂದಾದರು. ಈ ಹೋರಾಟವನ್ನು ಹತ್ತಿಕ್ಕಲು ಸರಕಾರ ಪ್ರಯತ್ನಿಸಿತು. ಆದರೆ ಅಲ್ಲಿಯ ಜನ ಹಿಂದೆ ಸರಿಯಲಿಲ್ಲ. ಆಗ ಸರಕಾರ ತನ್ನ ಎಲ್ಲ ಸಾಮರ್ಥ್ಯವನ್ನೂ ಬಳಸಿತು. ೨೦೦೭ರ ಮಾರ್ಚ್ ೧೪ ಯಾರೂ ಮರೆಯಲಾಗದ ದಿನ. ಜನಸಾಮಾನ್ಯರಿಂದ ಆರಿಸಿ ಬಂದ ಸರಕಾರ ಪೊಲೀಸ್ ಬಲದ ಮೂಲಕ ಭೂಮಿ ಕಳೆದುಕೊಳ್ಳಲು ನಿರಾಕರಿಸಿದವರ ಮೇಲೆ ನಡೆಸಿದ ದೌರ್ಜನ್ಯ ದೇಶವೇ ತಲೆತಗ್ಗಿಸುವಂಥದು. ಈ ಹೋರಾಟದಲ್ಲಿ ಪುರುಷ-ಮಹಿಳೆಯರಿಬ್ಬರೂ ಭಾಗವಹಿಸಿದ್ದರು. ೧೧ ಸಾವು ಸಂಭವಿಸಿತು. ಬುಲೆಟ್, ರಬ್ಬರ್ ಬುಲೆಟ್, ರಾಡು, ರೈಫಲ್‌ಬಟ್ಸ್, ಟಿಯರ್ ಗ್ಯಾಸ್ ಮತ್ತು ಬಾಂಬುಗಳಿಂದ ೨೪೪ ಜನ ಗಾಯಗೊಂಡರು. ಅವರಲ್ಲಿ ೫೭ ಮಹಿಳೆಯರು. ಈ ದೌರ್ಜನ್ಯದಲ್ಲಿ ೩೪೮ ಮಹಿಳೆಯರು ನಾನಾ ರೀತಿಯಲ್ಲಿ ಹಿಂಸೆಗೆ ಒಳಗಾದರು. ೪೬ ಮಹಿಳೆಯರನ್ನು ಅವಮಾನಿಸಲಾಯಿತು. ಇವರಲ್ಲಿ ಯಾರೂ ಸಮಾಜ ವಿರೋಧಿ ಚಟುವಟಿಕೆಯಲ್ಲಿ ತೊಡಗಿದವರಲ್ಲ, ಇವರೆಲ್ಲರೂ ತಮ್ಮ ಭೂಮಿ ತಮಗೆ ಬೇಕು ಎಂದು ಹೋರಾಟಕ್ಕಿಳಿದವರು. 'ವಿಶೇಷ ಸುಲಿಗೆಗಾಗಿ ವಿಶೇಷ ಕಾನೂನು' ಎಂದು ಹಿಂದಿನ ಸರಕಾರ ಕಾನೂನು ರಚಿಸಿದಾಗ ಲೇವಡಿ ಮಾಡಿದ್ದ, ತಾನು ಬಡವರಪರ ಮತ್ತು ಕಾರ್ಮಿಕಪರ ಎನ್ನುತ್ತ ಸುಮಾರು ಮೂರು ದಶಕಗಳಿಂದ ರಾಜ್ಯದಲ್ಲಿ ಅಧಿಕಾರ ನಡೆಸುತ್ತಿರುವ ಸರಕಾರ ತಮ್ಮ ಹಕ್ಕಿಗಾಗಿ ಹೋರಾಡುತ್ತಿರುವ ರೈತರ ಮೇಲೆ ನಾಗರಿಕ ಸಮಾಜ ನಾಚುವ ರೀತಿಯಲ್ಲಿ ತನ್ನ ಬಲ ಪ್ರದರ್ಶನ ಮಾಡಿರುವುದು ಅದರ ಢೋಂಗಿತನವನ್ನು ಬಯಲಿಗೆಳೆದಿದೆ. ಅಧಿಕಾರಾರೂಢ ಪಕ್ಷ ಎಡಪಂಥೀಯ ಸಿದ್ಧಾಂತಕ್ಕೆ ಎಳ್ಳುನೀರು ಬಿಟ್ಟಿರುವುದಕ್ಕೆ ಇದಕ್ಕಿಂತ ಬೇರೆ ಉದಾಹರಣೆ ಬೇಕಿಲ್ಲ.

ನಂದಿಗ್ರಾಮದ ಘಟನೆಯಲ್ಲಿ ಪೊಲೀಸರಿಂದ ಮಾತ್ರ ದೌರ್ಜನ್ಯ ನಡೆದಿಲ್ಲ, ರಾಜಕೀಯ ಪಕ್ಷದ ಕೈವಾಡವೂ ಇದೆ ಎನ್ನಲಾಗುತ್ತಿದೆ. ಎಲ್ಲ ಗುಂಡುಗಳೂ ಪೊಲೀಸ್ ಬುಲೆಟ್ ಅಲ್ಲ ಎಂದು ಆಸ್ಪತ್ರೆಯ ವರದಿ ತಿಳಿಸುತ್ತದೆ. ಇವೆಲ್ಲ ಏನನ್ನು ಸೂಚಿಸುತ್ತವೆ?

ಬಡವರ ಶೋಷಣೆಯ ಮೇಲೆ ಶ್ರೀಮಂತರ ಸೌಧ ನಿರ್ಮಾಣವಾಗುತ್ತದೆ ಎನ್ನುವ ಸಂಗತಿ ಸರಕಾರಗಳಿಗೆ ತಿಳಿಯದ ವಿಷಯವಲ್ಲ. ಬಂಡವಾಳಶಾಹಿಯ ಹೊಸ ಹೊಸ ಮಾರುಕಟ್ಟೆಯ ಶೋಧದ ಪ್ರತೀಕವೇ ಭಾರತದಲ್ಲಿ ರೂಪುಗೊಳ್ಳುತ್ತಿರುವ ವಿಶೇಷ ಆರ್ಥಿಕ ವಲಯ. ಸ್ಥಳೀಯರ ಬದುಕನ್ನು ಬೀದಿಗೆ ತಳ್ಳಿ ಬೃಹತ್ ಉದ್ಯಮಕ್ಕೆ ಬಹುರಾಷ್ಟ್ರೀಯ ಕಂಪನಿಗಳಿಗೆ ಮಣೆಹಾಕಿ ಕರೆಯುತ್ತಿರುವುದು ಸರಕಾರದ ದಿವಾಳಿತನಕ್ಕೆ ಹಿಡಿದ ಕನ್ನಡಿ. ಕೆಲವು ರಾಜ್ಯಗಳು ಇಂಥ ಅವಕಾಶ ತಮ್ಮ ರಾಜ್ಯಕ್ಕೆ ಸಿಗುತ್ತಿಲ್ಲವೆಂದು ಹಳಹಳಿಸುತ್ತಿವೆ.

ನಂದಿಗ್ರಾಮದ ಮಹಿಳೆಯರು ಪ್ರತಿಭಟನೆಯ ಮೂಲಕ ಸಾಮಾಜಿಕ ಬದ್ಧತೆಯಲ್ಲಿನ ತಮ್ಮ ಸಹಭಾಗಿತ್ವವನ್ನು ಸಾಬೀತು ಪಡಿಸಿದ್ದಾರೆ. ಕೃಷಿಯೋಗ್ಯ ಭೂಮಿಯನ್ನು ವಿಶೇಷ ಆರ್ಥಿಕ ವಲಯ ಸ್ಥಾಪನೆಗಾಗಿ ವಶಪಡಿಸಿಕೊಂಡರೆ ಮಹಿಳೆಯರ ಬದುಕು ಮೂರಾಬಟ್ಟೆಯಾಗುತ್ತದೆ. ತಲೆತಲಾಂತರದಿಂದ ಭೂಮಿಯನ್ನು ನಂಬಿ ಬದುಕುತ್ತಿರುವ ರೈತರಿಗೆ ಮತ್ತು ರೈತ ಮಹಿಳೆಯರಿಗೆ, ಕೃಷಿಗೆ ಮತ್ತು ಅದಕ್ಕೆ ಸಂಬಂಧಿಸಿದ ಕಸುಬುಗಳ ಹೊರತು ಬೇರೆ ಯಾವ ಕೌಶಲ್ಯವೂ ತಿಳಿದಿರುವುದಿಲ್ಲ. ಅವರನ್ನು ಅಲ್ಲಿಂದ ಒಕ್ಕಲೆಬ್ಬಿಸಿ, ಅವರಿಗೆ ಪರಿಹಾರ ರೂಪದಲ್ಲಿ ಎಷ್ಟೇ ಹಣ ನೀಡಿದರೂ ಅದು ಅವರಿಗೆ ನೆಮ್ಮದಿಯ ಬದುಕನ್ನು ನೀಡಲಾರದು. ಬಡ್ಡಿ ಆಸೆಯಿಂದ, ವ್ಯಾಪಾರಕ್ಕೆ ತೊಡಗುವುದರಿಂದ, ಮಧ್ಯವರ್ತಿಗಳ ಕೈಗೆ ಸಿಕ್ಕಿ ಅವರ ಹಣ ಕರಗಿಹೋಗುತ್ತದೆ. ವಿಶೇಷ ಆರ್ಥಿಕ ವಲಯದಲ್ಲಿ ಭೂಮಿ ಕಳೆದುಕೊಂಡವರಿಗೆ ಅಲ್ಲಿ ಯಾವ ಕೆಲಸವೂ ಸಿಗುವುದಿಲ್ಲ. ಒಮ್ಮೆ ಸಿಕ್ಕರೂ ಅಲ್ಲಿಗೆ ಯಾವ ಕಾರ್ಮಿಕ ಕಾನೂನೂ ಅನ್ವಯಿಸದ ಕಾರಣ ಶೋಷಣೆ ಅವ್ಯಾಹತವಾಗಿ ನಡೆಯುತ್ತದೆ. ದುಡಿಮೆಯ ಅವಧಿ,

ಬಡವರ ಶೋಷಣೆಯ ಮೇಲೆ ಶ್ರೀಮಂತರ ಸೌಧ ನಿರ್ಮಾಣವಾಗುತ್ತದೆ ಎನ್ನುವ ಸಂಗತಿ ಸರಕಾರಗಳಿಗೆ ತಿಳಿಯದ ವಿಷಯವಲ್ಲ, ಬಂಡವಾಳಶಾಹಿಯ ಹೊಸ ಹೊಸ ಮಾರುಕಟ್ಟೆಯ ಶೋಧದ ಪ್ರತೀಕವೇ ಭಾರತದಲ್ಲಿ ರೂಪುಗೊಳ್ಳುತ್ತಿರುವ ವಿಶೇಷ ಆರ್ಥಿಕ ವಲಯ. ಸ್ಥಳೀಯರ ಬದುಕನ್ನು ಬೀದಿಗೆ ತಳ್ಳಿ ಬೃಹತ್ ಉದ್ಯಮಕ್ಕೆ ಬಹುರಾಷ್ಟ್ರೀಯ ಕಂಪನಿಗಳಿಗೆ ಮಣೆಹಾಕಿ ಕರೆಯುತ್ತಿರುವುದು ಸರಕಾರದ ದಿವಾಳಿತನಕ್ಕೆ ಹಿಡಿದ ಕನ್ನಡಿ. ಕೆಲವು ರಾಜ್ಯಗಳು ಇಂಥ ಅವಕಾಶ ತಮ್ಮ ರಾಜ್ಯಕ್ಕೆ ಸಿಗುತ್ತಿಲ್ಲವೆಂದು ಹಳಹಳಿಸುತ್ತಿವೆ.

ಸಂಬಳ, ಮುಂತಾದ ಕಾರ್ಮಿಕ ಸೌಲಭ್ಯಗಳನ್ನು ಕುರಿತಂತೆ ಯಾವುದೇ ಒತ್ತಡ ತರುವಂತಿಲ್ಲ. ಅವಘಡಗಳು ಸಂಭವಿಸಿದರೆ ಪರಿಹಾರ ಕೇಳುವಂತಿಲ್ಲ. ದುಡಿಯುವ ಕೈಗಳಿಗೆ ಕೆಲಸವಿಲ್ಲದಿರುವಾಗ ಹೊಟ್ಟೆ ಬಟ್ಟೆಯ ಪ್ರಶ್ನೆ ಕಾಡುವುದು ಸಹಜ. ನೇರ ದಾರಿಯಲ್ಲಿ ಹಸಿವನ್ನು ನೀಗಿಸಲು ಅಸಾಧ್ಯವಾದಾಗ ಸಮಾಜವಿರೋಧಿ ಚಟುವಟಿಕೆಯಲ್ಲಿ ತೊಡಗುವುದು ಅನಿವಾರ್ಯವೆನಿಸುತ್ತದೆ. ಕೆಲಸ ಹುಡುಕಿಕೊಂಡು ಪುರುಷರು ಸಮೀಪದ ನಗರ, ಪಟ್ಟಣಗಳಿಗೆ ವಲಸೆ ಹೊರಟಾಗ ಕುಟುಂಬದ ಅಗತ್ಯಗಳನ್ನು ಪೂರೈಸುವ ಹೊಣೆಗಾರಿಕೆ ಮಹಿಳೆಯ ಮೇಲೆ ಬೀಳುವುದರಿಂದ ಅವಳು ದೇಹ ವಿಕ್ರಯಿಸುವ 'ದಂಧೆ'ಗೂ ತೊಡಗುವ ಸನ್ನಿವೇಶ ಎದುರಾಗುತ್ತದೆ. 'ವಿಶೇಷ ಆರ್ಥಿಕ ವಲಯದ'ದ ಕಂಪನಿಗಳಲ್ಲಿ ಕೆಲಸ ಮಾಡುವವರು ಸ್ಥಳೀಯರಲ್ಲದ ಕಾರಣ ಅವರ ಮನೋರಂಜನೆಗಾಗಿ ಮೋಜಿನ ತಾಣಗಳು ಶುರುವಾಗುತ್ತವೆ. ಅವರ ಮನೋರಂಜನೆಗಾಗಿ ಈ ಮಹಿಳೆಯರ ಬಳಕೆಯಾಗುತ್ತದೆ. ಇವರು ದಲ್ಲಾಳಿಗಳ ಮತ್ತು ಮಧ್ಯವರ್ತಿಗಳ ಕೈಗೆ ಸಿಲುಕಿ ಆರ್ಥಿಕ ಅನುಕೂಲವೂ ಇಲ್ಲದೆ ಸಮಾಜದಲ್ಲಿ ಗೌರವವೂ ಇಲ್ಲದೆ ನರಳುವಂತಾಗುತ್ತದೆ. ಏಡ್ಸ್‌ನಂಥ ಮಹಾಮಾರಿಗೆ ಬಲಿಯಾಗಿ ಬದುಕನ್ನು ಕಳೆದುಕೊಳ್ಳುವ ಸಂದರ್ಭ ಒದಗುತ್ತದೆ. ಮಹಿಳೆಯರ ಬದುಕು ಅಭದ್ರತೆಗೆ ಸಿಲುಕುವುದರಿಂದ ಅವರ ಮಕ್ಕಳ ಶಿಕ್ಷಣಕ್ಕೆ ಪೆಟ್ಟು ಬೀಳುತ್ತದೆ. ಕಲೆ, ಸಂಸ್ಕೃತಿಗಳ ನಾಶವಾಗಿ ಬದುಕು ಬರಡಾಗುತ್ತದೆ. ಅಂಥ ಪರಿಸರದಲ್ಲಿ ಬೆಳೆಯುವ ಮಕ್ಕಳು ಸಮಾಜಘಾತುಕರಾಗಬಹುದು. ಯುವ ಪೀಳಿಗೆ ಉದ್ಯೋಗದ ಅವಕಾಶದಿಂದ ವಂಚಿತರಾಗಿ ಆತ್ಮಹತ್ಯೆಗ ಶರಣಾಗಬಹುದು ಅಥವಾ ನಗರಕ್ಕೆ ವಲಸೆ ಹೋಗಬಹುದು. ಅಲ್ಲಿ ಹೊಸ-ಹೊಸ ಕೊಳಚೆ ಪ್ರದೇಶಗಳ ನಿರ್ಮಾಣವಾಗುವುದು ಅನಿವಾರ್ಯ.

ವಿಶೇಷ ಆರ್ಥಿಕ ವಲಯ ಸ್ಥಾಪನೆಯಿಂದ ಉಂಟಾಗುವ ಇನ್ನೊಂದು ಬಹು ಮುಖ್ಯ ಪರಿಣಾಮವೆಂದರೆ, ಆಹಾರ ಸ್ವಾವಲಂಬನೆಗೆ ಪೆಟ್ಟು. ನಮ್ಮ ಪಂಚವಾರ್ಷಿಕ ಯೋಜನೆಗಳು 'ಹಸಿರು ಕ್ರಾಂತಿ'ಯ ಪರಿಕಲ್ಪನೆಯನ್ನು ಹುಟ್ಟುಹಾಕಿ ದೇಶ ಆಹಾರ ಸ್ವಾವಲಂಬನೆ ಸಾಧಿಸಲು ಕೈಗೊಂಡ ಕ್ರಮಗಳಿಗೆ ಇದರಿಂದ ಸಂಚಕಾರ ಬರುತ್ತದೆ. ಜನತೆ ತಾವು ಉಣ್ಣುವ ಅನ್ನಕ್ಕೆ ಬೇರೆಯವರೆದುರು ಕೈಯೊಡ್ಡುವ ಸನ್ನಿವೇಶ ನಿರ್ಮಾಣವಾಗುತ್ತದೆ. ಜೊತೆಗೆ 'ಶ್ವೇತಕ್ರಾಂತಿ' ಆಧಾರಿತ ರೈತರ ಆರ್ಥಿಕ ಸಬಲೀಕರಣದ ಮುನ್ನಡೆಗೆ ಹೊಡೆತ ಬೀಳುತ್ತದೆ. ಹೈನುಗಾರಿಕೆ ಮತ್ತು ಕೃಷಿ ವಲಯಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಅಧಿಕವಾಗಿರುವುದರಿಂದ ಮಹಿಳೆಯ ಬದುಕು ಇನ್ನಷ್ಟು ಅತಂತ್ರ ಸ್ಥಿತಿಗೆ ಈಡಾಗುತ್ತದೆ. ತಾವು ಬದುಕಲು ಬೇಕಾದ ಸಾಮಾಜಿಕ ಪರಿಸರವನ್ನು ನಿರ್ಮಿಸಬೇಕೆಂದು ಮಹಿಳೆಯರು ಹಕ್ಕೊತ್ತಾಯ ಮಾಡುತ್ತಿರುವ ಹೊತ್ತಿನಲ್ಲಿ ವಿಶೇಷ ಆರ್ಥಿಕ ವಲಯದ ಹೆಸರಿನಲ್ಲಿ ಫಲವತ್ತಾದ ಭೂಮಿಯನ್ನು ಕಬಳಿಸಲು ಮುಂದಾಗಿರುವ ಸರಕಾರಗಳ/ಬಂಡವಾಳಿಗರ ಪ್ರಾಮಾಣಿಕತೆಯನ್ನು ಸಂಶಯಿಸುವಂತಾಗಿದೆ.

ದೇಶದ ಪ್ರಗತಿಯ ಹೆಸರಿನಲ್ಲಿ 'ವಿಶೇಷ ಆರ್ಥಿಕ ವಲಯ' ರೂಪಿಸುವ ಮೂಲಕ ಕೇಂದ್ರ ಮತ್ತು ರಾಜ್ಯ ಸರಕಾರಗಳು ವಸಾಹತುಶಾಹಿಗೆ ಆಹ್ವಾನ ನೀಡುತ್ತಿವೆ. ಜನಸಾಮಾನ್ಯರ ಬಗೆಗಿನ ಕಾಳಜಿಯಿಂದ ಅಭಿವೃದ್ಧಿಯನ್ನು ಕೈಗೊಳ್ಳುವುದಾಗಲಿ, ಉದ್ಯೋಗ ನಿರ್ಮಿಸುವುದಾಗಲಿ ಬಂಡವಾಳಶಾಹಿಯ ಉದ್ದೇಶವಲ್ಲ. ಅವರ ಕಣ್ಣು ಲಾಭದ ಮೇಲೆ. ಹೀಗಿರುವಾಗ ವಿಶೇಷ ಆರ್ಥಿಕ ವಲಯಕ್ಕೆ ವಿದೇಶೀ ಬಂಡವಾಳ ಹರಿದು ಬಂದು ದೇಶ ಅಭಿವೃದ್ಧಿ ಹೊಂದುತ್ತದೆ ಎನ್ನುವ ಹುಸಿ ಭರವಸೆಯನ್ನು ಸರಕಾರಗಳು ಯಾಕೆ ನಂಬುತ್ತವೆ? ಸರಕಾರದಲ್ಲಿರುವವರು ಅಮಾಯಕರೇನಲ್ಲ. ಈಗಾಗಲೇ ಚೈನಾದಲ್ಲಿ ಏನಾಯಿತು ಎನ್ನುವ ಉದಾಹರಣೆ ಅವರ ಕಣ್ಣೆದುರಿಗಿದೆ. ಆದರೂ ಸರಕಾರಗಳು ಪಟ್ಟು ಬಿಡದೆ ತಮ್ಮ ಮೂಗಿನ ನೇರಕ್ಕೆ ನಡೆಯುತ್ತಿವೆ. ಹಾಗಾಗಿ, ವಿಶೇಷ ಆರ್ಥಿಕ ವಲಯದ ವಿರುದ್ಧ ಜನಸಾಮಾನ್ಯರು ಒಟ್ಟಾಗಿ ಹೋರಾಡುವ ಅನಿವಾರ್ಯತೆ ಎದುರಾಗಿದೆ. ಹೋರಾಟ ಮಾಡುವವರು ನಂದಿಗ್ರಾಮದ ಮಾದರಿಯಲ್ಲಿ ಒಗ್ಗಟ್ಟಾಗಿ ಹೋರಾಡುವ ಅಗತ್ಯವಿದೆ.

ಮಹಿಳೆಯರು ಆರ್ಥಿಕ ಪ್ರಗತಿಯ ವಿರೋಧಿಗಳಲ್ಲ. ಫಲವತ್ತಾದ ಭೂಮಿಯನ್ನು ಬಳಸದೆ, ಕಬಳಿಸದೆ (ನಿಜವಾದ ಬಳಕೆ ಶೇ.೨೫, ಉಳಿದ ಶೇ.೭೫ ಹಣಗಳಿಕೆಗೆ) ಜನಸಾಮಾನ್ಯರಿಗೆ ಉದ್ಯೋಗವನ್ನು ನೀಡಿ ಸಾಮಾಜಿಕ-ಆರ್ಥಿಕ ಅಭಿವೃದ್ಧಿಗೆ ಒತ್ತು ನೀಡಬೇಕು ಎನ್ನುವುದು ಹೋರಾಟದ ಹಿಂದಿನ ಮನೋಭಾವ. ನಂದಿಗ್ರಾಮದ ಘಟನೆಯನ್ನು ರಾಜಕೀಯಗೊಳಿಸದೆ ಜನಪರ ಕಾಳಜಿಯಿಂದ ಆರ್ಥಿಕ ಪ್ರಗತಿಯತ್ತ ಹೆಜ್ಜೆ ಇರಿಸಬೇಕಿದೆ. ನಂದಿಗ್ರಾಮದಲ್ಲಿ ನಡೆಯುತ್ತಿರುವ ಪ್ರತಿಭಟನೆಯ ಕಿಡಿ ದೇಶದ ಇತರ ವಿಶೇಷ ಆರ್ಥಿಕ ವಲಯಗಳಿಗೂ ಹರಡದಂತೆ ಆರ್ಥಿಕ ಅಭಿವೃದ್ಧಿಯ ಯೋಜನೆಯನ್ನು ರೂಪಿಸುವ ಹೊಣೆಗಾರಿಕೆ ಸರಕಾರದ ಮೇಲಿದೆ. ಪುರುಷ ಕೇಂದ್ರಿತ ಆರ್ಥಿಕ ಯೋಜನೆಗಳಿಗೆ ಮಹಿಳೆಯರ ವಿರೋಧವಿದೆ. ಮಹಿಳೆಯನ್ನೂ ಒಳಗೊಂಡಂತೆ ಆರ್ಥಿಕ ಅಭಿವೃದ್ಧಿ ಯೋಜನೆಗಳನ್ನು ರೂಪಿಸುವುದು ನಮ್ಮ ಗುರಿಯಾಗಬೇಕು.

**ಚಂದ್ರಮತಿ ಸೋಂದಾ**
ಸಂಖ್ಯೆ ೫೫೧, ೨೪ನೇ ಅಡ್ಡರಸ್ತೆ, ೨ನೇ ಹಂತ
ಹೆಬ್ಬಾಳ, ಮೈಸೂರು - ೫೭೦೦೧೭




ಸಾಗರ ನಗರಸಭೆ ಆವರಣದಲ್ಲಿ ನವಕರ್ನಾಟಕ ಪುಸ್ತಕ ಪ್ರಕಾಶನ ಆರಂಭಿಸಿರುವ ಪುಸ್ತಕ ಪ್ರದರ್ಶನ ಮತ್ತು ಮಾರಾಟ ಮಳಿಗೆಯನ್ನು ನಗರಸಭೆ ಉಪಾಧ್ಯಕ್ಷೆ ವಂದನಾ ಶ್ರೀನಿವಾಸ್ ಗುರುವಾರ ಉದ್ಘಾಟಿಸಿದರು.

ಜೂನ್ ೮ರಂದು ಚಿಕ್ಕಮಗಳೂರಿನಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನ ಪ್ರಾರಂಭವಾಯಿತು. ಡಾ|| ಜೆ. ಸಿ. ಕೃಷ್ಣೇಗೌಡ ಪುಸ್ತಕ ಪ್ರದರ್ಶನ ಉದ್ಘಾಟಿಸಿದರು. ಡಿ. ಎಚ್. ನಟರಾಜ್ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಎಸ್. ಎಸ್. ವೆಂಕಟೇಶ್, ಶಿವಾನಂದ ಸ್ವಾಮಿ, ಬಿ. ಅಮ್ಜದ್ ಭಾಗವಹಿಸಿದ್ದರು.

# ಸೆಕೆಂಡ್ ಹನಿಮೂನ್

**ಪ್ರಜ್ಞ ಮಾರ್ಪಳ್ಳಿ**

"ಏ... ಅವ್ವಾ...ಯಾಕ, ರೇವತಿ ಅಕ್ಕನ ಮನಿ ಅಂಗಳದಾಗ ಇನ್‌ಸ್ಪೆಕ್ಟರ್ ಕರಿಯಪ್ಪನ್ನ ನೋಡ್ದಂಗಾತು ? ಏನ್ ವಿಶ್ಯನವ್ವಾ ? ಏನಾತು ಅವ್ರ ಮನೀಲಿ...."

ಚಪ್ಪಲೀನ ಯರ್‍ರಾಪಿರ್‍ರಿಯಾಗಿ ಒಗ್ದಾಕಿ ಏರಿದ ದನೀಲೇ ಮನಿಹೊಕ್ಕು ಅವ್ವನ್ನ ಕೇಳಿದ್ರ ಆಕಿ ತಗ್ಗಿದ ದನೀಲೇ ಉತ್ತರಿಸ್ಯಾಳ...

"ನಿನ್ನ ಲಾಯರ್‌ಗಿರೀಗ ಆಗೋವಂಥಾದ್ದು ಏನೇನೂ ನಡ್ದಿಲ್ಲ ಮತ್ತ... ರೇವತೀಗ ಆಕಿ ನಾದ್ನಿ ಕತ್ತಿ ತಗೊಂಡು ಬೀಸಿದ್ಲಂತ... ಅದ್ಕ ಆಕಿ ಹೋಗಿ ಕಂಪ್ಲೆಂಟ್ ಮಾಡ್ಯಾಳ. ಹಂಗ ಬಂದಿರ್ಬೇಕ ಅಂವ... ಏ... ಅವನ್ನ ನಂಬ್ಯಾಡ ಬಿಡವ... ಯಾವ ದಿಕ್ಕಲ್ಲಿ ಹೆಂಗಾಡ್ತಾನ ಅಂತ ತಿಳಿಯೋದ್ ಕಷ್ಟ... ನಿನ್ನೇ ತಗ... ಎಷ್ಟು ಸಲ ಅಂವ ನಿಂಗ್ರಾ ತಿರುಗಿ ಬಿದ್ದಾನ !... ಅಲ್ಲೀಗ ಯಾರ್ ಪರಾ ಇದ್ದಾನೋ ? ತಿಳೀವಲ್ದು..."

"ನೀ ಹೇಳೋದು ಖರೇನ ಅದ ಅವ್ವಾ.... ಆದ್ರ ನಂಗಂತೂ ಬಾಳಾ ಖುಷಿಯಾತು ನೋಡ..." ಅವ್ವ ಒಲಿ ಮುಂದ ಕೂತು ಹಿಟ್ಟು ಕಲ್ಸಾಕ ಹತ್ತಿದ್ಲು. ನಾ ಬಚ್ಚಲ ಮನಿ ಹೊಕ್ಕೀನಿ... ಮುಖಕ್ಕ ಎರಚಿಕೊಂಡ ನೀರು ಹನಿಹನಿಯಾಗಿ ಉದ್ರೋವಷ್ಟ ರಭಸದಾಗ ನನ್ನ ಯೋಚ್ನೆಗಳೂ ಹರ್ದು ಬಂದಂಗಾತು...

ರೇವತಿ ಅಕ್ಕ ಆ ಮನೀಗ ಲಗ್ನ ಆಗಿ ಬಂದು ಸುಮಾರು ಆರು ವರ್ಷಗಳಾತು... ಆ ಹೊತ್ನಾಗ ಊರ ಮಂದಿ ಬಾಯಾಗ ಗ್ರಾಸ ಆಗೋವಂಥಾದ್ದು ಏನೇನೂ ನಡೀತಿರ್ಲಿಲ್ಲ ಆ ಮನೀಲಿ... ಯಾವಾಗ ಅವ್ಳ ನಾದ್ನಿ ವಸೂ ಗಂಡನ್ನ ಕಳ್ಕೊಂಡು ತವ್ರ ಮನಿಯಾಗ ಠಿಕಾಣಿ ಹೂಡಿದ್ಲೋ ಅಲ್ಲಿಂದ ಮುಂದ ಶುರುವಾತು ಕಾಳ್ಗ.... ಆಕೇನೇ ಆಕಿ ಗಂಡನ್ನ ಕೊಲೆ ಮಾಡಿದ್ಲಂತ ಊರ ಮಂದಿ ಬಾಯಾಗ ಸುದ್ದಿ ಬ್ಯಾರೇ ಹರಡಿತ್ತು.

ಈ ವಿಚಾರದ ಸಲುವಾಗಿ ಆಕಿ ಅತ್ತಿನೂ ಕೇಸ್ ತಗೊಂಡು ನಮ್ಮಾಫೀಸಿನ ತನ್ಕ ಬಂದು ಗೋಳೋ... ಅಂತ ಅತ್ತಿದ್ಲು... ಆದ್ರೆ ವಸೂ ನಡತಿ ಹೇಗಿತ್ತಂದ್ರ ದಿನ ಇಡೀ ಹ್ಯಾಪ್ಲಸ್ ಮೋರೆ ಹಾಕ್ಕಂಡೇ ಅವ್ರ ಮನಿ ಕೊಟ್ಟಿಗಿಯಾಗ ಮುದುರಿ ಕೂತ್ಕೊಂತಿದ್ಲು... ಮಾತಿಲ್ಲ... ಕತಿಯಿಲ್ಲ... ಆಕೆ ಹುಚ್ಚೀನೇ ಆಗ್ತಾಳೇನೊಂತ ಎಲ್ರಿಗೂ ಭಯ ಕಾಡಿತ್ತ... ನಮ್ಮವ್ವ ಅಂತೂ ಹಠಾನೇ ಮಾಡಿದ್ಲು...

"ನೋಡು ಗಂಗೀ... ನೀ ಏನ್ ಮಾಡ್ತಿನಂದ್ರೂ ನಾ ಬ್ಯಾಡ ಅನ್ನಿಲ್ಲ. ಆದ್ರೆ ಆ ಕೇಸನ್ನ ಮಾತ್ರ ಬಿಟ್ಟು ಬಿಡು ಮತ್ತ.... ವಿಶ್ಯ ಏನಾರ ಇರ್ಲಿ ...ಹೆಣ್ಣು ಮಗೀನ ಮನಸ್ನಾಗ ಗಂಡ ಸತ್ತ ದುಃಖ ಇದ್ದೇ ಅದ... ನೀ ಅದ್ಕ ತುಪ್ಪ ಸುರ್‍ಯೊನ ಕೆಲ್ಸ ಮಾಡ್ಬ್ಯಾಡ... ನೀ



ಏನಾರ ಹಂಗ ಮಾಡಿದ್ರ... ಆಳಿಮಯ್ಯಂಗ ಹೇಳತೀನ ಮತ್ತ... ಲಗೂನೇ ಬರ್‍ರಿ !... ಈಕೀನ ಕರ್‍ಕೊಂಡು ಹೋಗ್ರಿ... ಅಂತ ತಿಳೀತೊ ಇಲ್ಲೊ...?"

ತಾಕೀತು ಬ್ಯಾರೆ ಮಾಡಿದ್ಲ ನನ್ನವ್ವ... ಖರೇನ ಹೇಳತೀನಿ... ಅದೊಂದು ದುಃಸ್ವಪ್ನ. ಅಂವ ದೂರ ಇದ್ದಾನ ಅನ್ನೋ ಕಾರಣಕ್ಕ ನಮ್ಮ ಸಂಸಾರ ಇನ್ನೂ ಉಳಿದದ... ವರ್ಷಕ್ಕೊಂದ ಸಲ ಅಂವ ಬಂದು ಹೋಗೋದ್ರಿಂದ ನಾನಂದ್ರ ಅಂವಂಗ, ಅವನಂದ್ರ ನನಗ ಬಾಳ ಪ್ರೀತಿ... ಅವನೇನಾರ ಇಲ್ಲೇ ಇದ್ದ ಅಂದ್ರ ನನ್ ಡೈವೋರ್ಸ್ ಕೇಸ್ನಾಗ ನಾನೇ ಲಾಯರಾಗ್ಬೇಕಿತ್ತೇನೋ !

"ಗಂಗೀ..." ನಮ್ಮವ್ವ ಕೂಗಿದ ಮ್ಯಾಲಾ ನಾ ಬಚ್ಚಲಮನಿಯಿಂದ ಹೊರಬಂದಿದ್ದು... "ಲಕ್ಷ್ಮೀಬಾಯೀ...ಅಂತ ನಾಮಕರಣ ಮಾಡಿದ್ದ ನನ್ ಹೆಸ್ರು ನನ್ನಾಫೀಸಿನ ಮುಂದಿದ್ದ ಫಲಕಕ್ಕಷ್ಟ ಸೀಮಿತವಾಗಿತ್ತ..."ಲಕ್ಷ್ಮೀಬಾಯಿ... ಏಡ್ವೋಕೇಟ್" ಹಾರದಿರಲಂತ ಬ್ರಾಕೆಟ್‌ನಲ್ಲಿ (ಎಲ್‌ಎಲ್.ಬಿ.) ಅಂತ ಚಿಕ್ಕದಾಗಿ, ಚೊಕ್ಕದಾಗಿ ಹಾಕಿದ್ದ ಬೋರ್ಡ್ ನನ್ನದೇ ಆಫೀಸಂತ ಕೂಗಿ ಕರೀತಿತ್ತ.

"ಗಂಗೀ" ಈಗ ಕಿರುಚಾಕ ಹತ್ತಿದ್ಲ ನಮ್ಮವ್ವ.... ಲಗೂನ ಹೋಗಿ ಬೇರೆ ಬಟ್ಟೆಯೊಳಗ ತೂರ್‍ಕೊಂಡು ಬಂದೆ.

ಒಲಿಯೊಳಗ ನುಗ್ಗಿ ನುಗ್ಗಿ ತಮ್ಮದೇ ಮೈಯನ್ನ ಉರ್‍ಸಿಕೊಳ್ತಿದ್ದ ಕಟ್ಟಿಗೆ ತುಂಡುಗಳ ಮ್ಯಾಲ ಹಂಚೀನ ಕಾಯಾಕಿಟ್ಟಳು ನಮ್ಮವ್ವ.

"ಬಿರ್‍ರನೆ ಹಿಟ್ಟು ಲಟ್ಟಿಸಿಕೊಡ ಮತ್ತ... ನಿಮ್ಮಪ್ಪ ಬರೋ ಹೊತ್ತಾಗದ..." ಎಂದಾಕಿ ಅವಸರಿಸಿದರ ನಾನಂದಿಷ್ಟ..

"ನೋಡವ್ವ... ನಾನೀಗ ಇರೋ ಸ್ಥಿತಿನಾಗ ಏನಾರ ಮಾಡಿದ್ನೊ, ಖರೇನ ಹೇಳತೀನ ಕೇಳ... ಚಪಾತಿ ರೂಪಾನಂತೂ ನನ್ನಾಣೆ ಬರಾಕಿಲ್ಲ.. ಆ ಮ್ಯಾಲ ಅಪ್ಪ ಹಂಗಂದ, ಚಿಕ್ಕಪ್ಪ ಹಿಂಗಂದ ಅಂತ ದೂರ್ ಬ್ಯಾಡ ನನ್ನ..."

"ಏನಾರ ಮಾಡಿಕೊಡ ನನ್ನವ್ವ.... ನಾ ಮಾಡಿದ್ರೂ ಈಗರ್ದೇ ಆಗ್ತದ... ಸುಳ್ಳೇ ನಾಟ್ಕ ಆಡಿ ತಪ್ಪಿಸೋದ ನೋಡ್ಬ್ಯಾಡ..." ಅವ್ವ ಗದರಿಸಿದಳ ಮತ್ತ....

ನನ್ನಲ್ಲಿದ್ದ ಬುದ್ಧಿ ಎಲ್ಲಾ ರೇವತಿ ಅಕ್ಕನ ಮನಿ ಅಂಗಳದಾಗ ಸುಳಿದಾಡುತ್ತಿತ್ತ... ಅರ್ಧ ತಾಸಿಗೂ ಮಿಕ್ಕಿದ ಕೆಲ್ಸಾನ ಹದಿನೈದು ನಿಮಿಷ ಮುಗ್ಯೊದ್ರೊಳಗ ಮಾಡಿ, ಮುಗ್ಸಿ "ಅವ್ವಾ... ನಾನೊಸಿ ಹಿತ್ತಲ ಕಡೇಗಿಂದ ಹೋಗಿ, ಪಾಗಾರದತ್ರ ನಿಂತು ನೋಡಲೇನ ? ಅಲ್ಲಿ ಏನೇನು ನಡೀತದ ಅಂತ... ?"

"ನಾ ಹೇಳಿದ ಕೆಲ್ಸ ಯರ್‍ರಾಬಿರ್‍ರಿಯಾಗಿ ಮಾಡಿ ಹಾಕಿದ್ಯಲ್ಲ ಮತ್ತ... ಇನ್ನೆಲ್ಲಿಗಾರ ಹೋಗು... ಆದ್ರ ಒಂದು ಮಾತು ಜಪ್ತಿ ಇರ್ಲಿ ನಿಂಗ... ಅಲ್ಲೇನಾರ ನಿನ್ನ ನಾಲ್ಗಿ ಬಾಯಿಂದ ಹೊರಬಂದ್ರ ನಿನ್ ಕಥೀನ ಬ್ಯಾರೇ ಆಗ್‌ತೈತ ನೋಡ..."

"ಅಷ್ಟೇದ್ಯಲ್ಲ ನನ್ನವ್ವ...." ಅನ್ನುತ್ತಾ ಒಂದೇ ಉಸಿರಿನೊಳಗ ರೇವತಿ ಅಕ್ಕನ ಮನಿ ಅಂಗಳಾಕ ಆತುಕೊಂಡೇ ಇರೋವಂತ, ನಮ್ಮನಿ ಪಾಗಾರಕ್ಕ ಒರಗಿ ನಿಂತರ, "ಅರೇ !" ನಾನೋಬ್ಬಾಕೀನೇ ಅಲ್ಲ... ಅದನ್ನ ನೋಡಾಕ ಬಂದಿದ್ದು. ಹಾವೇರಿ ಮನ್ನೋರು. ಕೇರಿಯೋರು. ಪಕ್ಕದ ಮನಿ ಸುಬ್ಬಾಶಾಸ್ತ್ರಿ ಮನಿಯೋರು. ಎಲ್ಲರ ಕಾಲ್ಗಳೂ ರೇವತಿ ಅಕ್ಕನ ಮನಿ ಅಂಗಳದಾಗ ಅಂಟಿಸಿದಾಂಗ ಇತ್ತ. ನಾನೂ ಧೈರ್ಯದಿಂದ ನಿಂತು ನೋಡ್ದೆ... ಕಾಲ್ಬೆರಳ ಮ್ಯಾಲ ನಿಂತು. ಕುತ್ತಿಗೆಯಲ್ಲಿನ ನರಗಳೆಲ್ಲ ಉಬ್ಬಿ ಬರೋಹಂಗ.

ರೇವತಿ ಅಕ್ಕ ಬ್ಯಾಂಡೇಜಿನ ಕೈಯೊಂದಿಗ ಗೋಡೆಗೊರಗಿ ನಿಂತಿದ್ಲ. ಸೊಂಟದಾಗ ನಾಲ್ಕು ವರ್ಷದ ಆಕಿ ಕೂಸು ಕುತ್ತಿಗೆಗೇ ಜೋತುಕೊಂಡಿತ್ತ... ಆಕಿ ಗಂಡ, ಕೈ ಕಟ್ಟಿಕೊಂಡು ಕರಿಯಪ್ಪನ ಪಕ್ಕದಾಗ ನಿಂತಿದ್ದ. ಕಂಚಿಕಿಸಿದ ಮನುಷ್ಯ ಅಂವ. [illegible] ಹೇಳಿದ್ರ ಹಂಗ... ಹೆಂಡ್ತಿ ಮ್ಯಾಲ ಪ್ರೀತಿ [illegible] ಅದ ತೋರಿಸ್ತಿ [illegible]

ಮನಿಯಾಗ ಉಸ್ತುವಾರಿ ಎಲ್ಲ ಅವ್ನ ತಮ್ಮ ಶಂಕ್ರ ಮತ್ತವನ ಅಕ್ಕ ವಸೂದೇ ಅದ.

ನನಗ್ಯಾವತ್ತೂ ಅನ್ನಿಸ್ತಿತ್ತೆ... ಮನಿ ಹಿರಿಮಗ ರಾಮಣ್ಣನಿಗ ಆ ಮನೀಲಿ ಏನೂ ಅಸ್ತಿತ್ವ ಇಲ್ಲಾಂದ ಮ್ಯಾಲ ರೇವತಿ ಅಕ್ಕಂಗ ಎಲ್ಲಿಂದ ಬರಬೇಕು ಆ ಹಕ್ಕು!

ಕರಿಯಪ್ಪ ಕೈಯಾಗಿದ್ದ ಕೋಲನ್ನ ಇದ್ದಕ್ಕಿದ್ದ ಹಾಂಗ ನೆಲಕ್ಕಕುಟ್ಟಿ...

''ಏ ಶಂಕ್ರ... ಮಾನವಾಗಿ ನಿಮ್ಮಕ್ಕನ್ನ ಹೊರ್ಗ ಕರಿತೀಯೋ ಇಲ್ಲ ನಾನೇ ಏನಾರ....'' ಅಷ್ಟ ಅಂವ ಮುಂದಕ್ಕೆ ಮಾತಾಡೋದ್ರೊಳಗಡ ಶಂಕ್ರ, ಒಮ್ಮೆ ಸುತ್ತೂ ಕಣ್ಣು ಹಾಯಿಸಿದ.

ಮೆತ್ತಗ ಕರಿಯಪ್ಪನ ಹೆಗಲ ಮ್ಯಾಲ ಕೈಹಾಕಿ,

''ಅಣ್ಣ, ಒಂದಗಳಿಗಿ ಬಾರಣ್ಣ ಈ ಕಡಿಗ...'' ಅಂತ ಕರ್ಕೊಂಡೇ ನಾನಿರೋ ಕಡಿಗ ಬಂದ.

''ಏ ಮೊದ್ಲ ಹೆಗ್ಲಿಂದ ಕೈಯೆತ್ತ.. ದೂರಕ್ ಸರಿ, ಹೇಳೀಗ ಏನ್ ಪಿಶ್ಯ ಅದು ?''

''ಹಂಗಲ್ಲಣ್ಣ... ಇಷ್ಟು ಮಂದಿ ಮುಂದ ಹ್ಯಾಂಗ ಹೇಳ್ಲಿ ನಿಂಗ.... ?''

ಕರಿಯಪ್ಪ ತನ್ನ ದಪ್ಪಕಿದ್ದ ಹುಬ್ಬನ್ನ ಬಿಲ್ಲಿನಾಕಾರ ಮಾಡ್ಕಂಡ. ಒಂದು ಕೈಯಾಗ ಶಂಕ್ರನ್ನ, ಇನ್ನೊಂದು ಕೈಯಾಗ ರಾಮಣ್ಣನ್ನ ಎಳ್ಕೊಂಡು, ನಾನಿಂತಿರೋ ಕಡೀಗೇ ಬಂದ್ನಂತ ನನಗನ್ನಿಸಿ ಅಲ್ಲೇ ತುಸು ಕುಗ್ಗಿ ನಿಂತೀನಿ.

''ಈಗ ಹೇಳ.... ಏನ್ ಹೇಳಾಕಿದ್ದಿ ನೀ... ?''

ಶಂಕ್ರ ತಡವರಿಸ್ತಾ ಹೇಳ್ಲಂಗಾತು...

''ನೋಡಣ್ಣಾ ನೀ ಮನಸ್ ಮಾಡಿದ್ರ ತ್ರಾಸಿನ್ ಕೆಲ್ಸ ಅಲ್ಲ... ನಿಂಗೊತ್ತಿಲ್ಲಣ್ಣಾ... ನಮ್ಮತಿಗೇಗ... ಬುದ್ಧಿ ನೆಟ್ಟಗಿಲ್ಲ ಮತ್ತ... ಒಂದೊಂದ ಸಲ ಹಿಂಗ ಏನಾರ ಮಾಡ್ತಾಳ... ನಮ್ಗೂ ಸಾಕಾಗಿ ಹೋಗ್ಯದ... ಅದ್ಕ ನಾ ಏನಂತೀ ನಂದ್ರ, ಆಕೀನ... ಆಕೀನ ಆಕಿ ತವ್ರು ಮನೀಗ ಕಳ್ಸಿದ್ರ ಹೆಂಗ ? ಆವಾಗೀವಾಗೊಂದ್ಸಲ ನಮ್ಮಣ್ಣಾನೇ ಹೋಗಿ ನೋಡ್ಕಂಡ ಬರ್ತಾನ... ಏನಂತೀ ರಾಮಣ್ಣ ?...''

ನನಗರಿವಿಲ್ಲದಾಂಗ ನನ್ನ ಕಣ್ಣುಗಳು ಬಿರಿದು, ಎರಡೂ ಕೈ ಬಾಯಿಮ್ಯಾಲ ಹೋಗಿ ಅಂಟಿ ಕುಂತಿತ್ತ... ಎಂಥಾ ಹಲ್ಕ ಮನಷ್ಯ ಆದಾನ ಇಂವ! ರಾಮಣ್ಣ ಏನೂ ಅನ್ನಿಲ್ಲ ಅನ್ನಿಸ್ತದ.

ಇದ್ದಕ್ಕಿದ್ದ ಹಾಗ ಕರಿಯಪ್ಪ ಕಿರುಚಾಕ ಹತ್ತಿದ...

''ಏನ್ ಶಂಕ್ರ ? ಏನಂತ ಮಾತಾಡಕ್ ಹತ್ತಿ ನೀನ ? ಏನ್ ಮಾವಯ್ಯನ ಮನಿ ನೆನಪಾಗಹತ್ತೇತೇನು ನಿನಗ ? ಲಗ್ನ ಮಾಡ್ಕಂಡು ಕರ್ಕೊಂಡು ಬರೋ ಹೊತ್ತಾಗ ಸಾವಿರ ಗಟ್ಟಲೆ ತಕ್ಕಂಡಿದ್ರಂತಲ್ಲ? ಅದ ಮರ್ತು ಮಾತಾಡಿಯೇನ ? ಹೆಣ್ಣುಮಕ್ಳು ಅಂದ್ರ ಏನಂತ ತಿಳ್ಕಂಡಿದ್ದೀ ? ತವ್ರಿಗ ಕಳಿಸ್ತಾನಂತ ತವ್ರಿಗ... ಬೆನ್ನಮೂಳೆ ನೆಟ್ಟಗಿದ್ಯಂತ ನೋಡ್ಲೇನ ?...''

ಈಗ ಕರಿಯಪ್ಪ ಆ ಕಡೀಗ ತಿರ್ಗಿ, ಸೇರಿದ ಎಲ್ಲಾರ್ಗೂ ಕೇಳ್ಸೊ ಹಂಗ ಕಿರುಚಾಡಕ ಹತ್ತಿದ... ನಾನೂ ನೆಟ್ಟಗಿ ನಿಂತೆ.

''ನೋಡ್ರಪ್ಪಾ... ಇಂವ ಏನಂದಾನಂತ! ಆ ಹೆಣ್ಣು ಮಗುನ ತವ್ರಿಗೆ ಕಳಿಸ್ತಾನಂತೆ. ಸೊಕ್ಕು ನೋಡಿದ್ರೇನ ಇಂವಂದ ? ಏನಂತೀರಿ ನೀವೆಲ್ಲ ಇದಕ್ಕ ?...''

ಅಞ್ಞಂ... ಅಂತ ರೇವತಿ ಅಕ್ಕ ಮತ್ತ ಅಳಾಕ್ ಹತ್ತಿದ್ಲು. ಆಕಿ ಅಳೋ ಸದ್ದಿಗೆ ಸೊಂಟದಲ್ಲಿದ್ದ ಆಕಿ ಕೂಸು ಎಚ್ಚೆತ್ತು ಅದೂ ವಾದ್ಯ ಊದಾಕ್ ಹತ್ತಿತ್ತ...

ಸುಬ್ಬಾಶಾಸ್ತ್ರಿಗಳು ಮುಂದಕ್ ಬಂದು,

''ಕರಿಯಪ್ಪ ನೀ ನನ್ ಮಾತ ಕೇಳಾಕ್ ಮನಸ್ಸು ಮಾಡಿದ್ರ ಹೇಳ್ತೀನಿ ಕೇಳ... ಈ ಹೆಣ್ಣುಮಗಿನ ಗೋಳ್ನ ನೋಡಿ ನೋಡಿ ನಮ್ಗೂ ಸಾಕಾಗದ. ಬ್ಯಾರೇನೂ ಬ್ಯಾಡ... ನೀ ಈಗ ರಾಮಣ್ಣಂಗ ತಾಕೀತು ಮಾಡು ಮತ್ತೆ... ಹೆಂಗೂ ಅಂವಂಗ ಪಂಚಾಯಿತ್ಲಿ ಉದ್ಯೋಗ ಅದ... ಬರೋ ಆದಾಯದಾಗ ಅಲ್ಲೇ ಎಲ್ಲಾರ ಪುಟ್ಟ ಬಿಡಾರ ಮಾಡ್ಕಂಡು ಇರ್ಲಿ ಅಂವ. ಏನಂತಿ ಇದಕ್ಕೆ ?...''

ಅಂತೂ ಪಂಚಾಯ್ತಿ ಪಕ್ಕಾನೇ ಇರೊವಂತ ತಮ್ಮ ಖಾಲಿಮನೀಗ ಒಂದು ಗಿರಾಕಿ ಹುಡುಕಿದ್ರ ಸುಬ್ಬಾಶಾಸ್ತ್ರಿಗಳು. ನಂಗೂ ಅದೇ ಖರೆ ಅನ್ಸಿತ್ತ... ಕರಿಯಪ್ಪನ ಕಡ್ಯಾಗ ನೋಡಿದ್ರ ಅಂವ ಎಡಗೈನ ಬೆನ್ನ ಹಿಂದಕ್ ಕಟ್ಕೊಂಡೇ ಕೋಲನ್ನ ನೆಲಕುಟ್ಟುತ್ತಾ ಎರಡೆಜ್ಜೆ ಮುಂದಹೋಗಿ.

''ನಿಮ್ಮಾತು ಸರ್ಯಾಗದ ಶಾಸ್ತ್ರಿಗಳೇ... ರಾಮಣ್ಣ ಏನಂತೀ ನೀ ಇದಕ್ಕೆ... ?'' ನಾ ನೋಡ್ತಿದ್ದ ಹಾಂಗ ರಾಮಣ್ಣ ತಲಿ ತಗ್ಗಿಸಿಕೊಂಡೇ, ಬಲಾತ್ಕಾರವಾಗಿ ತಲಿ ಅಲ್ಲಾಡಿಸ್ಲಂಗಾತು. ಕರಿಯಪ್ಪ ಶಂಕ್ರನ್ನ ಕೆಕ್ಕರಿಸಿಕೊಂಡೇ ನೋಡ್ತಾ...

''ನೋಡು ಶಂಕ್ರ, ನಿಂಗೂ ಒಬ್ಬಾಕಿ ತಂಗ್ಯಮ್ಮ ಇದ್ದಾಳ... ಇದನ್ನ ನೀ ಮರ್ತಂಗದ. ಇನ್ನೊಂದ್ಸಲ ಏನಾರ ನಿಮ್ಮತ್ತಿಗಿ ತಂಟೆಗೇನಾರ ಹೋದ್ರ... ಏನು ಎತ್ತಂತ ವಿಚಾರಿಸ್ದೇನ ನಿನ್ನನ್ನೂ, ನಿಮ್ಮಕ್ಕನ್ನ ಕಂಬಿ ಎಣಿಸೋಹಂಗ ಮಾಡ್ತೀನ. ಜಪ್ತಿ ಇಟ್ಕ...''

ಗದರಿಸಿದ.

ರೇವತಿ ಅಕ್ಕನ ಅದೃಷ್ಟ ಚಲೋ ಇತ್ತು. ಅದ್ಕ ಕರಿಯಪ್ಪನೂ ನೆಟ್ಟಗಿದ್ದ, ಅಂತ ಮನದೊಳಗ ಗೊಣಗ್ತಿರ್ಬೇಕಾದ್ರ,...

''ಗಂಗೀ...ಏ...ಗಂಗೀ...'' ಅಂತ ನಮ್ಮವ್ವ ಕೂಗಾಕೆ ಹತ್ತಿದ್ಲು. ಅಯ್ಯೋ ಈಗ ನೆನಪಾಗ್ತದ. ನನ್ ಗಂಡ ಅನ್ನಿಸ್ಕೊಂಡೋನು ಫೋನ್ ಮಾಡೋ ಹೊತ್ತಾಗ್ಯದ ಅಂತ.

ಒಂದೇ ಒಂದ ಚಣದೊಳಗ ಮನಿ ಬಾಗ್ಲಲ್ಲೇ ನಿಂತೀನಿ... ನಮ್ಮವ್ವ ''ಏನಂಥದ್ದು ಹಾಳ್ ಹರಟೆ ನಡೀತಿತ್ತಲ್ಲ... ? ಹೊತ್ತು ಗೊತ್ತು ಇಲ್ಲೇನ ನಿಂಗ ? ನಿನ್ ಗಂಡ ಆಗ್ಲೇ ಫೋನ್ ಮಾಡಾಯ್ತು. ಹತ್ತು ನಿಮಿಷ ಬಿಟ್ಟು ಮತ್ತ ಮಾಡ್ತಾನಂತ. ಅಷ್ಟೊತ್ತಿಂದ ಮೈಮರಿಯೋ ಅಂಥದ್ದು ಅಲ್ಲೇನಾಗೈತಿ ?...''

ಆಕಿ ದನಿಲಿದ್ದ ಕುತೂಹಲಾನ ನಾ ತಿಳೀದೇ ಇರ್ಲಿಲ್ಲ ಮತ್ತೆ. ಅಲ್ಲಿ ನಡ್ದಿದ್ದನ್ನ ನೆನಿಸ್ಕೊಂಡ್ರ ಮೈಯೆಲ್ಲಾ ಉರ್ದಂಗಾತು.

''ನಿಂಗೊತ್ತೇನವ್ವಾ ? ಆ ಹೊಲ್ಸು ಮನುಷ್ಯ ಶಂಕ್ರ ಏನಂತಾನಂತ ? ರೇವತಿ ಅಕ್ಕನ್ನ ತವ್ರು ಮನೀಗ ಕಳಿಸ್ತಾನಂತ. ರಾಮಣ್ಣನೇ ಹೋಗಿ ನೋಡ್ಕಂಡು ಬರ್ತಾನಂತ. ಅದೂ ಆವಾಗೀವಾಗೊಮ್ಮೆ. ಏನ್ ಸೊಕ್ಕು ಅಂವಂಗ !''

''ಅದಕ್ಕೇನಂದ ಆ ಕರಿಯಪ್ಪ ?'' ನಡುವಿ ಪ್ರಶ್ನೆ ಮಾಡ್ಯಾಳ ನನ್ನವ್ವ.

''ಶಾಸ್ತ್ರಿಗಳ ಮಾತಿನಂಗ ರಾಮಣ್ಣ ಬ್ಯಾರೆ ಮನಿ ಮಾಡ್ಬೇಕಂತ ತೀರ್ಮಾನ ಆಗ್ಯದ. ಮುಂದ ಏನ್ ಕಥೀನೋ ಗೊತ್ತಿಲ್ಲ. ಥೂ ಆ ಶಂಕ್ರಂಗೆ ಮೈಯೆಲ್ಲಾ ಮನ್ಸೆಲ್ಲಾ ವಿಷ. ಹೆಂಗ ಹೇಳ್ದ ಅಂವ ?...''

ಟ್ರಿಂಗ್... ಟ್ರಿಂಗ್... ನಮ್ಮವರ ಟ್ರಿಂಕಾಲ್.

ನನ್ನವ್ವಾ... ''ಫೋನ್ ಎತ್ಕ... ನಿನ್ ಗಂಡಂದೇ ಇರ್ತಾದ... ಊರ ಉಸಾಬರೀ ಎಲ್ಲ ಕಡೀಗ್ ಮಾಡ್ಕ...''

''ಊರ ಉಸಾಬರಿ ಹೆಂಗಾಗುತ್ತವ್ವಾ ? ರೇವತಿ ಅಕ್ಕ ನಮ್ಗ ದೂರದವ್ಳೇನು ?'' ಫೋನ್ ಎತ್ತಿ ''ಹಲೋ'' ಅಂದೆ.

''ಏನ್ರೀ ಲಾಯರ್ ಸಾಹೇಬ್ರು ? ಹೆಂಗಿದೆ ಕಾರುಬಾರು ?''ಚುಡಾಯಿಸಾಕ ಹತ್ಯಾರ ನನ್ ಗಂಡ. ಮಾತಿನ್ ಮಧ್ಯ ರೇವತಿ ಅಕ್ಕನೂ ಬಂದು ಹೋದ್ಲು. ನನ್ ಗಂಡ ಯಾವತ್ತೂ ನನ್ನಾಸಿಗೆ ಅಡ್ಡಿ ಬಂದೋರಿಲ್ಲ.

''ಸರಿ... ಹಂಗಾರ... ಫೋನ್ ಇಡ್ತೀನಿ... ಆರೋಗ್ಯ ನೋಡ್ಕ. ಹುಷಾರು... ಬಾಯ್''

ಫೋನ್ -ಇನ್ ಕಾರ್ಯಕ್ರಮ ಮುಗಿತು.

''ಅವ್ವಾ... ಏನೋ ಬರಾಕ್ ಹೇಳಿದ್ರಂತ... ಆಕೀನು ಜೊತೀಗಿ ಬಂದಾಳ...'' ರಾಮಣ್ಣನ ದನಿ ಕೇಳಿ ನಾ ಎಚ್ಚೆತ್ತೆ... ಗಡಿಯಾರದತ್ತ ನೋಡಿದ್ರ, ಆಗ್ಲೇ ನಾಲ್ಕೂಕಾಲು. ರೇವತಿ ಅಕ್ಕ ಮಲಗಿದ್ದ ಆಕಿ ಕೂಸ್ನ ಎತ್ಕೊಂಡೇ ಬಾಗ್ಲಲ್ಲೇ ನಿಂತಿದ್ಲ.

''ಬನ್ನಿ.. ಕುಂತ್ಕಳ್ಳಿ...'' ಅಂದೆ. ಆಫೀಸ್ನಾಗ ಯಾರೂ ಇರ್ಲಿಲ್ಲ.

''ಅಲ್ಲಾ ರಾಮಣ್ಣ, ಒಂದು ವಾರ ಆತು. ಮನಿ ಮಾಡೋ ವಿಚಾರದಾಗ ನೀ ಏನ ಯೋಚ್ನೆ ಮಾಡ್ದಿ ?'' ಆತ ತಲಿ ತಗ್ಗಿಸಿ ಕುಂತಿದ್ದ.

ಎರಡು ನಿಮಿಷದ ಮ್ಯಾಲ ಅವನೇ ಮಾತಾಡಾಕ್ ಹತ್ತಿದ.

''ಯೋಚ್ನೆ ಏನ್ ಮಾಡಾಕಿದ ಅವ್ವಾ... ಅಂವ ಏನೋ ಹೇಳ್ದಾಂತ ನಾನ್ ಬ್ಯಾರೆ ಮನಿ ಮಾಡಕಾಗ್ತದ ? ಎಷ್ಟಂದ್ರೂ ಅಂವ ನನ್ನ ತಮ್ಮ, ಆಕಿ ನನ್ನ ತಂಗಿ ಅದಾಳ. ಇದ್ದಕ್ಕಿದ್ದ ಹಾಂಗ ಮನಿಬಿಟ್ಟು ಬರೋದಂದ್ರ ಏನ ? ರೊಕ್ಕ ಗಿಕ್ಕ ಏನೂ ಇಲ್ದ ! ಅದೂ ಅಲ್ದ ಈಕೀನೂ ನಾಲ್ಗಿ ಬಾಳಾ ಹರಿಯಾಕ್ ಬಿಡ್ತಾಳ...'' ಅಂವ ಇನ್ನೂ ಮಾತು ಮುಗಿಸಿರ್ಲಿಲ್ಲ.

''ಅಯ್ಯೋ ರಾಮಣ್ಣ ಅಂವ ನಿನ್ನ ತಮ್ಮ ಅದಾನ, ಆಕಿ ನಿನ್ನ ತಂಗಿ ಅದಾಳ. ಆದ್ರ ಈಕಿ ಏನಾಗ್ಬೇಕ ನಿಂಗ ? ಮನಿ, ಮಠ, ಅವ್ವ, ಅಪ್ಪ ಎಲ್ಲಾ ಬಿಟ್ಟು ನಿನ್ನೇ ನಂಬ್ಕೊಂಡು ಬಂದಾಕಿ, ಈಕಿ ನಿಂಗೇನೂ ಅಲ್ಲ ಅಲ್ದ?'' ಅಂತ ನಾ ಕೇಳಿದ್ರ, ''ಹಂಗಲ್ಲವ್ವ... ಅದೂ...'' ರಾಮಣ್ಣ ರಾಗ ಎಳೆಯಾಕ್ ಹತ್ತಿದ.

''ನೋಡ ರಾಮಣ್ಣ..., ನಾ ಗಂಡನ ಮನಿ ಹೊಕ್ಕಾಕಿ ಅಲ್ಲ ಅಂತ ನಿನ್‌ಮನಸ್ನಾಗ ಇರ್ಬೋದು, ಆದ್ರೆ ಮನುಷ್ಯ ಸಂಬಂಧದ ಬಗ್ಗೆ ಕಲ್ಪನೆ ಅದ ನನಗ. ನಿನ ತಂಗಿ ವಸೂ ಗಂಡನ್ನು ಕಳ್ಕೊಂಡಾಕಿ. ಆಕಿ ಕಣ್ಮುಂದ ನೀವು ಲಲ್ಲೆಗರೆಯೋದನ್ನ, ಸುಖವಾಗಿರೋದನ್ನ ಆಕಿ ಸಹಿಸಾಕಿಲ್ಲ ನೋಡ. ನೀ ಅಲ್ಲ ಅಂದ್ರೂ ಇದು ಖರೇನ... ಹೌದೋ ಅಲ್ಲೋ ಹೇಳ...'' ರಾಮಣ್ಣ ಹೌದೆನ್ನುವಂತೆ ನಿಧಾನಕ್ಕ ತಲಿ ಅಲ್ಲಾಡಿಸ್ದ. ನಾನೇ ಅಂದೆ... ''ಮೊನ್ನಿ ನಿನ್ ಮನಿ ಅಂಗಳದಾಗ ನಿನ್ ತಮ್ಮ ಈಕಿ ಬಗ್ಗ ಏನಂದ ಅನ್ನೋದು ನಿಂಗೆ ಗೊತ್ತೇ ಅದ. ಅಷ್ಟು ಮಂದಿ ಮುಂದ, ನಿನ್ನಾಕಿ ಸರಿಯಿಲ್ಲ ಅಂದಾಗ ನಿಂಗೇನಾರ ಅನ್ನಿಸ್ಲಿಲ್ಲೇನು ?...''

ರಾಮಣ್ಣನ ತಲಿ ಇನ್ನಷ್ಟು ಬಾಗಿತ್ತ. ನಾಲ್ಗಿ ಹೊರಡುವಲ್ದು.

''ನೋಡು ರಾಮಣ್ಣ, ನಿನ್ನ ಅಪರಾಧಿ ಅಂತ ಹೇಳಾಕ ಕರ್ದಿಲ್ಲ ಮತ್ತ... ಗಂಡ್ಸು ಅಲ್ಲೇನ ನೀ ? ತಲಿ ಎತ್ತಿ ಕೂರು ಮತ್ತ. ನೀವೆಲ್ಲ ಹೆಣ್ಮಕ್ಕಳಂದ್ರ ಏನಂತ ಮಾಡೀರಿ ? ನಿನ್ನ ಕೈಲಿ ಏನೂ ಆಗುವಲ್ದು ಅಂದ್ರ ಹೇಳ. ರೇವತಿ ಅಕ್ಕಂಗ ನಾ ವ್ಯವಸ್ಥೆ ಮಾಡ್ತೀನಿ. ನೀ ನಂಬೋದಾದ್ರ ನಂಬು. ಪ್ರಪಂಚದಾಗ ಒಂದು ಹಂತದವರೆಗೆ ಚೆನ್ನಾಗಿರ್ತದ. ಆ ಪರಿಧಿ ಮೀರಿದ್ರ ಎಲ್ರೂನೂ ಸ್ವಾರ್ಥಿಗಳೇ ಅದಾರ. ಅವರವರ ಕಾಲ ಬುಡದಾಗ ಮಾತ್ರ ಕಣ್ಣಿರ್ತದ ಅವ್ರಿಗ... ಅಲ್ಲಾ...ಆ ಕರಿಯಪ್ಪ ಹಂಗ ಗದರಿಸಿದ ಮ್ಯಾಲೂ ಆಕಿಗಿ ಅದೆಷ್ಟು ಧೈರ್ಯ ಅಂತೀನಿ... ! ನಿನ್ನೆ ಮತ್ತೆ ಜಗಳಾಡಕ ಬಂದಿದ್ಲಂತ... ?'' ನಾ ಮಾತು ಮುಗ್ಯೋದ್ರೊಳಗ ರಾಮಣ್ಣ ಕಣ್ಣ ಕೆಂಪಗಿ ಮಾಡ್ಕಂಡೇ, ನುಂಗೋ ಹಂಗ ರೇವತಿ ಅಕ್ಕನ್ನ ನೋಡಾಕ್ ಹತ್ತಿದ.

''ನೀ ಅವಳ್ನ ದುರುಗುಟ್ಟಿ ನೋಡೋ ಅಗತ್ಯ ಇಲ್ಲ ಇದ್ರಾಗ... ಅದು ಬಾಯಿ ಬಿಡುವಲ್ದು.'' ತಗ್ಗಿದ ದನೀಲೇ ಅಂದೆ.

''ನಿನ್ನವ್ವ ಸಿಕ್ಕಿದ್ಲು ನಿನ್ನೆ. ಮಾತಿಗ ಮುನ್ನ ಗೋಳೋ ಅಂತ ಒಂದಷ್ಟು ಹೊತ್ತು ಜೋರಾಗೇ ಅತ್ತಾಳ. ಆಮೇಲೆ ಅಳು ನಿಲ್ಸಿ-ಗಂಗವ್ವ ನನ್ ಮಗ್ಳು ಯಾಕ ಹಿಂಗಾಡ್ತಾಳಂತ ಗೊತ್ತಾಗ್ತವಲ್ದ. ಖಾಲಿ ಮನ್ಸು ದೆವ್ವದ ಮನಿ ಅಂತಾರಲ್ಲಾ. ಅದು ಖರೇನ ಅದ. ಮೊನ್ನಿ ದಿನ ಕರಿಯಪ್ಪ ಹಂಗ್ ಹೇಳಿ ಹೋದ್ನಾ, ಆದಾದ ಮೂರನೇ ದಿನಾನೇ ನಿಮ್ ಚಿಕ್ಕಪ್ಪ, ರೇವತೀಗ ಸಿಕ್ಕಿ ಏನೋ ಮಾತಾಡಿದ್ನಂತ. ಅದನ್ನ ಈಕಿ ನೋಡಿದಾಳೋ ಏನ ! ಹೊಲ್ಸು ನಾಲ್ಗಿ, ಮೊದ್ಲೇ ಅಂತಿದ್ಲ ರೇವತೀಗ, ನಿಂಗವ ಇದ್ದ, ನಿಂಗಿವ ಇದ್ದ ಅಂತ ಈಗೀಗ ನಿಮ್ ಚಿಕ್ಕಪ್ಪನ ಹೆಸ್ರ ಎತ್ತಾಳೆ... ಗಂಗವ್ವ, ಈಗ ನೀನೇ ಏನಾರ ಮಾಡಾಕ ನೋಡ ನೀ ಲಾಯರಾಗಿದ್ದಿ. ನಿನ್ ಮಾತ್ನ ರಾಮಣ್ಣ ಎತ್ತಾಕಕಿಲ್ಲ. ಆಕಿ ಮ್ಯಾಲ ಹರಿಹಾಯ್ದು, ಯಾವ ಉಪಯೋಗಾನೂ ಇಲ್ದ. ಹುಟ್ಟಿದಾಗಿಂದ ಪ್ಯಾಟೀಲಿ ಬೆಳೆದಾಕಿ. ಸೂಕ್ಷ್ಮ ಅಂದ್ರ ಏನಂತಾನೇ ಗೊತ್ತಿಲ್ದ ಅದಕ್ಕ. ನಂಗೂ ವಯಸ್ಸಾಗದ. ಮನ್ಸೂ ಮುದಿಯಾಗುತ್ತಾ ಬಂದಾದ. ಜಗ್ಳ, ಗಲಾಟಿ, ಗದ್ದಲ ಯಾವ್ದೂ ಸಹಿಸಲಾಗ್ತವಲ್ದು. ಅಂವ ಬ್ಯಾರೆ ಮನಿ ಮಾಡೋದೇ ಒಳ್ಳೇದು ಅನ್ನಿಸ್ತದ. ದೂರ ಇದ್ರ ಸಂಬಂಧ ಉಳಿಬೋದೇನೋ ಅಂತ ಅನ್ನಿಸ್ತದ. ನೀ ಏನಂತಿ ಅವ್ವಾ... ? ಅಂತ ನನ್ನೇ ಕೇಳಿದ್ಲ, ಏ ರಾಮಣ್ಣ... ನಾನೇನ ರಾಮಾಯಣದ ಕತಿ ಹೇಳಿದ್ನೇನ ? ಹಂಗ ಕುಂತು ಕೇಳಾಕ್ ಹತ್ತಿ ನೀ !...''

ರಾಮಣ್ಣನ ಮನಸ್ಸಾಗ ಅದೇನು ಹೊಳಿತಿತ್ತೋ ನಾ ತಿಳೀಲಿಲ್ಲ, ಆದ್ರೆ ಅವ್ನ ಮೌನ ಮಾತ್ರ ನನ್ನ ಬಾಳಾ ರೇಗಿಸ್ತಿತ್ತ. ನಾ... ಕುಂತ ಕುರ್ಚಿನ ಗಟ್ಟಿಯಾಗೇ ಕುಕ್ಕುತ್ತೆ ಎದ್ದು ನಿಂತೀನಿ...

''ನೋಡ, ಇದ್ಕೆ... ಇದ್ಕೆ ನಾ ಗಂಡಸ್ರನ್ನ ದ್ವೇಷಿಸೋದು. ನೀವೆಲ್ಲ ರಕ್ತ ಸಂಬಂಧ ನಿಮ್ಗೆ ಬಾಳಾ ದೊಡ್ಡದಾಗೇ ಕಾಣ್ತದ. ಸಂಪ್ರದಾಯಕ್ಕ ಕಟ್ಟು ಬಿದ್ದು, ಅವ್ವ, ಅಪ್ಪನ ಮಾತಿಗ ಎದುರಾಡ್ದೇನೇ, ನಿಮ್ಮಂಥೋರ್ನ ಕಟ್ಕೊಂಡು ನಂಬಿ ಬರೂವಾಕಿ, ಬಡ್ದಿ ಮಕ್ಕಿಗೆ ಅದೇ ಸದರಾಗಿ ಹೋಗ್ಯದ. ನೀವ್ ಖಾಯಿಲೆ ಬಿಳ್ಲಿ, ಖಿಸಾಲೆ ಆಗ್ಲಿ, ನಿಮ್ ಕುಂಡಿ ಕೆಳ್ಗ ಚಾಕ್ರಿ ಮಾಡ್ತಾಳ ಆಕಿ ನೋಡು, ಅದ ಸೊಕ್ಕು ನಿಮ್ಗ. ನಿನ್ನೇ ತಕ್ಕ, ಎರ್ಡು ತಿಂಗ್ಳ ಹಿಂದ ನೀ ಕಾಲ್ ಮುರ್ಕಂಡು ಮೂಲೆ ಸೇರ್ದಾಗ, ನಾ ನೋಡಿಲ್ಲೇನ ? ನಿನ್ನ ಆ ತಂಗಿ ಎಷ್ಟು ಮಾಡ್ಯಾಳಂತ ! ನಮ್ಮಜ್ಜಿ ಯಾವಾಗ್ಲೂ ಅಂತಿದ್ಲ, ಸಂಬಂಧ ಅನ್ನೋದು ಹತ್ರ ಇದ್ರ ಹಳಸ್ತಾದ, ದೂರ ಇದ್ರ ಘಂ ಅಂತದ ಅಂತ. ಆದ್ರೆ ಅದು ಈ ಮಟ್ಟಕ್ಕೆ ಅಂತ ನಂಗ ತಿಳೀವಲ್ದು ನೋಡು... ನೋಡು ರಾಮಣ್ಣ, ನಿಂಗ ಕೊನೀ ಸಾರಿ ಹೇಳ್ತೀನಿ ಕೇಳ. ನಾಳಿ ಸಂಜೆ ಒಳ್ಗ ಒಳ್ಳೆ ಮಾತಿನಾಗ ಆ ಮನಿಯಿಂದ ಹೊರಬಂದ್ರ ಸರಿ, ಇಲ್ಲಾಂದ್ರ ರೇವತಿ ಅಕ್ಕಂಗ ನಿನ್ನಿಂದ ಡೈವೋರ್ಸ್ ಕೊಡ್ಸಿ, ಆಕಿನ ಒಂದು ಒಳ್ಳೆ ಕಡೆ ಕೆಲ್ಸಕ್ಕ ಸೇರಿಸ್ತೀನಿ. ಆಕಿ ಹ್ಞೂ ಅಂದ್ರ ಬ್ಯಾರೆ ಲಗ್ನ ಮಾಡ್ತೀನಿ'' ಅಂತ ಎರ್ಡೂ ಕೈನ ಮೇಜಿಗೆ ಗುದ್ದಿ, ಅವ್ನ ಮುಖಾನ ನೋಡ್ದೆ.

ರಾಮಣ್ಣ ಎರ್ಡೂ ಕೈನ ಮುಖಾಕ್ ಮುಚ್ಕಂಡು ಅಳಾಕ್ ಹತ್ತಿದ. ಗಾಬರಿಯಾತು ನನಗ, ರೇವತಿ ಅಕ್ಕನೂ ಒದ್ದಾಡಿದ್ಲ. ನಾ ಅವ್ನ ಹಿಂದಕ ಹೋಗಿ ನಿಂತು,

''ರಾಮಣ್ಣಾ, ಏ... ರಾಮಣ್ಣ ಅಳೋ ಗಂಡಸ್ರನ್ನ ನಂಬಾರ್ದು ಅಂತಾರ. ನಾ ಈಗ ಏನಂದ್ಕೊಬೇಕ ?'' ಅಂವ ಕೂತಲ್ಲಿಂದ ಎದ್ದುಬಂದು ದೊಪ್ಪಂತ ನನ್ ಕಾಲ್ಗೆ ಬಿದ್ದಾನ. ನಾ ಮತ್ತಷ್ಟು ಗಾಬರಿಗೊಂಡೀನಿ.

''ನನ್ ಕ್ಷಮಿಸ್ಬಿಡು ಗಂಗವ್ವ... ನಾ ತಪ್ಪು ಮಾಡೀನಿ... ಇನ್ ಮ್ಯಾಲ ಹಿಂಗಾಗ್ತವಲ್ದು. ನೀ ಏನ ಹೇಳಿದ್ರೂ ಕೇಳ್ತೀನಿ... ನನ್ನಾಕೀನ ನನ್ನಿಂದ ದೂರ ಮಾಡ್ಬ್ಯಾಡ...'' ಮತ್ತ ಅಳಾಕ್ ಹತ್ತಿದ.

ನಾ ತ್ರಾಸಪಟ್ಟು ಅವನ್ನ ಏಬ್ಸಿ ರೇವತಿ ಅಕ್ಕನ ಪಕ್ಕದಲ್ಲೇ ನಿಲ್ಸಿ,

''ನಾ ಯಾಕ ನಿಮ್ಮನ್ನ ಬ್ಯಾರೆ ಮಾಡ್ಲಿ... ? ಅದ್ರಿಂದ ನಂಗೇನು ಬರ್ತದ ?... ನಾ ಹೇಳಿದ್ನ ಕೇಳ್ತೀರೇನು ? ಹಂಗಾರ ?...''

ಇಬ್ರ ತಲೀನೂ ಮ್ಯಾಲೆ ಕೆಳಗೆ ಅಲ್ಲಾಡಿತ್ತ.

''ರಾಮಣ್ಣ, ಆ ಸುಬ್ಬಾಶಾಸ್ತ್ರಿಗಳು ಮೊನ್ನಿ ಹೇಳಿದ್ರಲ್ಲ?... ಅವ್ರ ಒಂದು ಮನಿ ಪಂಚಾಯ್ತಿ ಹತ್ರ ಖಾಲಿ ಬಿದ್ದಾದ. ನಾ ಅವ್ರ ಹತ್ರ ಮಾತಾಡೀನಿ... ಸ್ವಲ್ಪ ಅಡ್ವಾನ್ಸೂ ಕೊಟ್ಟೀನಿ... ಮತ್ತ... ಈ ಒಂದು ಸಾವಿರ ರೂಪಾಯ್ನ ನೀ ಇಟ್ಕ'' ರೊಕ್ಕ ಅವ್ನ ಕೈಯಾಗಿಟ್ಟು..

''ನೀ ನನ್ ಮಾತ್ನ ಕೇಳ್ದೆ ಇರೋನಲ್ಲಂತ ನಂಗ ಚೆನ್ನಾಗಿ ಗೊತ್ತಿತ್ತ... ಅದ್ಕ ಈ ಧೈರ್ಯ ಮಾಡೀನಿ. ನಾಳೀನೇ ಗಂಟು ಮೂಟೆ ಕಟ್ಬಿಡಿ. ಅಗತ್ಯಕ್ಕೆ ಏನೇನೆಲ್ಲ ಬೇಕಾಗದ ಅದ್ನ ಇದ್ರಲ್ಲೇ ತಗೋ ಮತ್ತ... ಗಾಬ್ರಿಯಾಗ್ಬೇಡ. ನಾ ಕೊಟ್ಟ ರೊಕ್ಕಾನ ವಸೂಲಿ ಮಾಡಾಕೀನೇ...''

ಮಾತು ಮುಗ್ಯೊದ್ರೊಳಗ ಇಬ್ರೂ ಕಾಲಿಗ ಬೀಳಾಕ ಬಂದಾರ... ''ಏ... ಅದೆಲ್ಲ ಏನು ಬ್ಯಾಡ. ನಾನೂ ಮದ್ವಿ ಆದಾಕಿ... ನೀವಿಬ್ರೂ ನನಗಿಂತ ಹಿರೀರೇ ಅಲ್ವ ? ಹಾರೈಸ್ರಿ ಮತ್ತೆ... ನನ್ ಸಂಸಾರ ಚನ್ನಾಗಿರ್ಲಂತ... ಅಷ್ಟ ಸಾಕು ನನಗ...'' ಇಬ್ಬರ ಕಣ್ಣಂಚೂ ತೇವಗೊಂಡಿತ್ತ. ಅವ್ರು ಹೋದ ಮ್ಯಾಲ, ವಿಷ್ಯ ತಿಳ್ಸ್ಯೊಕಂತ ನನ್ ಗಂಡಂಗ ಫೋನ್ ಮಾಡಿದ್ರ, ಅತ್ತಲಿಂದ ಅವ್ರ ದನಿ...

''ಏನ್ ಅಮ್ಮಾವ್ರು, ರಾಮಣ್ಣನ ಸಂಸಾರನ ಸೆಕೆಂಡ್ ಹನಿಮೂನ್‌ಗೆ ಕಳ್ಸಿದ್ರಾ ?... ಏನು ಮಾತೇ ಇಲ್ಲ?...ನೀ ಏನ್ ಮಾಡ್ತಿ ಅನ್ನೋದು ನೀ ಹೇಳೀನೇ ತಿಳೀಬೇಕೇನು ? ಆದ್ರೂ... ಏನೇ ಹೇಳು ನೀ, ನಿಂಗೆ ಊರವ್ರ ಬಗ್ಗೆ ಇರೋವಷ್ಟು ಕಾಳಜಿ ನಿನ್ ಗಂಡನ ಬಗ್ಗೆ ಇಲ್ಲ... ಹೌದೋ ಅಲ್ಲೋ ?...'' ಅವ್ರ ಕೊಂಕು ಮಾತು ಮುಂದುವರಿದಿತ್ತ.



ಪ್ರಜ್ಞ ಮಾರ್ಪಳ್ಳಿ
ಮಜೂರು ಅಂಚೆ, ಕಾಪು
ಉಡುಪಿ -೫೭೪೧೦೬



# ಐದು ಗ್ರಹಗಳನ್ನು ಸಂಜೆ ನೋಡುವ ಅವಕಾಶ

**ತಿಂ**ಗಳ ಆರಂಭ ಗ್ರಹಣದಿಂದ. ಸಂಜೆ ಸೂರ್ಯಾಸ್ತಕ್ಕೆ ಮುನ್ನ ಗ್ರಹಣ ಕಾಣುವುದರಿಂದ ಒಂದು ಅನುಕೂಲವಿದೆ. ಸೂರ್ಯನಿಗೆ ಬೆನ್ನು ಹಾಕಿ ನಿಂತು ಗ್ರಹಣವನ್ನು ನೋಡಬಹುದು. ನಿಮ್ಮೆದುರು ಗೋಡೆ ಇರಬೇಕು. ಗೋಡೆಯ ಮೇಲೆ ಮರದ ನೆರಳು ಬೀಳುವಂತಿರಬೇಕು. ಆಗ ನೆರಳಿನ ನಡುವೆ ಅಸಂಖ್ಯಾತ ಸೂರ್ಯ ಬಿಂಬಗಳ ಚಿತ್ತಾರ. ಚಂದ್ರನಾಕಾರದ ಸೂರ್ಯಬಿಂಬಗಳು ಗ್ರಹಣದ ಹಂತವನ್ನು ಸೂಚಿಸುವುವು.

ಸುಮಾರು ೪:೪೫ರ ಹೊತ್ತಿಗೆ ಗ್ರಹಣ ಆರಂಭವಾದರೂ ಗೋಡೆಯ ಮೇಲೆ ಸ್ಪಷ್ಟ ಚಿತ್ರ ಮೂಡುವುದು ಸುಮಾರು ೫ ಗಂಟೆಯ ನಂತರವೇ. ಮೋಡಗಳು ಬಿಡುವು ಮಾಡಿಕೊಟ್ಟರೆ ಹೀಗೆ ಗ್ರಹಣದ ಹಂತಗಳನ್ನು ಸುರಕ್ಷಿತವಾಗಿ ನೋಡಬಹುದು. ಪೂರ್ಣಗ್ರಹಣ ಕಾಣುವುದು ರಷ್ಯಾ, ಮಂಗೋಲಿಯ, ಚೀನಾ ಈ ಭೂಭಾಗದಲ್ಲಿ. ಭಾರತದ ಎಲ್ಲಾ ಭಾಗದಿಂದಲೂ ಪಾರ್ಶ್ವಗ್ರಹಣ ಮಾತ್ರ ಕಾಣುತ್ತದೆ.

ಹದಿನೈದು ದಿನಗಳ ನಂತರ ಚಂದ್ರ ಗ್ರಹಣವಿದೆ. ಅದೂ ಪಾರ್ಶ್ವಗ್ರಹಣವೇ. ಹದಿನಾರರ ನಡುರಾತ್ರಿಗೆ ಆರಂಭ. ಬೆಳಗಿನ ಜಾವ ಅರ್ಧದಷ್ಟು ಚಂದ್ರಬಿಂಬ ಕಪ್ಪಾಗಿರುವುದನ್ನು ಕಾಣಬಹುದು. ಬೆಳಗಿನ ೫ ಗಂಟೆಗೇ ಗ್ರಹಣ ಮುಕ್ತಾಯ. ಆದ್ದರಿಂದ ನಡುರಾತ್ರಿ ಒಮ್ಮೆ ಇಣಕಬೇಕಾದೀತು. ಚಂದ್ರನ ಬಿಳಿಭಾಗಕ್ಕೂ, ಕಪ್ಪುಭಾಗಕ್ಕೂ ನಡುವೆ ಕಿತ್ತಳೆಬಣ್ಣ ಇರುವುದನ್ನು ಗಮನಿಸಲು ಇದೊಂದು ಒಳ್ಳೆಯ ಅವಕಾಶ.

ಹದಿನಾರರ ಸಂಜೆ ಚಂದ್ರ ನೆಪ್ಚೂನ್ ಗ್ರಹವನ್ನು ಮರೆಮಾಡುವ ಆಚ್ಛಾದನೆ ಇದೆ. ಆದರೆ ಆ ನೋಟ ನಮಗಿಲ್ಲ. ಚಂದ್ರನ ಪಕ್ಕದಲ್ಲೇ ಕಾಣುವ ನೆಪ್ಚೂನ್‌ಅನ್ನು ಗುರುತಿಸಲು ಪ್ರಯತ್ನಿಸಬೇಕೆಂದರೆ ಆ ಪ್ರಖರ ಬೆಳಕಿನಲ್ಲಿ ನೆಪ್ಚೂನ್ ಕಾಣುವುದೇ ಇಲ್ಲ. ಗ್ರಹಣದ ಸಮಯದಲ್ಲಿ ಹುಡುಕಬಹುದು. ಆಗ ಬಹುಶಃ ನೆಪ್ಚೂನ್ ಕಾಣುತ್ತದೆ.




ಎಲ್ಲ ಗ್ರಹಗಳನ್ನೂ ಸಂಜೆಯೇ ನೋಡುವಂತಿದ್ದರೆ ಎಂದು ಹಂಬಲಿಸುವವರಿಗೆ ಈ ತಿಂಗಳು ಒಳ್ಳೆಯ ಅವಕಾಶವಿದೆ. ತಿಂಗಳ ಆರಂಭದಲ್ಲಿ ಸಂಜೆ ಪಶ್ಚಿಮದ ಅಂಚಿನಲ್ಲಿ ಶನಿ, ಶುಕ್ರ ಮತ್ತು ಮಂಗಳ ಗ್ರಹಗಳ ಜೂಜಾಟ ಕಾಣುತ್ತದೆ. ಸುಮಾರು ೮ನೆಯ ತಾರೀಖಿನಿಂದ ಮುಂದಕ್ಕೆ ಬುಧಗ್ರಹವೂ ಇವುಗಳೊಡನೆ ಸೇರಿಕೊಳ್ಳುತ್ತದೆ. ಹೀಗೆ ನಾಲ್ಕು ಗ್ರಹಗಳು ಪಶ್ಚಿಮದ ಅಂಚಿನಲ್ಲಿ ಜೊತೆಯಾಗಿದ್ದರೆ ಗುರು ಪೂರ್ವದಲ್ಲಿ ಕಾಣುತ್ತದೆ. ಒಟ್ಟಿನಲ್ಲಿ ಐದೂ ಗ್ರಹಗಳು ಸಂಜೆಯೇ ಕಾಣುತ್ತವೆ. ಯಾವುದು ಯಾವ ಗ್ರಹ ಎಂದು ತಿಳಿಯಲು ಚಂದ್ರನೇ ಮಾರ್ಗದರ್ಶಿಯಾಗುತ್ತಾನೆ. ಅಮಾವಾಸ್ಯೆಯಂದು (೧ರಂದು) ಬುಧದ ಜೊತೆಗೂಡುತ್ತಾನೆ. ಅದು ನಮಗೆ ಕಾಣುವುದಿಲ್ಲ. ೨ರಂದು ಶುಕ್ರದ ಜೊತೆ, ೩ರಂದು ಶನಿಯ ಜೊತೆ, ೪ರಂದು ಮಂಗಳದ ಜೊತೆಗೂಡುವುದರಿಂದ ಮಾರ್ಗದರ್ಶನ ದೊರಕಿದಂತಾಯಿತು. ಅಲ್ಲವೇ ?


೩ನೇ ಆಗಸ್ಟ್ ಸಂಜೆ ಪಶ್ಚಿಮದಲ್ಲಿ ಶುಕ್ರ, ಚಂದ್ರ, ಶನಿ ಮತ್ತು ಮಂಗಳ

ಮೋಡ, ಮಳೆಯ ನಡುವೆ ಅವಕಾಶ ಸಿಕ್ಕಿದಾಗಲೆಲ್ಲಾ ಗ್ರಹಗಳ ಸ್ಥಾನಗಳನ್ನು ಗುರುತಿಸಿಕೊಂಡರೆ ಬುಧದ ವೇಗದ ಓಟ, ಶನಿಯ ನಿಧಾನ – ಇವುಗಳ ಅರಿವಾಗುವುದು. ತಿಂಗಳ ಕೊನೆಗೆ ಶನಿ ದಿಗಂತದಿಂದ ಕೆಳಗಿಳಿಯುವುದು. ಆಗ ಉಳಿಯುವ ಮೂರು ಚುಕ್ಕೆಗಳಲ್ಲಿ ಅತಿ ಪ್ರಕಾಶಮಾನವಾದದ್ದು ಶುಕ್ರ. ಮುಂದಿನ ಸ್ಥಾನ ಬುಧಕ್ಕೆ. ಅತಿ ಕ್ಷೀಣವಾದದ್ದೇ ಶನಿ. ಮಂಗಳ ಸಾಕಷ್ಟು ಎತ್ತರದಲ್ಲಿ ದೂರವಾಗಿ ಕಾಣುತ್ತದೆ. ಮಂಗಳದ ಪಕ್ಕದಲ್ಲಿ ಒಂದು ಕ್ಷೀಣ ನಕ್ಷತ್ರವಿದೆ. ಇದರ ಸಹಾಯದಿಂದ ಮಂಗಳದ ದೈನಂದಿನ ಪಲ್ಲಟವನ್ನು ಗುರುತಿಸಬಹುದು.

ಆಗಸ್ಟ್ ಎಂದರೆ ಪರ್ಸಿಯ್ಯೆಡ್ ಉಲ್ಕಾವೃಷ್ಟಿಯ ತಿಂಗಳು ಎಂದೇ ಹವ್ಯಾಸಿಗಳ ಲೆಕ್ಕಾಚಾರ. ಈ ವೃಷ್ಟಿ ತಿಂಗಳುದ್ದಕ್ಕೂ ಕಂಡರೂ ಗರಿಷ್ಠ ಚಟುವಟಿಕೆ ೧೨ರಂದು. ಆದ್ದರಿಂದ ೧೩ರ ಬೆಳಗಿನಜಾವ ಗರಿಷ್ಠ ಸಂಖ್ಯೆಯಲ್ಲಿ ಅಂದರೆ ಗಂಟೆಗೆ ೪೦ರಷ್ಟು ಉಲ್ಕೆಗಳು ಕಾಣಬಹುದು.

ಖಗೋಳ ದಿನಚರಿ

ಆಗಸ್ಟ್
- ೧ ಸೂರ್ಯಗ್ರಹಣ*, ಅಮಾವಾಸ್ಯೆ, ಚಂದ್ರ - ಬುಧ ಜೋಡಿ
- ೨ ಶುಕ್ರ - ಚಂದ್ರ ಜೋಡಿ*
- ೩ ಶನಿ - ಚಂದ್ರ ಜೋಡಿ*
- ೪ ಮಂಗಳ - ಚಂದ್ರ ಜೋಡಿ*
- ೫ ಶುಕ್ರ-ಮಘದ ನಡುವೆ ಕನಿಷ್ಠ ಕೋನ
- ೮ ಚಾಂದ್ರಮಾಸದ ಪ್ರಥಮ ಪಾದ
- ೧೦ ಬುಧ-ಮಘ-ಜೋಡಿ, ಜ್ಯೇಷ್ಠಾ ನಕ್ಷತ್ರದ ಆಚ್ಛಾದನೆ
- ೧೨ ಪರ್ಸಿಯ್ಯೆಡ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
- ೧೩ ಗುರು-ಚಂದ್ರ-ಜೋಡಿ* (ಪೂರ್ವ ದಿಕ್ಕಿನಲ್ಲಿ ಸಂಜೆ), ಶುಕ್ರ-ಶನಿ ಜೋಡಿ (ಸಂಜೆ ಪಶ್ಚಿಮ ದಿಕ್ಕಿನಲ್ಲಿ)
- ೧೬ ನೆಪ್ಚೂನ್ ಆಚ್ಛಾದನೆ, ಬುಧ-ಶನಿ ಜೋಡಿ, ಹುಣ್ಣಿಮೆ ಗ್ರಹಣ*
- ೨೩ ಬುಧ-ಶುಕ್ರ ಜೋಡಿ, ಚಾಂದ್ರ ಮಾಸದ ಕೊನೆಯ ಪಾದ
- ೩೧ ಅಮಾವಾಸ್ಯೆ ೦೧:೨೮ಕ್ಕೆ, ಶನಿ - ಚಂದ್ರ – (ಸೂರ್ಯ) ಜೋಡಿ

ಸೆಪ್ಟೆಂಬರ್ ೧ ಶುಕ್ರ - ಬುಧ - ಮಂಗಳ - ಚಂದ್ರಗಳ ಸಮಾಗಮ

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಆಗಸ್ಟ್ ೧ರ ಸೂರ್ಯಗ್ರಹಣದ ವಿವರಗಳು

| | ಆರಂಭ | ಗರಿಷ್ಠ | ಮುಕ್ತಾಯ |
|---|---|---|---|
| ಬೆಂಗಳೂರು | ೧೬:೪೨ | ೧೭:೨೬ | ೧೮:೦೭ |
| ಮಂಗಳೂರು | ೧೬:೪೪ | ೧೭:೨೬ | ೧೮:೦೫ |
| ಹುಬ್ಬಳ್ಳಿ | ೧೬:೩೭ | ೧೭:೨೩ | ೧೮:೦೬ |
| ಮೈಸೂರು | ೧೬:೪೫ | ೧೭:೨೭ | ೧೮:೦೭ |

ಚಂದ್ರಗ್ರಹಣದ ವಿವರಗಳು

| | |
|---|---|
| ಪಾರ್ಶ್ವಛಾಯಾ ಪ್ರದೇಶಕ್ಕೆ ಚಂದ್ರದ ಪ್ರವೇಶ | ೧೬ರ ರಾತ್ರಿ ೧೨:೫೩ಕ್ಕೆ |
| ಪೂರ್ಣಛಾಯಾ ಪ್ರದೇಶಕ್ಕೆ ಚಂದ್ರದ ಪ್ರವೇಶ | ೧೭ರ ಬೆಳಿಗ್ಗೆ ೦೧:೦೬ |
| ಪೂರ್ಣಛಾಯಾ ಪ್ರದೇಶದಿಂದ ನಿರ್ಗಮನ | ೧೭ರ ಬೆಳಿಗ್ಗೆ ೦೪:೧೫ |
| ಪಾರ್ಶ್ವಛಾಯಾ ಪ್ರದೇಶದಿಂದ ನಿರ್ಗಮನ | ೧೭ರ ಬೆಳಿಗ್ಗೆ ೦೫:೨೭ |


**ಡಾ|| ಬಿ. ಎಸ್. ಶೈಲಜಾ**

ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಮೀಸೆ ಮಣ್ಣಾಗಲಿಲ್ಲ... ಸದ್ಯ!

ಉದುರಿ ಬೀಳುವನ್ನಕ್ಕ ನಿನ್ನ ಹಂಗು
ಉದುರಿ ಬಿದ್ದಲ್ಲಿ ಎನ್ನೊಡವೆ

ದಾಸರಯ್ಯನ ವಚನ

ನಮ್ಮ ಸೋದರತ್ತೆ ಕಡೆಯ ಬಳಗದಲ್ಲಿ ಶಂಕ್ರಣ್ಣ ಅಂತ ಒಬ್ಬನಿದ್ದ. ವರಸೆಯಲ್ಲಿ ಆತ ನನಗೆ ಚಿಕ್ಕಪ್ಪ ಆಗಬೇಕು. 'ನಿರ್ಲಜ್ಜ್ಯಂ ಸದಾ ಸುಖಿ' ಅಂಬೋ ಮಾತಿಗೆ ಹೇಳಿಮಾಡಿಸಿದ ಕುಳ. ಯಾರು ಏನೆಂದು ಕೊಂಡಾರು ಎಂಬುದಕ್ಕೆಲ್ಲ ತಲೆಕೆಡಿಸಿಕೊಳ್ಳದೆ, ಬಯಸಿದ್ದನ್ನು ಬೇಡಿಯಾದರೂ ಸೈ, ಕಾಡಿಯಾದರೂ ಸೈ, ಪಡೆಯಬೇಕೆನ್ನುವ ಭೂಪ. ಇದಿಷ್ಟೇ ಸಾಲದೆಂಬಂತೆ, ಭಯಂಕರ ವಾಚಾಳಿ. ಈ ಬಡಾಯಿತನ ಆತನ ಬಂಡವಾಳ ಕೂಡ.

ಎಂಥದ್ದೊ ಸಂಬಂಧದ ಎಳೆ ಹಿಡಿದುಕೊಂಡು, ಇಡೀ ಹಚ್ಚಡವನ್ನು ನುಂಗಿ ನೀರು ಕುಡಿಯಬಲ್ಲ ಪ್ರಚಂಡ, ಈ ಶಂಕ್ರಣ್ಣ. ಎರಡ್ಮೂರು ತಿಂಗಳಿಗೊಮ್ಮೆ ಈತನ ಸವಾರಿ ನಮ್ಮನೆಗೂ ಬರುತ್ತಿತ್ತು. ಆತ ಬರುವಲ್ಲಿ ಒಂದೆರಡು ದಿನ ಹೆಚ್ಚು ಕಡಿಮೆಯಾದಲ್ಲಿ, ನಮ್ಮವ್ವ, 'ಶಂಕ್ರೆಣ್ಯಾಕೊ ಬರಾಂವಾ ಇನ್ನೂ ಬಂದಿಲ್ಲಾ, ಖೋಡಿನ ತಂದು' ಎಂದು ಬೈಯುತ್ತಲೆ, ಆತನ ದಾರಿ, ಕಕ್ಕುಲಾತಿಯಿಂದ ನೋಡುತ್ತಿದ್ದದ್ದು ನಮಗೆಲ್ಲ ಸೋಜಿಗವೆನಿಸಿತ್ತು.

ಹೀಗೆ ಕಂಡಕಂಡವರ ಮನೆ ಬಾಗಿಲು ತಟ್ಟಿ, 'ಹ್ಹೀ ಹ್ಹೀ ಹ್ಹೀ' ಎಂದು ಜಗದಗಲ ಬಾಯಿ ಅಗಲಿಸುತ್ತ ಮನೆಯೊಳಗೆ ನುಸುಳಿದನೆಂದರೆ ಮುಗಿಯಿತು, ಬಳು ಹೊಕ್ಕಂತೆ, 'ಹರೋ ಹರಾ!' ಮನೆಯೊಡೆಯನ ಉದಾರತೆಯನ್ನೂ, ಮನೆಯಾಕೆಯ ಕೈ ರುಚಿಯನ್ನೂ ಹೊನ್ನಸೂಲಕ್ಕೇರಿಸುತ್ತಿದ್ದ. 'ಗಂಗಾಳ ಕಂಡಲ್ಲಿ ಉಂಬುವ, ಇಂಬು ಕಂಡಲ್ಲಿ ಮಲಗುವ' ಈತ, ಎಲ್ಲೆಂದರಲ್ಲಿ ಮನತಣಿದು ಉಂಡೆದ್ದು ಬರಬಲ್ಲ, ಜಾಣ ಬೀರಬಲ್ಲ!

''ಯಾಕೋ ಹಿಂಗಾಡ್ತೀ... ? ಹಿಂಗಾದ್ರ ನಿನಗ್ಯಾರು ಕಿಮ್ಮತ್ತ ಕೊಡ್ತಾರೊ ಶಂಕ್ರೂ... ? ಒಂದೀಟ್ ವಜನ್ನ ಇರ್ಬೇಕಪ.''

ನಮ್ಮಪ್ಪನ ಹಿತನುಡಿಗೆ, ''ಯಣಾ, ಹಂಗೆಲ್ಲಾ ಕಿಮ್ಮತ್ತ-ಗಿಮತ್ತ ಅಂತ ಕುಂತ್ರ ಸುಖಾ ಸಿಗ್ತದೇನೊ ?''

''ಅಲ್ಲೋ, ಎದುರಿಗೆ ಕುಳ್ಳಿದ್ದಾವ್ರು. ಅವ್ರೊಳ ಹಿಂದಿಂದ ನಿನಗ ಬೈತಾರೊ, ಖಬರಗೇಡಿ...'' ಅವ್ವನ ಆಕ್ಷೇಪ.

''ಬೈದವರೆಮ್ಮ ಬಂಧುಗಳೆಂಬೆ... ಹಾಗಂತ ಬಸವಣ್ಣವ್ರೇ ಹೇಳ್ಯಾರಿಲ್ಲಾ. ಬೈಸಿಕೊಂಡರೇನಾಯ್ತು ಬಿಡೂ ಯಣಾ, ಹೊಟ್ಟೀ ತುಂಬಾ ಊಟಾ ಸಿಗ್ತದಲ್ಲಾ...'' ಎಂದು ಉತ್ತರಿಸುತ್ತಲೆ ಅಡಿಗೆ ಮನೆಯತ್ತ ಕಣ್ಣು ಹರಿಬಿಡುತ್ತಿದ್ದ.

''ಮಾನಗೇಡಿ ನಾಡಾಗಿಲ್ಲದ ಮಾನಗೇಡಿನ್ನ ತಂದು...'' ಎಂದು ಅಪ್ಪ ಕುಳಿತಲ್ಲಿಂದಲೇ ಹೂವೇರಿಸುತ್ತಿದ್ದರೆ, ಇತ್ತ ಅದೇ ವೇಳೆಗೆ, ಚಕ್ಕಳ-ಬಕ್ಕಳ ಕುಂತು, ತುತ್ತು ತುತ್ತಿಗೊಮ್ಮೆ ಅವ್ವನ ಅಡಿಗೆಯ ಪರಾಕು ಹಾಡುತ್ತ ಕವಳ ಕತ್ತರಿಸುತ್ತಿದ್ದ.

''ಹೊಟ್ಟೀ ಹೊರಗಾತು. ತಂಬೂರಿ ಮನಿಗೆ ಬಂತು'' ಅಂಬೋ ಶಂಕ್ರಣ್ಣನಂತ ಪರಾನ್ನಪುಷ್ಟ ಜೀವಿಗಳು ನಮ್ಮ ಮಧ್ಯೆ ಎಷ್ಟಿಲ್ಲಂತೀರಿ! ಇಂಥವರು ಎಂಥ ದುರ್ಗಮ ಕಾಡಿನಲ್ಲೂ ಒಂದು ಬೈಪಾಸ್ ದಾರಿ ಕಂಡುಕೊಳ್ಳುತ್ತಾರೆ. ಆದರೆ ಆ ದಾರಿ ವಾಮಮಾರ್ಗ ದ್ದಾಗಿರುತ್ತದೆ. ಇದು ಅವರ ಮುಗ್ಗಲಗೇಡಿತನ, ಕಳ್ಳ ಮನಸ್ಸಿನ ದಾರಿಗೆ ರತ್ನಗಂಬಳಿ ಹಾಸುವಂಥದ್ದು.

ಬಾಯಿ ಇದ್ದ ಇವರು ಬರಗಾಲದಲ್ಲೂ ಬದುಕ ಬಲ್ಲರು. ಸಾಲಿಗರು ಬಂದು ಮುಂದೊಂದು ದಿನ ಕಿಬ್ಬದಿಯ ಕೀಲು ಮುರಿಯಬಹುದು, ಹಾಗಂತ, ಇಂದು, ಈ ದಿನದ ಹೋಳಿಗೆ-ತುಪ್ಪದೂಟ ತಪ್ಪಿಸಿಕೊಳ್ಳೊದುಂಟೆ ? ಕಿಬ್ಬದಿಯ ಕೀಲು ಮುರಿದರೇನಾಯಿತು, ಈಗಂತೂ ಹೋಳಿಗೆ ಊಟವಾಯಿತಲ್ಲ! ಅಷ್ಟು ಸಾಕು ಇವರಿಗೆ.

ಈ ಸಂದರ್ಭದಲ್ಲಿ ಹಳೆಯ ಜೋಕೊಂದು ನೆನಪಾಗುತ್ತಿದೆ. ಹಳ್ಳಿಯ ಗೌಡಪ್ಪನೊಬ್ಬ ರಾಜಧಾನಿ ಯಲ್ಲಿರುವ ಮಗನನ್ನು ಕಾಣಲು ಟ್ರೇನಿನಲ್ಲಿ ಹೊರಟಿದ್ದನಂತೆ. ಓದು ಬರಹ ಅರಿಯದ ಆತ, ತಿಳಿಯದೆ ಫಸ್ಟ್ ಕ್ಲಾಸ್ ಬೋಗಿ ಏರಿದ್ದ. ಇನ್ನು ಆತ ಇಳಿಯುವ ಊರು ಸಮೀಪಿಸುತ್ತಿದ್ದಂತೆ, ಟಿ.ಸಿ. ಕೈಗೆ ಸಿಕ್ಕಿಕೊಂಡ. ಟಿ.ಸಿ. ಭಾಷೆ ಗೌಡಪ್ಪಗೂ ಗೌಡಪ್ಪನ ಭಾಷೆ ಟಿ.ಸಿ.ಗೂ ಅರ್ಥವಾಗಲಿಲ್ಲ. ಕೊನೆಗೆ ಸಿಟ್ಟಿಗೆದ್ದ ಆ ಟಿ.ಸಿ. ಗೌಡಪ್ಪನ ಕಪಾಳಕ್ಕೆ ಎರಡೇಟು ಹೊಡೆಯುವದಕ್ಕೂ ಗೌಡಪ್ಪ ಇಳಿಯಬೇಕಾದ ಸ್ಟೇಷನ್ ಬರುವದಕ್ಕೂ ಸರಿಹೋಯಿತಂತೆ.

''ಯೂ ಫೂಲ್ ಗೆಟ್ ಲಾಸ್ಟ್'' ಎಂದು ಟಿ.ಸಿ. ಗೌಡಪ್ಪನನ್ನು ಕೆಳಗೆ ದಬ್ಬಿದ.

ಆ ನಂತರ, ಅಲ್ಲಿಂದ ತನ್ನ ರೂಮಿಗೆ ಬಂದ ಅಪ್ಪ. ಗೌಡನನ್ನು, ಮಗ ಗೌಡ ಕೇಳಿದ. ''ಅಪ್ಪಾ, ಹೆಂಗಿತ್ತು ಪ್ರವಾಸ ?''

ಅದಕ್ಕೆ ನಮ್ಮ ಗೌಡಪ್ಪ ಉತ್ತರಿಸಿದನಂತೆ ''[illegible]



ಮಲ್ಲಿಕಾರ್ಜುನ ಹುಲಗಬಾಳಿ

ಯೊಳಗೆ ಏನೋನೊ ಅಂದು ಇಳಿಯೂ ಮುಂದೆ ಕಪಾಳಕ್ಕೆ ಎರಡ ಹೋಡೀತಾನಾತು. ಹೊಡದ್ರೂ ಹೊಡೀವಲ್ಲಾಕ, ಪ್ರವಾಸ ಮಾತ್ರ ಖರೆವಂದ್ರೂ ಐಕ್ಲಾಸ್ ನೋಡ್ಲೆ.''

ನಿಜವಾಗಿಯೂ ಸುಖಜೀವಿಗಳೆಂದರೆ ಇವ್ರು! ಅಂದಹಾಗೆ, ಈ ಸುಖಿಜೀವಿಗಳು ಯಾವಾಗ್ಲೂ ಆಶಾವಾದಿಗಳೂ.

'ಆರಕ್ಕೇರಲಾಗದಿದ್ದರೇನಂತೆ, ಮೂರಕ್ಕಂತೂ ಇಳಿದಿಲ್ಲವಲ್ಲ' ಅಂಬೋ ಅಲ್ಪ ತೃಪ್ತರು. ಹೇಗೇ ಬಿದ್ದರೂ ಇವರ ಮೀಸೆ ಮಣ್ಣಾಗುವದಿಲ್ಲ, ಮಣ್ಣೇ ಅಂಟಿ ಕೊಂಡಿದ್ದರೂ ಅದು ಮಣ್ಣಲ್ಲ, ಅದರಂಥದ್ದೇ ಬೇರೆ ಇನ್ನೊಂದು ವಸ್ತು ಎಂದು ಪ್ರತಿಪಾದಿಸಬಲ್ಲ ಅಥವಾ ಅದು ತನಗೆ ಕಂಡಿಲ್ಲ ಎನ್ನುವ ಜಾಣ ಕುರುಡರು. ಇವರು ಅಸಾಧ್ಯ ಬುದ್ಧಿವಂತರು. ಸೋಲಲ್ಲೂ ಕೂಡ ಸಮಾಧಾನ ಚಿತ್ತ ಕಳೆದುಕೊಳ್ಳರು. ಇವರಿಗೆ ಅವಗುಣಗಳಲ್ಲೂ ಒಂದು ಪ್ಲಸ್ ಪಾಯಿಂಟ್ ಕಾಣಿಸುತ್ತದೆ. ಈಗ ಹೊಟ್ಟೆಪಕ್ಷದ ರಂಗಸ್ವಾಮಿಯ ನೋಡಿ, ಗ್ರಾಮ ಪಂಚಾಯತಿ ಹಿಡಿದು ರಾಷ್ಟ್ರಾಧ್ಯಕ್ಷ ಚುನಾವಣೆಯವರೆಗೆ, ಅದೆಷ್ಟು ಸಲ ಸ್ಪರ್ಧಿಸಿಲ್ಲ? ಒಂದರಲ್ಲೂ ಗೆಲವು ಸಾಧಿಸ ದಿದ್ದರೂ, ಅವರ ಪ್ರತಿ ಸೋಲು, ಕೀರ್ತಿಯ ಸೋಪಾನವಾಗಿತ್ತು. ದಾಖಲೆ ಸಂಖ್ಯೆಯ ಸ್ಪರ್ಧೆ ಹಾಗೂ ಸೋಲು ಅವರ ವಿಶೇಷತೆ ಎನಿಸಿ, ಮುಂದೆ ಅದುವೆ ವಿಶ್ವ ದಾಖಲೆ ಸೇರಿತಲ್ಲ! ಇದೇನು ಸಾಮಾನ್ಯ ಸಾಧನೆಯೇ!!

ಚುನಾವಣೆಯಲ್ಲಿ ಸೋತವರ ಕತೆ ಕೇಳುವಂತಿ ರುತ್ತದೆ. ಸೋತವಗೆ ಅಂಥ ಘಟಾನುಘಟಿಯ ವಿರುದ್ಧ ಸ್ಪರ್ಧಿಸಿ, ಡಿಪಾಜ಼ಿಟ್ ಉಳಿಸಿಕೊಂಡ ಹೆಮ್ಮೆ. ಅದನ್ನೂ ಕಳಕೊಂಡ ಇನ್ನೊಬ್ಬಾತ ತನಗಿಂತ ಕಮ್ಮಿ ಓಟು ಪಡೆದವನತ್ತ ಬೆರಳು ತೋರಿಸುತ್ತಾನೆ. 'ಅವನಿಗಿಂತ ನಾನೆ ಎಷ್ಟೋ ವಾಸಿ' ಎನ್ನುತ್ತ ಮೀಸೆಗೆ ಹತ್ತಿದ್ದ ಮಣ್ಣು ಒರೆಸಿಕೊಳ್ಳುತ್ತಾನೆ.

''ನೀರ್ ಸುರ್ದಾಂಗ ರೊಕ್ಕಾ ಸುರುವಿ ಆರಿಸಿ ಬರೋದರಾಗ ಏನ್ ಅಂತಾ ಕಿಸಾಮತಿ ಆದ ಬಿಡ್ರೀ'' ಎನ್ನುತ್ತಾನೆ. ''ಆದ್ರ, ನಾನು ತತ್ವದ ಮನಸ್ಯಾ, ಹಂಗೆಲ್ಲಾ ನೀತಿ-ನಿಯಮಾ ಬಿಡೊಂವಲ್ಲಾ'' ಎಂದು ಸ್ವ-ರತಿ ಗಿಳಿಯುತ್ತಾನೆ. ಈತ ಅವನ ಹಾಗೆ ನೀರಿನಂತೆ ಹಣ ಸುರಿದಿಲ್ಲ, ಅದಕ್ಕೆ ಕಾರಣ ಅವನ ಹತ್ತಿರ ಅಷ್ಟೊಂದು ದುಡ್ಡು ಇರೋದಿಲ್ಲ. ಆದ್ರೂ ತನ್ನ ಆ ಸ್ಥಿತಿಗೆ ನೀತಿಯ ಮುಖವಾಡ ಹಾಕುತ್ತಾನೆ.

'ಅರಮನೆಯಲ್ಲಿ ಇರಲೊಲ್ಲ, ಅಂಬಾರಿ ಏರಲೊಲ್ಲ, ರೇಶ್ಮೆ ಬಟ್ಟೆ ತೊಡಲೊಲ್ಲ, ಬಂಗಾರ ತಾಟಿನಲ್ಲಿ ಉಣಲೊಲ್ಲ, ರಾಜಕುಮಾರೀನ್ನ ಮದುವೆ ಯಾಗಲೊಲ್ಲ, ಯಾಕೊಲ್ಲ? ಇಲ್ಲದ್ದಕ್ಕೆ ಒಲ್ಲ' ಎಂದು ಹಾಡುತ್ತ ಬರುತ್ತಿದ್ದ ಆ ಕೋಲೆ ಬಸವನಾಟದವರು ನೆನಪಿಗೆ ಬರುತ್ತಾರೆ. ಆ ಎಲ್ಲ ಪದಾರ್ಥಗಳಿದ್ದರೆ, ಇವರಾರೂ ಸುಮ್ಮನೆ ಇರೋರಲ್ಲ, ಒಂದು ಕೈ ನೋಡಿಯೆ ಬಿಡುವವರು. ಆ ಮಾತು ಬೇರೆ.

ಮಹಾಭಾರತದ ಉತ್ತರಕುಮಾರ ಗೊತ್ತಲ್ಲ, ಯುದ್ಧಮಾಡಿ, ಆತಗೆ, ಶತ್ರುವನ್ನು ಸಾಯಿಸಲಾಗಲಿಲ್ಲ. ಹಾಗಂತ ಸುಮ್ಮನೆ ಸೋಲೊಪ್ಪಿಕೊಳ್ಳಲು ಸಿದ್ಧನಿಲ್ಲ. ಖಡ್ಗವನ್ನು ಹಿಡಿದು ರಣರಂಗಕ್ಕೆ ಹೋದ. ವೈರಿಗಳ ಕೈ-ಕಾಲು ಮುಂಡಗಳನ್ನು ಕೊಚ್ಚಿ-ಕೊಚ್ಚಿ ಹಾಕಿದ. ಆತನಿಗಿಂತ ಮೊದಲೇ ಅದಾರೋ ಆ ವೈರಿಗಳ ರುಂಡವನ್ನು ಚಂಡಾಡಿಸಿರಬಹುದು. ರುಂಡ ಇಲ್ಲದಿದ್ದರೇನಂತೆ ? ಸತ್ತ ದೇಹದ ಕೈ-ಕಾಲುಗಳನ್ನು ಕತ್ತರಿಸಿದ್ದು ಅವನಂಥವಗೆ ಸಾಹಸವೇ ಸರಿ. ತನ್ನ ಈ ಪರಾಕ್ರಮವನ್ನು ಅಂತಃಪುರದ ಅಂಗನೆಯರ ಮುಂದೆ ಅಟ್ಟಹಾಸದಿಂದ ಹೇಳಿಕೊಂಡು ಸಂಭ್ರಮಿಸಲಿಲ್ಲವೆ! ಅಷ್ಟಾದರೂ ಮಾಡಿದೆನಲ್ಲ ಎಂಬುದು ಉತ್ತರಕುಮಾರನ ಉಮೇದಿಗೆ ಕಾರಣವಾಯಿತು. ಇಷ್ಟು ಸಾಕಲ್ಲ ಆತನಿಗೆ, ಇಲ್ಲದ ಮೀಸೆಯ ಮೇಲೆ ಕೈಯಾಡಿಸಲು!

'ಅಂಜಿಕುಂತರೆ ಹೈನಾಗೊದಿಲ್ಲ, ಬಾಣಂತನಕ್ಕೆ ಮಕ್ಕಳಾಗೊದಿಲ್ಲ' ಅಂತ ಹೇಳ್ತಾರೆ. ಮಾನ ಮರ್ಯಾದೆ ಅಂತ ಕುಂತವರಿಗೆ, ರಾಜಕೀಯದಲ್ಲಿ ಬೆಳೆಯೊಕ್ಕಾಗಲ್ಲ. ಮೂರೂ ಬಿಟ್ಟವನು ಊರಿಗೇ ದೊಡ್ಡೋನು-ಸುಳ್ಳಲ್ಲ. ಮಾನ ಮುಗ್ಗರಿಸಿದ್ದರೂ, ತಮ್ಮ ವರಮಾನ ತಗ್ಗಿಸಿಕೊಳ್ಳಲೊಪ್ಪದ ಲಂಚಣ್ಣರ ಕಾಲವಿದು.

''ನನ್ನ ಹಿಡ್ಕೊಂಡೇ ಹೇಳ್ತೀನಿ, ಎಲ್ರೂ ಲಂಚ ಬಡುಕರೆ!'' ಎಂದು ಮೊದಲಿಗೆ ತಮ್ಮನ್ನು ತಾವೇ ಅಗ್ಗಮಾಡಿಕೊಳ್ಳುತ್ತಾರೆ. ನಂತರ, ತಿನ್ನುವಿಕೆಯಲ್ಲಿ ತಮ್ಮನ್ನೂ ಮೀರಿಸಿದವರನ್ನು ಉದಾಹರಿಸುವದು ಹೀಗೆ –

''ನೋಡಿ, ಆತನ ಮನೆಯ ಮೇಲೆ ಮೂರು ಸಲ ಲೋಕಾಯುಕ್ತರ ದಾಳಿಯಾಗಿದೆ, ಆದ್ರೆ, ನಮ್ಮನೆ ಮೇಲೆ ಕೇವಲ ಎರಡೇ ಎರಡು ಸಲ ಮಾತ್ರ.''

ತಾನು ಗಿಂಬಳ ತಿಂದರೂ, ತೀರ ಹಾಗಲ್ಲ, ಮಾರ್ಯಾದೆಯ ಲಿಮಿಟ್ಟು ಎಂದೂ ಬಿಟ್ಟಿಲ್ಲ, ಬಡವರನ್ನು ಕಂಡರೆ ಕರಳು ಅಯ್ಯೋ ಅನ್ನುತ್ತದೆ... ಅಂಥವರಿಗೆ ಸಾಕಷ್ಟು ರಿಯಾಯಿತಿ ತೋರಿಸುತ್ತಾನೆ, ದೇವರಿಗೆ, ಧರ್ಮಕಾರ್ಯಕ್ಕೆಂದು, ಪ್ರತಿಫಲದ ಇಂತಿಷ್ಟು ಪ್ರತಿಶತ ಕೊಡುತ್ತ ಬಂದಿರುವದಾಗಿಯೂ ಸಮರ್ಥಿಸಿ ಕೊಳ್ಳುತ್ತಾನೆ.

ಹೀಗೆ ತನಗಿಂತ ಕೆಳಗೆ ಬಿದ್ದವರೊಂದಿಗೆ ಹೋಲಿಸಿಕೊಂಡು, ಕಳ್ಳ ಸಮಾಧಾನ ಪಡೆಯುವವನ ಮೀಸೆ ಎಂದಿಗೂ ಮಣ್ಣಾಗದು! ಇದ್ದರೆ ತಾನೆ ಅದು ಮಣ್ಣಾಗೊ ಭಯ! ಅದನ್ನೇ ಇಲ್ಲವಾಗಿಸಿದರಾಯ್ತು ಅಂದಕೊಂಡರೊ ಏನೊ! ಹೀಗಾಗಿ ಬಹಳಷ್ಟು ಜನನಾಯಕರು/ಅಧಿಕಾರಿಗಳು ಆ ಮೀಸೆಯ ಮೇಲಿನ ಆಮಿಷವನ್ನೇ ತೊರೆದಿದ್ದಾರೆ? ಅಂದಿನವರ ಕಲ್ಲೀ ಮೀಸೆ, ಗಿರಿಜಾ ಮೀಸೆ, ಏರು ಮೀಸೆ, ಜೋರು ಮೀಸೆ, ತಳವಾರ ಮೀಸೆ ಇರುವವರು ಈಗಿಲ್ಲ. ಹೋಗ್ಲಿ ಆಂತಂದ್ರೆ, ಜೊಂಡುಗ ಮೀಸೆವಂತರೂ ಇಲ್ಲವಲ್ರಿ! ಎಲ್ಲೆಲ್ಲೂ ಈಗ ಮೀಸೆರಹಿತ ಮುಖ (ಮಿಕ)ಗಳು! ಕೆಲವರು ಇರ್ತಾರೆ. ಸರ್ವ ದುಶ್ಚಟಗಳ ಸಂಗಮ ವಾಗಿರ್ತಾರೆ. 'ನಾನು ಕುಡೀತಿರಬಹುದು, ಜೂಜಾಡು ತ್ತಿರಬಹುದು, ಆದರೆ, ಏನೇ ಮಾಡಿದರೂ ನಾಲ್ಕು ಗೋಡೆ ಮಧ್ಯೆದೊಳಗೆ ಕುಡಿದು, ಬೀದಿಯಲ್ಲಿ ಗಲಾಟೆ ಮಾಡಿ, ಅವನಂತೆ ಗಟಾರದೊಳಗೆ ಬೀಳೂದಿಲ್ಲಾ, ರಸ್ತಾದಾಗ ಉರುಳಾಡೋದಿಲ್ಲ, ನನಗೆ ಮರ್ಯಾದಿ ಮುಖ್ಯಾರಿ, ಮರ್ಯಾದೀ! ಹಾಂ' ಏಕದಂ ಮರ್ಯಾದಾ ಪುರುಷರಾಗುತ್ತಾರೆ.

ಇನ್ನು ಆರೋಗ್ಯ ಕೆಡಿಸಿಕೊಳ್ಳದ ಕುಡುಕರ ಬಗ್ಗೆ ಆಡುವ ಮೆಚ್ಚುಗೆಯ ಮಾತುಗಳನ್ನು ನೀವು ಕೇಳಬೇಕು. 'ಕುಡೀತಿದ್ದಾ ಸಿಕ್ಕಾಪಟ್ಟೆ ಕುಡೀತಿದ್ದಾ ಬಡ್ಡೀಮಗನ ಹೇಲ್ತ್ ಹ್ಯಾಂಗ್ ಗಟ್ಟಿಮುಟ್ಟಿತ್ತು ಅಂತೀರಿ!' ಎಂದೂ, ತೀರ್ಥಸೇವೆಗಾಗಿ ಸಾಲ-ಸೋಲ ಮಾಡಿ ಸಂಪೂರ್ಣ ಸತ್ಯನಾಶವಾಗಿಹೋದವರೂ, ಮೂಟೆಗಟ್ಟಲೆ ಜೋಳ ಕಳ್ಕೊಂಡ್ರೂ, ಮುಷ್ಟಿಯಷ್ಟಾದ್ರೂ ಉಪ್ಪು ಉಳಿಸಿಕೊಂಡು, ಹೆಂಡತಿ ಮಕ್ಕಳಿಗಾಗಿ ಚೂರುಪಾರು ಆಸ್ತಿ ಇನ್ನೂ ಇಟ್ಟವರ ಬಗ್ಗೆ, ಚಂಡಿ ಸ್ವಭಾವದವಳಿಗೆ ಗಂಡನ ಮೇಲೆ ಇರುವ ವಿಪರೀತ ಪ್ರೀತಿಯ ಬಗ್ಗೆ. ಹೀಗೆ ಅವರ ಅಸಂಖ್ಯಾತ ಅವಗುಣಗಳ ಮಧ್ಯೆ ಒಂದಾದರೂ ಮೆರಿಟ್ ಪಾಯಿಂಟ್ ಹೆಕ್ಕಿ ತೆಗೆದು, ಬಿದ್ದವರ ಮೀಸೆ ಮಣ್ಣಾಗದಂತೆ ಕಾಳಜಿ ವಹಿಸುತ್ತಾರೆ.

ಬಹಳಷ್ಟು ಪುಸ್ತಕಗಳನ್ನು ಬರೆಯಲಾಗದ ಒಬ್ಬ ಸಾಹಿತಿ, 'ರ್‍ರೀ ಸ್ವಾಮೀ, ನಾನು ಬರಿದಿರೋದು ತುಸು ಇರಬಹುದು, ಅವನಷ್ಟು ಬರೆದಿಲ್ಲಾ ಒಪ್ಕೋತೀನಿ. ಆದರೇನಂತೆ, ನನ್ನದು ಸತ್ವಭರಿತ ಸಾಹಿತ್ಯ ಕಣ್ರೀ! ಹತ್ತು ಹಡೆಯೋದಕ್ಕಿಂತ ಮುತ್ತಿನಂತೆ ಒಂದೇ

ಏನಾದರೂ ಸಾಧಿಸಬೇಕೆನ್ನುವ ಹೇತು ಇದ್ದವರು, ಅವಘಡದಲ್ಲೂ ಒಂದು ಪ್ಲಸ್ ಪಾಯಿಂಟ್ ಹುಡುಕಿಕೊಳ್ಳುತ್ತಾರೆ. ಇವರು ಬಿದ್ದರೂ, ಮೀಸೆ ಮಣ್ಣಾಗದ ರೀತಿಯಲ್ಲಿ ಮೇಲೆದ್ದು ಬರಬಲ್ಲ ತಾಕತ್ತಿನವರು, ಸೋಲಿನಲ್ಲಿ ಸಣ್ಣಾಗ ದವರು, ಹೈರಾಣಗೊಂಡರೂ ಹಣ್ಣಾಗ ದವರು, ಕಳಕೊಂಡ ಸ್ಥಳದಲ್ಲಿಯೇ ಕನಕದ ಗಿಂಡಿ ಎತ್ತಿ ತರಬಲ್ಲ ಛಾತಿವಂತರು. ಆದರೆ, ನಮ್ಮ ಬಳಗದ ಭೋಜನಪ್ರಿಯ ಶಂಕರಣ್ಣ ನಂಥ ಬಹಳಷ್ಟು ಜನರಿಗೆ ತಮ್ಮ ತಪ್ಪು ಮುಚ್ಚಿಕೊಳ್ಳಲು, ಸಮರ್ಥಿಸಿಕೊಳ್ಳಲು ಕುಂಟ ನೆಪ ಬೇಕು. ವಾಮಮಾರ್ಗದ ಬೈಪಾಸ್‌ದ ಸೋಗಲಾಡಿ ಮುಖವಾಡಕ್ಕೆ ಶರಣಾಗುತ್ತಾರೆ. ಅದೇ, ಐನ್‌ಸ್ಟಿನ್‌ನಂಥ ಮೇಧಾವಿಗಳದು ರಾಜಮಾರ್ಗ.

ಅದಕ್ಕೆ ದಾಸರಯ್ಯ ಹೇಳೋದು, ಬದುಕಿನ ಮ್ಯಾರಾಥಾನ್ ಓಟದಲ್ಲಿ ಉದುರಿ ಬೀಳುವ ತನಕ ಅದು ನಮ್ಮ ಅಧೀನ. ಬಿದ್ದ ಮೇಲೆ ಅದು ದೈವ-ದೇವನ ಸ್ವಾಧೀನ. ಮಾನವೊ... ಅವಮಾನವೊ ಎರಡಕ್ಕೂ ಮೀಸೆ ಯೊಂದು ಮಾನದಂಡ. ಇದನ್ನರಿಯ ದವರಿಗೂ ಮೀಸೆ ಅಂಬೋದೆ ದಂಡ.

ಒಂದು ಮಗುನ್ನ ಪಡಿಲಿಕ್ಕೂ ಪುಣ್ಯಮಾಡಿರಬೇಕು. ನಾನು ಬರೆದಿರೋದು ಚಿನ್ನ! ಚಿನ್ನದಂತೆ ಅಸಲ ರಸಭರಿತ ಸಾಹಿತ್ಯ' ಅಂತಿರ್ತಾನೆ. ಅದೆಂಥ ರಸಭರಿತವೊ, ಉದರದುರಿತ ಸಾಹಿತ್ಯವೋ, ಆ ಸಾಹಿತ್ಯ ಶಾರದೆಯೆ ಹೇಳ್ಬೇಕು.

'ಕುಲ ಕೆಟ್ಟರೂ ಸುಖದಲ್ಲಿ ಬೀಳಬೇಕು' ಅಂತದೆ ಒಂದು ಗಾದೆ ಮಾತು. ರಾಜ ವೈಭವದ ಅಷ್ಟೈಶ್ವರ್ಯವನ್ನು ಆಚೆಗಿಟ್ಟು, ಅಷ್ಟಾವಂಕನ ಕೂಡಿಕೊಂಡ ರಾಣಿ ಅಮೃತಮತಿಯ ಕತೆ ನಿಮಗೆ ಗೊತ್ತಲ್ಲ! ಅಂತಃಪುರ ಬಿಟ್ಟು, ಆಕೆ ಕುದುರೆ ಲಾಯಕ್ಕೆ ಬಂದು, ನಾಲಾಯಕ ಕೆಲಸ ಮಾಡಿರಬಹುದು, ನೈತಿಕವಾಗಿ ಬಿದ್ದಿರಬಹುದು... ಆದರೇನಂತೆ, ಅರಮನೆಯಲ್ಲಿ ಸಿಗದ ಸಖ್ಯ-ಸುಖ ಉಂಡಳಲ್ಲ!

ಮಾವ ಹರಿಹರನಿಂದ ಹೊಡೆಸಿಕೊಂಡು, ಹಲ್ಲು ಉದುರಿಸಿಕೊಂಡ ಕವಿ ರಾಘವಾಂಕ ಉದುರಿದ್ದ ತನ್ನ ಹಲ್ಲುಗಳ ಸಂಖ್ಯೆಗೆ ಸರಿಸಮವಾಗಿ ಮಹಾಕಾವ್ಯ ಬರೆದನಂತೆ. ಈತನಿಗೂ ಆ ಅಮೃತಮತಿಗೂ ಅದೇ ಸಾರ್ಥಕ್ಯ ಭಾವ ಇರಬಹುದೇನೋ? ಬಾಲ ಅಥವಾ ತಲೆ – ಇವುಗಳಲ್ಲಿ ಒಂದನ್ನು ಕಳೆದುಕೊಳ್ಳಲೇಬೇಕಾದ ಅನಿವಾರ್ಯತೆ ಎದುರಾದಾಗ ಬಾಲವನ್ನು ಬಲಿಕೊಟ್ಟು, ತಲೆ ಉಳಿಸಿಕೊಳ್ಳುವದು ತಲೆವಂತರ ಲಕ್ಷಣ. ಅಂಥ ತಲೆವಂತ ಹುಡುಗನೊಬ್ಬ ಅಂದಗೇಡಿ ಹುಡುಗಿಯನ್ನು ಮದ್ವೆಯಾಗಿದ್ದಾನೆಂದಿಟ್ಟುಕೊಳ್ಳಿ... 'ಹುಡುಗಿ ಕಪ್ಪಗಿದ್ದರೇನಾತು ಬಿಡು, ಕಂಡಾಪಟಿ ವರದಕ್ಷಿಣೆ ಬಂತಲ್ಲ, ಅವ್ನ ಲಕ್ ಅಂದ್ರ ಲಕ್ ನೋಡು' ಅಂತ ಸಂಬಂಧಿಗಳು ಹೇಳಿಕೊಂಡರೆ, 'ಅಂದವಿಲ್ಲದಿದ್ದರೇನಂತೆ ಕುಂದಿಲ್ಲವಲ್ಲ, ಕಪ್ಪಗಿದ್ದರೂ ಕಳೀಶುದ್ಧ?' ಎಂಬ ಪಿಳ್ಳೆ ಸಮಾಧಾನ ಮದುಮಗನದು.

ದುಡ್ಡು ತಗೊಂಡು ಓಟು ಹಾಕುವ ಮತದಾರನದು, ಅದೇ ಹಣ ಮುಖ್ಯವೆನಿಸಿ, ಪಕ್ಷ ಬದಲಿಸುವ ರಾಜಕಾರಣಿಯದು, ಮತ್ತೆ, ಅವನಂಥ ನೂರಾರು ಭಂಡ-ಭ್ರಷ್ಟ ಜೀವಿಗಳದೂ ಇದೇ ಮಂತ್ರ! ಕುರುಡು ಕಾಂಚಾಣದ ಝಣ... ಝಣ!

'ಅಣ್ಣಾವ್ರ, ಈಗ ಕಾಲ ಬದ್ಲಾಗೇದ... ಇದರ ಕೂಡ ನಾವೂ ಬದ್ಲಾಗಾಕಬೇಕಲ್ಲರ್ರೀ ಇರ್ಲಕ್ಕಂದ್ರ ನಡೆಯೂದಿಲ್ಲರೀ'... ಎನ್ನುತ್ತಾ ತಾವು ಮಾಡಿದುದೇ ಸರಿ ಎಂಬಂತೆ ಪ್ರತಿಪಾದಿಸುತ್ತಾರೆ.

ಹಾಗೆ ನೋಡಿದರೆ ಪ್ರತಿಯೊಬ್ಬನಿಗೂ, ಆತನ ಪ್ರತಿಯೊಂದು ಕಾರ್ಯಕ್ಕೂ ಒಂದು ಕಾರಣವಿದ್ದೇ ಇರುತ್ತದೆ. ಜೀವ ರಕ್ಷಕನಿಗೊಂದು ಕಾರ್ಯ ಕಾರಣವಾದರೆ, ಜೀವ ತೆಗೆಯುವವನಿಗೆ ಹರಣ-ಕಾರಣ!

'ಏನ್ಮಾಡೂದ್ ಬರ್ರಿ, ಸ್ವಲ್ಪದರಾಗೇ ತಪ್ಪಿಹೋತು, ಪರೀಕ್ಷೆ ಟೈಮ್‌ದಾಗ ಟೈಫಾಯ್ಡ್ ಆಗಿರ್‍ಲಿಕ್ಕಂದ್ರ, ನಂದೇ ಫಸ್ಟ್ ರ್‍ಯಾಂಕ್ ಬರ್ತಿತ್ತು' ಅನ್ನುವವ, ಒಂದೇ ನಂಬರ್‌ದಲ್ಲಿ ಬಂಪರ್ ಲಾಟರಿ ಕೈಬಿಟ್ಟಷ್ಟೆ ಹಳಹಳಿಸುತ್ತಾನೆ. ನೆಲ ಡೊಂಕಿರದೆಹೋಗಿದ್ದರೆ ನಾನು ಆ ಮಾಧುರಿ ದೀಕ್ಷಿತಗಿಂತ ಮಸ್ತಾಂಗಿ ಡಾನ್ಸ್ ಮಾಡ್ತಿದ್ದೆ ಎಂದು ಸಬೂಬು ಹೇಳೋರನ್ನು ಕಂಡಾಗ, 'ಕಳ್ಳನಿಗೊಂದು ಪಿಳ್ಳೆ ನೆಪ' ಮಾತು ನೆನಪಿಗೆ ಬರೋದಿಲ್ಲವೆ?

ಅವನತಿಯಲ್ಲೂ ಅಧೋಮುಖರಾಗದ ಕೆಲ ಮಹಾನುಭಾವರಿದ್ದಾರೆ. ತಲೆಗೂದಲು ಹೆಚ್ಚು ಕಡಿಮೆ ಇಲ್ಲವಾಗಿ, ನೆತ್ತಿಯ ಮುಂಭಾಗದಲ್ಲಿ ಕೆಲವೆ ಕೆಲವು, ಕಣ್ಣಂಚಿನಲ್ಲಿ ಎಣಿಸಬಹುದಾದಷ್ಟು ಕೂದಲು ಹೊಂದಿರುವವರನ್ನು ನೀವು ಗಮನಿಸಿ ನೋಡಿದ್ದೀರಾ! ಶ್ಯಾವಿಗೆ ಎಳೆಯಂತೆ ಕೂದಲುಗಳನ್ನು ಮುಂದೆಳೆದುಕೊಂಡು, ಹಣೆಯ ಮುಂಭಾಗಕ್ಕೆ ತಂದು ಬಾಚಿಕೊಂಡಿರುತ್ತಾರೆ. 'ಸದ್ಯ, ಪೂರ್ತಿ ಬಕ್ಕೇಶಿ ಆಗಿಲ್ಲ, ಇಷ್ಟಾದ್ರೂ ಉಳಿದುಕೊಂಡಿದೆಯಲ್ಲ, ಅಷ್ಟೇ ಸಾಕು' ಎಂಬ ತೃಪ್ತ ಭಾವ ಅವರದು. ಇಂಥವರೆ ತಾನೆ ದುರ್ಗಮ ಕಾಡಿನಲ್ಲೂ ಒಂದು ಬೈಪಾಸ್ ಹುಡುಕಿಕೊಂಡವರು, ಅವನತಿಯಲ್ಲೂ ಒಂದು ಪ್ಲಸ್ ಪಾಯಿಂಟ್ ಕಂಡುಕೊಂಡವರು.



ನಿಮಗೆ ಡೊಗ್ಲಾಸ್ ಬೇಡ್‌ನ ಬಗ್ಗೆ ಹೇಳಬೇಕೆನಿಸುತ್ತದೆ.

ಈತ ಬ್ರಿಟಿಷ್ ಸೈನ್ಯದಲ್ಲಿ ಅಧಿಕಾರಿಯಾಗಿದ್ದ. ಒಮ್ಮೆ ವಿಮಾನ ಅಪಘಾತದಲ್ಲಿ ಎಡಗಾಲನ್ನು ಕಳೆದುಕೊಂಡ. ಕೃತಕ ಕಾಲು ಹಾಕಿಸಿಕೊಂಡ. ಆರಾಮವಾಗಿ ಮನೆಯಲ್ಲಿರುವುದನ್ನು ಬಿಟ್ಟು ಮತ್ತೆ ಸೈನ್ಯ ಸೇವೆಗೆ ಬಂದಿದ್ದ. ಆತನ ದುರದೃಷ್ಟ.ಎರಡನೆಯ ಸಲ, ಆತ ಪ್ರಯಾಣಿಸುತ್ತಿದ್ದ ವಿಮಾನಕ್ಕೆ ಬೆಂಕಿ ಹತ್ತಿಕೊಂಡಿತು. ಪ್ಯಾರಾಚೂಟ್ ಅರಳಿಸಿ, ಉರಿಯುವ ವಿಮಾನದಿಂದ ಇನ್ನೇನು ಜಿಗಿಯಬೇಕು, ಆ ಸಮಯದಲ್ಲೆ ಡೊಗ್ಲಾಸ್‌ನ ಕಾಲು, ವಿಮಾನದ ಬಾಗಿಲಿಗೆ ಸಿಕ್ಕಿಕೊಳ್ಳಬೇಕೆ? ಸುದೈವದಿಂದ ಅಲ್ಲಿ ಸಿಲುಕಿಕೊಂಡಿದ್ದು, ಕೃತ್ರಿಮ ಕಾಲು. ತಕ್ಷಣ ಅದರ ಹುಕ್ಕು ಸಡಿಲಿಸಿದ. ಆ ಕಾಲು ಬಾಗಿಲಿಗೆ ನೇತಾಡುತ್ತಿದ್ದಂತೆ, ಪ್ಯಾರಾಚೂಟ್‌ನೊಂದಿಗೆ ಸುರಕ್ಷಿತವಾಗಿ ಭೂಮಿಗಿಳಿದಿದ್ದ, ಬದುಕಿಕೊಂಡಿದ್ದ.

ಮೊದಲ ಅಪಘಾತದಲ್ಲಿ ಕಾಲು ಕಳೆದುಕೊಂಡಿದ್ದರಿಂದಲೇ, ಎರಡನೆಯ ಸಲ ಆತ ಬದುಕುಳಿಯಲು ಸಾಧ್ಯವಾದದ್ದು. ಆದದ್ದೆಲ್ಲ ಒಳಿತಕ್ಕೆ ಎಂದು ಆತ ಸಮಾಧಾನಪಟ್ಟನಂತೆ.

ಆಲ್ಬರ್ಟ್ ಐನ್‌ಸ್ಟಿನ್ ಒಮ್ಮೆ ಏಣಿಯ ಮೇಲಿಂದ ಕಾಲು ಜಾರಿ ಬಿದ್ದ. ವಿಜ್ಞಾನಿಯಲ್ಲವೆ? ಯಾಕೆ ಬಿದ್ದ, ಮೊದಲಿಗೆ ತಾನು, ನಂತರ ಏಣಿ ಬೀಳಲು ಕಾರಣ ವೇನಿರಬಹುದು... ವಿಶ್ಲೇಷಣೆಗೆ ಮುಂದಾದ. ಅದರ ಫಲವಾಗಿ, ಗುರುತ್ವಾಕರ್ಷಣ ಶಕ್ತಿಯ ನಿಯಮಕ್ಕೆ ತಿದ್ದುಪಡಿ ಬರೆಯುವಂತಾಯಿತು. ಆಗ ಐನ್‌ಸ್ಟೈನ್ ಬೀಳದೆ ಹೋಗಿದ್ದರೆ!

ಸ್ಪಿನ್ ಮಾಂತ್ರಿಕ ಬಿ. ಎಸ್. ಚಂದ್ರಶೇಖರ ಕೈ ಊನವಾಗಿರದಿದ್ದಲ್ಲಿ, ಚಾರ್ಲಸ್ ಡಿಕನ್ಸ್ ಬಡವನಾಗಿರದಿದ್ದರೆ, ಕುರುಡರಾಗಿ ಹೆಲೆನ್ ಕೆಲ್ಲರ್, ನಮ್ಮ ಪಂಚಾಕ್ಷರಿ ಮತ್ತು ಪುಟ್ಟರಾಜ ಗವಾಯಿಗಳು ಹುಟ್ಟದಿದ್ದಲ್ಲಿ ಇಷ್ಟೆಲ್ಲ ಸಾಧನೆಗೈಯಲು ಸಾಧ್ಯವಾಗುತ್ತಿತ್ತೆ...! ಜ್ಯೂಲಿಯನ್ ಕೆಪ್ಕೆ ಎಂಬ ಹುಡುಗಿ ವಿಮಾನ ದುರಂತದಿಂದಾಗಿ ಪೆರುವಿಯನ್ ಕಾಡಡವಿಯಲ್ಲಿ ಹತ್ತು ದಿನ ಒಂಟಿಯಾಗಿ ಕಳೆಯುವ ದುರ್ಭರ ಪ್ರಸಂಗ ಬರದಿದ್ದಲ್ಲಿ ಲೇಖಕಿಯಾಗುವ...! ಹಾಲಿವುಡ್‌ನಲ್ಲಿ ನಟಿಸುವ ಅವಕಾಶಗಳು ಬರುತ್ತಿದ್ದವೆ....! ಇತ್ಯಾದಿ ಆಲೋಚನೆಗಳು ಬರುವದು ಸಹಜ. ಅವರ ಬದುಕಿನ ಮಹತ್ವದ ತಿರುವಿಗೆ ಈ ಘಟನೆಗಳು ಮೂಲತಂತುವಾಗಿವೆ. ಈ ಪಟ್ಟಿಗೆ ಇನ್ನು ಎಷ್ಟೋ ಹೆಸರು ಸೇರಿಸಬಹುದು. ಇವರೆಲ್ಲರಲ್ಲಿ ಒಂದಿಲ್ಲೊಂದು ಕುಂದು. ಆದರೂ ಕುಂದದ ಉತ್ಸಾಹ ಅವರಲ್ಲಿತ್ತು. ಹಾಗಿದ್ದರೇನಾಯ್ತು? ಊನದಲ್ಲೂ ಹೊನ್ನವಾಗಿ ಹೊಳೆದರಲ್ಲ... 'ಅಷ್ಟೆ ಸಾಕು'.

ಏನಾದರೂ ಸಾಧಿಸಬೇಕೆನ್ನುವ ಹೇತು ಇದ್ದವರು, ಅವಘಡದಲ್ಲೂ ಒಂದು ಪ್ಲಸ್ ಪಾಯಿಂಟ್ ಹುಡುಕಿಕೊಳ್ಳುತಾರೆ. ಇವರು ಬಿದ್ದರೂ, ಮೀಸೆ ಮಣ್ಣಾಗದ ರೀತಿಯಲ್ಲಿ ಮೇಲೆದ್ದು ಬರಬಲ್ಲ ತಾಕತ್ತಿನವರು, ಸೋಲಿನಲ್ಲಿ ಸಣ್ಣಾಗಾಗದವರು. ಹೈರಾಣಗೊಂಡರೂ ಹಣ್ಣಾಗದವರು, ಕಳಕೊಂಡ ಸ್ಥಳದಲ್ಲಿಯೇ ಕನಕದ ಗಿಂಡಿ ಎತ್ತಿ ತರಬಲ್ಲ ಛಾತಿವಂತರು. ಆದರೆ, ನಮ್ಮ ಬಳಗದ ಭೋಜನಪ್ರಿಯ ಶಂಕರಣ್ಣನಂಥ ಬಹಳಷ್ಟು ಜನರಿಗೆ ತಮ್ಮ ತಪ್ಪು ಮುಚ್ಚಿಕೊಳ್ಳಲು, ಸಮರ್ಥಿಸಿಕೊಳ್ಳಲು ಕುಂಟುನೆಪ ಬೇಕು. ವಾಮ ಮಾರ್ಗದ ಬೈಪಾಸ್‌ದ ಸೋಗಲಾಡಿ ಮುಖವಾಡಕ್ಕೆ ಶರಣಾಗುತ್ತಾರೆ. ಅದೇ, ಐನ್‌ಸ್ಟಿನ್‌ನಂಥ ಮೇಧಾವಿಗಳದು ರಾಜಮಾರ್ಗ.

ಅದಕ್ಕೆ ದಾಸರಯ್ಯ ಹೇಳೋದು, ಬದುಕಿನ ಮ್ಯಾರಾಥಾನ್ ಓಟದಲ್ಲಿ ಉದುರಿ ಬೀಳುವ ತನಕ ಅದು ನಮ್ಮ ಅಧೀನ. ಬಿದ್ದ ಮೇಲೆ ಅದು ದೈವ-ದೇವರ ಸ್ವಾಧೀನ. ಮಾನವೂ... ಅವಮಾನವೂ ಎರಡಕ್ಕೂ ಮೀಸೆಯೊಂದು ಮಾನದಂಡ. ಇಲ್ಲದವರಿಗೂ ಮೀಸೆ ಅಂಟೋದೆ ದಂಡ.

[illegible]
[illegible]



# ರಾಷ್ಟ್ರ ಹಿತಾಸಕ್ತಿಯನ್ನು ಬಲಿಕೊಡುವ ಪರಮಾಣು ಒಪ್ಪಂದ

**ಕ**ಳೆದ ಎರಡು ವರ್ಷಗಳಿಂದ ಜಗ್ಗಾಡುತ್ತ ಬಂದಿರುವ ಭಾರತ-ಅಮೆರಿಕ ನಾಗರಿಕ ಪರಮಾಣು ಸಹಕಾರ ಒಪ್ಪಂದದ ಅಂಗೀಕಾರ, ಅನುಷ್ಠಾನದ ಪ್ರಶ್ನೆ ಈಗ ತಾರಕಕ್ಕೇರಿದೆ. ೧೨೩ ಒಪ್ಪಂದ ಎಂದು ಪರಿಚಿತವಾಗಿರುವ ಈ ಪ್ರಸ್ತಾವ ಭಾರತದ ಸ್ವಾತಂತ್ರ್ಯ, ಸಾರ್ವಭೌಮತ್ವಗಳಿಗೆ ಮಾರಕ, ಅದು ಭಾರತದ ವಿದೇಶಾಂಗ ನೀತಿಯನ್ನು ಅಮೆರಿಕದ ನೀತಿಗಳಿಗೆ ಲಗತ್ತಿಸಿ, ಅಧೀನಗೊಳಿಸುತ್ತದೆ ಎಂಬ ತಾತ್ವಿಕ ನಿಲುವನ್ನು ಎತ್ತಿಹಿಡಿದು ಎಡಪಕ್ಷಗಳು ವಿರೋಧಿಸುತ್ತ ಬಂದಿದ್ದವು. ಸಾಕಷ್ಟು ವಾದ ವಿವಾದಗಳನ್ನೆಬ್ಬಿಸಿದ ಈ ಒಪ್ಪಂದವನ್ನು ಅನುಷ್ಠಾನಗೊಳಿಸಲು ಮನಮೋಹನ ಸಿಂಗ್ ಸರಕಾರ ಉದ್ಯುಕ್ತವಾಗಿರುವ ಹಿನ್ನೆಲೆಯಲ್ಲಿ, ಸರಕಾರಕ್ಕೆ ಬಾಹ್ಯ ಬೆಂಬಲ ನೀಡುತ್ತಿದ್ದ ಎಡ ಪಕ್ಷಗಳು ವಿಧಿವತ್ತಾಗಿ ಬೆಂಬಲವನ್ನು ಹಿಂತೆಗೆದುಕೊಂಡಿವೆ. ಬಹುಮತ ಕಳೆದುಕೊಂಡಿರುವ ಸರಕಾರ ಈಗ ಅಧಿಕಾರ ಉಳಿಸಿಕೊಳ್ಳುವ ಪರದಾಟದಲ್ಲಿ ತೊಡಗಿದೆ. ಸಂಖ್ಯಾಬಲ ಕುದುರಿಸುವುದರಲ್ಲಿ ಕಾಂಗ್ರೆಸ್ ಪಕ್ಷದ ಕಸರತ್ತಿನ ಫಲಿತಾಂಶ ಏನೇ ಆಗಿರಲಿ, ಪರಮಾಣು ಒಪ್ಪಂದದ ವಿಚಾರದಲ್ಲಿ ಮನಮೋಹನ ಸಿಂಗ್ ಸರಕಾರದ ವಂಚನೆ ಬಯಲಾಗಿದೆ. ರಾಷ್ಟ್ರದ ಹಿತಕ್ಕಿಂತ ಅಮೆರಿಕಾದ ಅಧ್ಯಕ್ಷ ಜಾರ್ಜ್ ಬುಷ್ ಬಗ್ಗೆ ಹೊಂದಿರುವ ನಿಷ್ಠೆಯೇ ಮೇಲುಗೈ ಪಡೆದಿದೆ. ಅಮೆರಿಕಾದ ಉಪ್ಪುಂಡಿರುವ ಮನಮೋಹನ ಸಿಂಗ್‌ರಿಂದ ಇಂಥ ಸ್ವಾಮಿನಿಷ್ಠೆ ಅನಿರೀಕ್ಷಿತವೇನಲ್ಲ. ಒಪ್ಪಂದವನ್ನು ಅನುಷ್ಠಾನಗೊಳಿಸುವುದರಲ್ಲಿ ಸಫಲಗೊಂಡರೆ, ಅದು ಇತಿಹಾಸದಲ್ಲಿ ಭಾರತದ ಜನತೆಗೆ ಎಸಗಿದ ಬಹು ದೊಡ್ಡ ದ್ರೋಹವಾಗಿ ದಾಖಲೆಯಾಗುತ್ತದೆ. ನಾಲ್ಕೂವರೆ ವರ್ಷಗಳ ಆಡಳಿತಾವಧಿಯಲ್ಲಿ ಮನಮೋಹನ ಸಿಂಗ್ ನೇತೃತ್ವದ ಯು.ಪಿ.ಎ ಸರ್ಕಾರ ಜನತೆಗೆ ನೀಡಿರುವ ಕೊಡುಗೆ ಹಣದುಬ್ಬರ, ಅಗತ್ಯವಸ್ತುಗಳ ಬೆಲೆ ಏರಿಕೆ ಮತ್ತು ಸ್ವತಂತ್ರ ವಿದೇಶಾಂಗ ನೀತಿಯನ್ನು ಅಮೆರಿಕಾಗೆ ಒತ್ತೆ ಇರಿಸಿದ್ದಾಗಿ ದಾಖಲೆಯಾಗುತ್ತದೆ. ಅಮೆರಿಕಾ ಅಧ್ಯಕ್ಷ ಜಾರ್ಜ್ ಬುಷ್‌ಗೆ ಅಧಿಕಾರಾವಧಿಯ ಕೊನೆಯ ದಿನಗಳಲ್ಲಿ ಭಾರತದಂಥ ದೇಶವನ್ನು ತನ್ನ ಬುಟ್ಟಿಗೆ ಹಾಕಿಕೊಂಡ ಸಾಧನೆಯೂ ಆಗುತ್ತದೆ.

೧೨೩ ಒಪ್ಪಂದದ ಗುಣದೋಷಗಳ ಕುರಿತು ಸಾಕಷ್ಟು ಚರ್ಚೆಯಾಗಿದೆ. ಅದನ್ನು ಕುರಿತು ಇಲ್ಲಿ ಮತ್ತೆ ಪ್ರಸ್ತಾಪ ಮಾಡುವುದು ಅನಗತ್ಯ. ಇಡೀ ವ್ಯವಹಾರದಲ್ಲಿ ಸರಕಾರ ಪಾರದರ್ಶಕವಾಗಿ ನಡೆದುಕೊಂಡಿಲ್ಲ ಎನ್ನುವುದು ಸ್ಪಷ್ಟವಾಗಿದೆ. ದೇಶದ ಭವಿಷ್ಯವನ್ನು ಸ್ವಾತಂತ್ರ್ಯ, ಸಾರ್ವಭೌಮತ್ವವನ್ನು ಆತಂಕಕ್ಕೀಡುಮಾಡುವಂಥ ವಿಷಯದಲ್ಲಿ ಸರಕಾರ ಗೋಪ್ಯತೆಯನ್ನು ಎತ್ತಿಹಿಡಿದಿರುವುದು ಜನತೆಗೆ ಎಸಗಿರುವ ಅಪಚಾರವಾಗಿದೆ. ಎಡಪಕ್ಷಗಳ ಜೊತೆ ಮಾತುಕತೆಯ ಅಣಕವಾಡಿ ಕೈಕೊಟ್ಟ ಸರಕಾರ ಈಗ ಅಗತ್ಯ ಬೆಂಬಲ ಪಡೆಯಲು ಅಪ್ಯವಹಾರದಲ್ಲಿ ತೊಡಗಿದೆ. ಅಮೆರಿಕಾದ ಒತ್ತಡ ಹೇರುವ ತಂತ್ರಗಳ ಪರಿಣಾಮ ಇದು ಎನ್ನುವುದರಲ್ಲಿ ಸಂದೇಹವಿಲ್ಲ. ಆ ರಾಷ್ಟ್ರ ತನಗೆ ಬೇಕಾದ್ದನ್ನು ಪಡೆದುಕೊಳ್ಳಲು, ಅಂದರೆ ಅನ್ಯದೇಶಗಳನ್ನು ಬಲೆಗೆ ಹಾಕಿಕೊಳ್ಳಲು ಸಾಮ, ಭೇದ, ದಂಡ ನೀತಿಯನ್ನು ಯಥೇಚ್ಛವಾಗಿ ಬಳಸುತ್ತದೆ. ಸೋವಿಯತ್ ಒಕ್ಕೂಟದ ವಿಘಟನೆ ಅದಕ್ಕೆ ಉದಾಹರಣೆ. ತನ್ನ ಅಧಿನಾಯಕತ್ವದ ಹಂಚಿಕೆಗಳಿಗೆ ಅಡ್ಡಿಯಾಗಬಲ್ಲ ದೇಶಗಳ ಮೇಲೆ ಅಮೆರಿಕಾ ದುರಾಕ್ರಮಣ ನಡೆಸಲು ಹಿಂಜರಿಯದು ಎನ್ನುವುದಕ್ಕೆ ಆಫ್ಘಾನಿಸ್ತಾನ, ಇರಾಕ್‌ಗಳಿಗಿಂತ ನಿದರ್ಶನ ಬೇಕೆ? ಹಾಗಾಗಿ, ಬುಷ್ ಸರಕಾರ ನಿರಂತರ ನ್ಯೂಕ್ಲಿಯರ್ ಇಂಧನ ಸರಬರಾಜಿನ ಆಮಿಷ ಒಡ್ಡಿ ಮನಮೋಹನ ಸಿಂಗ್ ಸರಕಾರವನ್ನು ಬುಟ್ಟಿಗೆ ಹಾಕಿಕೊಂಡಿದೆ. ಮೊದಲ ಜಂಟಿ ಹೇಳಿಕೆಯಲ್ಲಿ ನಾಗರಿಕ ಪರಮಾಣು ಸಹಕಾರ ಒಪ್ಪಂದದ ಪ್ರಸ್ತಾಪ ಬಂದಾಗಲೇ ಎಡಪಕ್ಷಗಳು ಅವನ್ನು ತೀವ್ರವಾಗಿ ವಿರೋಧಿಸಿದ್ದವು. ಅವು ಅಮೆರಿಕಾ ಒಪ್ಪಂದವನ್ನು ತಿರಸ್ಕರಿಸಲು ಆಗಿನಿಂದಲೂ ಒತ್ತಡ ತರುತ್ತ ಬಂದಿವೆ. ಮನಮೋಹನ ಸಿಂಗ್ ಸರಕಾರ ಹಾಗೂ ಕಾಂಗ್ರೆಸ್ ಪಕ್ಷ ದೇಶದ ಹಿತದೃಷ್ಟಿಯಿಂದ ಇದು ಪರಮಾಯಿಷಿ ಅವಕಾಶ, ಅಮೆರಿಕದೊಂದಿಗೆ ಒಪ್ಪಂದ ಮಾಡಿಕೊಳ್ಳುವುದರಿಂದ ದೇಶದ ವಿದ್ಯುಚ್ಛಕ್ತಿ ಸಮಸ್ಯೆ ಬಗೆಹರಿದು, ಯಥೇಚ್ಛವಾಗಿ ಬಂಡವಾಳ ಹೂಡಿಕೆಯಾಗಿ, ಸಮೃದ್ಧಿಯಾಗುವುದು ಎಂದು ಪೊಳ್ಳುಪ್ರಚಾರ ನಡೆಸುತ್ತಿವೆ. ಭಾರತದಲ್ಲಿರುವ ಅಮೆರಿಕಾದ ರಾಯಭಾರಿ ರಾಜತಾಂತ್ರಿಕ ನಿಬಂಧನೆಗಳನ್ನು ಗಾಳಿಗೆ ತೂರಿ ಬೇರೆ ಬೇರೆ ರಾಜಕಾರಣಿಗಳನ್ನು ವೈಯಕ್ತಿಕವಾಗಿ ಭೆಟ್ಟಿಯಾಗಿ ಒಪ್ಪಂದದ ಜಾರಿಗೆ ಮನವೊಲಿಸಲು ಪ್ರಯತ್ನಿಸಿದ್ದಾರೆ. ಅಮೆರಿಕಾದ ವಿದೇಶಾಂಗ ಇಲಾಖೆಯ ಅಧಿಕಾರಿಗಳು, ಕಾಂಗ್ರೆಸ್ ಸದನದ ಸದಸ್ಯರು, ಸೆನೆಟರುಗಳು ಒಂದಲ್ಲ ಒಂದು ನೆಪವೊಡ್ಡಿ ಭಾರತಕ್ಕೆ ಬಂದು ಪರಮಾಣು ಒಪ್ಪಂದದ ಗುಣಗಾನ ಮಾಡಿ, ರಾಜಕಾರಣಿಗಳ ಮೇಲೆ ಪ್ರಭಾವ ಬೀರುತ್ತ ಬಂದಿದ್ದಾರೆ. ಇತ್ತೀಚೆಗೆ, ಎಂದರೆ ಮನಮೋಹನ ಸಿಂಗ್ ಜಿ-೮ ಶೃಂಗಸಭೆಯಲ್ಲಿ ಪಾಲ್ಗೊಳ್ಳಲು ತೆರಳುವುದಕ್ಕೆ ಕೆಲವು ದಿನಗಳ ಹಿಂದೆ ಗೇರಿ ಅಕೆರ್ಮನ್ ನೇತೃತ್ವದಲ್ಲಿ ಭಾರತಕ್ಕೆ ಆಗಮಿಸಿದ ಅಮೆರಿಕಾ ಕಾಂಗ್ರೆಸ್ ಸದಸ್ಯರ ನಿಯೋಗವು ಪ್ರಧಾನಿಯನ್ನು ಭೇಟಿಯಾಗಿ ಕಾಲ ಮೀರುವುದಕ್ಕೆ ಮುನ್ನ ಭಾರತ ನಾಗರಿಕ ಪರಮಾಣು ಒಪ್ಪಂದವನ್ನು ಜಾರಿಗೊಳಿಸಲು ತುರ್ತುಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಿತ್ತು. ಅಕೆರ್ಮನ್ ಭಾರತ ಇರಾನಿನ ಬಗ್ಗೆ ತನ್ನ ನೀತಿಯನ್ನು ಪುನರ್‌ಪರಿಶೀಲಿಸಬೇಕೆಂದೂ ಬಹಿರಂಗವಾಗಿಯೇ ಸೂಚಿಸಿದರು. ಈ ನಿಯೋಗದ ಸದಸ್ಯರು ಇತರ ರಾಜಕಾರಣಿಗಳನ್ನು ಭೇಟಿಯಾಗಿದ್ದರು. ಅವರ ಪೈಕಿ ಸಮಾಜವಾದಿ ಪಕ್ಷದ ವರಿಷ್ಠರೂ ಇದ್ದರು ಎನ್ನುವುದರಲ್ಲಿ ಅನುಮಾನವಿಲ್ಲ. ಜಪಾನಿನಲ್ಲಿ ಇಳಿದ ಮನಮೋಹನ ಸಿಂಗ್ ಒಪ್ಪಂದದ ಕುರಿತು ಅಂತಾರಾಷ್ಟ್ರೀಯ ಪರಮಾಣು ಸಂಸ್ಥೆಯ ಮುಂದೆ ಹೋಗುವ ಸರಕಾರದ ನಿರ್ಧಾರವನ್ನು ಪ್ರಕಟಿಸಿದ್ದು ಈ ಭೇಟಿಗಳ ನಂತರ. ಪ್ರಾಯಶಃ ಭಾರತದಲ್ಲಿ ಪ್ರಕಟಣೆ ನೀಡಲು ಅವರಿಗೆ ಹಿಂಜರಿಕೆ ಇತ್ತೇನೋ! ಎಡಪಕ್ಷಗಳೊಂದಿಗೆ ಒಪ್ಪಂದದ ವಿಚಾರದಲ್ಲಿ ಏಕಾಭಿಪ್ರಾಯ ಮೂಡಿಸುವವರೆಗೆ ಮುಂದುವರಿಯುವುದಿಲ್ಲ ಎನ್ನುವ ಆಶ್ವಾಸನೆಯನ್ನು ಮುರಿದಾಯಿತು. ಸರಕಾರ ವಿಶ್ವಾಸಮತ ಕೋರುವವರೆಗೆ ಅಂತಾರಾಷ್ಟ್ರೀಯ ಪರಮಾಣು ಸಂಸ್ಥೆಯ ಮುಂದೆ ಹೋಗುವುದಿಲ್ಲ ಎಂದು ಹೇಳಿತ್ತು. ಆದರೆ ಈಗ ದಿಢೀರ್ ಎಂದು ಐಎಇಎಗೆ ಪ್ರಸ್ತಾವ ಸಲ್ಲಿಸಿದೆ. ಎಲ್ಲಿಲ್ಲದ ಆತುರ ಸರಕಾರಕ್ಕೆ. ಮನಮೋಹನ ಸಿಂಗ್ ಮತ್ತು ಜಾರ್ಜ್ ಬುಷ್ ಭೇಟಿಯ ಫಲಶ್ರುತಿ ಇದು ಎಂಬುದು ಸ್ಪಷ್ಟ. ಈ ಭೇಟಿಯಲ್ಲಿ ಏನು ರಹಸ್ಯ ಅಡಗಿದೆಯೋ!

ಕಾಂಗ್ರೆಸ್ ನಾಯಕರು ಹೇಗಾದರೂ ಮಾಡಿ ಪಾರ್ಲಿಮೆಂಟ್‌ನಲ್ಲಿ ಬಹುಮತ ಸಾಬೀತು ಮಾಡಲು ಸಣ್ಣ ಪುಟ್ಟ ಪಕ್ಷಗಳ ಮೊರೆಹೋಗಲಿದ್ದಾರೆ. ಕೆಲ ದಿನಗಳ ಹಿಂದಷ್ಟೆ ಯುಪಿ ಸರಕಾರದ ವಿರುದ್ಧ, ಕಾಂಗ್ರೆಸ್‌ನ ವಿರುದ್ಧ, ಕಿಡಿಕಾರುತ್ತಿದ್ದ ಸಮಾಜವಾದಿ ಪಕ್ಷದ ನಾಯಕರು ಈಗ 'ರಾಷ್ಟ್ರದ ಹಿತಾಸಕ್ತಿ' ಹೆಸರಿನಲ್ಲಿ ಹಠಾತ್ ಪರಿವರ್ತನೆ ಹೊಂದಿ ಸರಕಾರದ ಬೆಂಬಲಕ್ಕೆ ನಿಂತಿದ್ದಾರೆ. ತೆರೆಮರೆಯ ಹಿಂದೆ ಏನು ವ್ಯವಹಾರ ನಡೆದಿದೆಯೋ ಕಾದುನೋಡಬೇಕಾಗಿದೆ. ಆ ಧೈರ್ಯದ ಮೇಲೆ ಸರಕಾರ ಸ್ವಾಮಿನಿಷ್ಠೆಯಿಂದ ಜಾರ್ಜ್ ಬುಷ್ ವಚನ ಪಾಲಿಸಲು ತುದಿಗಾಲ ಮೇಲೆ ನಿಂತಿದೆ. ಈಗ ಸರಕಾರ ಗೋಪ್ಯತೆಯ ಹೆಸರಿನಲ್ಲಿ ಒಪ್ಪಂದದ ಸೂಕ್ಷ್ಮಗಳನ್ನು ಬಹಿರಂಗಗೊಳಿಸದೆ ಜನತೆಯನ್ನು ವಂಚಿಸಿದೆ. ದೇಶದ ಸ್ವಾತಂತ್ರ್ಯವನ್ನು, ಸಾರ್ವಭೌಮತ್ವವನ್ನು ಅಮೆರಿಕಾದ ಅಡಿಯಾಳಾಗಿಸುವ ಕಾರ್ಯವನ್ನು ಪೂರೈಸಲು ಮನಮೋಹನ ಸಿಂಗ್ ಆತುರದಲ್ಲಿದ್ದಾರೆ. ಬೆಲೆ ಏರಿಕೆಯಿಂದ ತತ್ತರಿಸುತ್ತಿರುವ ಜನಸಾಮಾನ್ಯರ ಹಿತ ಕಾಪಾಡುವುದಕ್ಕಿಂತ ಹೆಚ್ಚಾಗಿ ಪರಮಾಣು ಒಪ್ಪಂದ ಜಾರಿಗೆ ತರುವುದು ಸರಕಾರಕ್ಕೆ ಮುಖ್ಯವಾಗಿಬಿಟ್ಟಿದೆ. ಇಂಥ ಸರಕಾರ ಇದ್ದರೂ ಒಂದೇ, ಬಿದ್ದರೂ ಒಂದೆ.

(೨೦-೦೭-೨೦೦೮)

ಸೀಯಾರ್ಕೆ
'ಚೌಬೀಸ', ೪೮೯
ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ
ಬೆಂಗಳೂರು - ೫೬೦ ೦೮೫



# ಸಾರ್ಥಕ ಬದುಕು

## ನಾಗಮಣಿ ಎಸ್. ರಾವ್



ಕೆಲವು ವಿಶಿಷ್ಟ ವ್ಯಕ್ತಿಗಳನ್ನು ನೆನೆದಾಗ ಮನದಲ್ಲೇನೋ ತಂಪು ತಂಪು. ಒಳಗೊಳಗೇ ಒಂದು ರೀತಿಯ ಖುಷಿ – ಅವರುಗಳು ಸತ್ತು ಹತ್ತು ಹಲವಾರು ವರ್ಷಗಳಾಗಿದ್ದರೂ ನೆನಪಿನಲ್ಲಿ ಸದಾ ಹಸಿರು. ದಿವಂಗತ ಪಿ. ಆರ್. ಜಯಲಕ್ಷ್ಮಮ್ಮನವರು ಇಂತಹ ವ್ಯಕ್ತಿಗಳ ಗುಂಪಿಗೆ ಸೇರಿದವರು. ಇದೇ ಜುಲೈ (೨೦೦೮) ತಿಂಗಳ ೬ರಂದು ಪಿ.ಆರ್.ಜೆ. ಅವರ ಜನ್ಮ ಶತಮಾನೋತ್ಸವವನ್ನು ಅವರ ಕುಟುಂಬ ವರ್ಗದವರೂ, ಅಭಿಮಾನಿಗಳೂ ಆಚರಿಸಿ ಸಂಭ್ರಮಿಸಿದರು.

೨೦ನೇ ಶತಮಾನದ ಆದಿಯಲ್ಲಿ ಅಂದರೆ ೧೯೦೮ರಲ್ಲಿ ಜನಿಸಿದ ಜಯಲಕ್ಷ್ಮಮ್ಮನವರು ಆ ಶತಮಾನ ದುದ್ದಕ್ಕೂ ೮೩ ವರ್ಷಗಳ ಕಾಲ (ನಿಧನ : ೧೯೯೧) ಸಾರ್ಥಕ ಬದುಕಿನ ಒಡೆಯರಾಗಿದ್ದವರು. ಆ ಶತಮಾನದ ಆದಿ ಅಂತ್ಯಗಳ ವೈವಿಧ್ಯತೆ ಮತ್ತು ವೈರುಧ್ಯಗಳಿಗೆ ಸಾಕಾರ ರೂಪವಾಗಿ ನಿಂತವರು.

ತಾವು ಹುಟ್ಟಿ ಬೆಳೆದ ಸಂಸ್ಕೃತಿ ಹಾಗೂ ಕಟ್ಟುನಿಟ್ಟಿನ ಸಂಪ್ರದಾಯವನ್ನು ಮನಸಾ ಅಂಗೀಕರಿಸಿ ಬದುಕಿನ ಅಂತ್ಯದವರೆಗೂ ವೈಯಕ್ತಿಕ ನೆಲೆಯಲ್ಲಿ ಅದರಂತೆ ನಡೆದುಕೊಂಡವರು. ಆದರೆ ಬದಲಾಗುತ್ತಿದ್ದ ಸಮಾಜದ ಧೋರಣೆಯನ್ನು ಅರ್ಥಮಾಡಿಕೊಂಡು ಪ್ರಗತಿಪರ ವಿಚಾರಗಳಿಗೆ ಅವರು ತಮ್ಮನ್ನು ತೆರೆದುಕೊಂಡು, ಸಮರಸ ಕಂಡುಕೊಂಡ ರೀತಿ ಅನನ್ಯ. ಸಮಾಜಮುಖಿಯಾದ ಈ ಸಂಪ್ರದಾಯಸ್ಥೆ ಎರಡೂ ಸಂಸ್ಕೃತಿಗಳ ಹೊಂದಾಣಿಕೆಯಲ್ಲಿ ಮೆರೆದವರು. ಇದು ಅವರ ಬದುಕಿನ ಬಹುಮುಖ್ಯ ಅಂಶ ಎಂದರೆ ತಪ್ಪಾಗಲಾರದು.

ಶ್ರೀಮಂತ ಕುಟುಂಬದಲ್ಲಿ ಹುಟ್ಟಿ ಹನ್ನೆರಡು ವರ್ಷ ತುಂಬುವ ಮೊದಲೇ ಮದುವೆ ಮಾಡಿಸಿಕೊಂಡು ಅತ್ತೆ ಮನೆಗೆ ಬಂದ ಈ ಬಾಲೆಯ ಗಂಡ ಹೆಸರಾಂತ ಪತ್ರಕರ್ತ, ಗಾಂಧೀವಾದಿ, ಅಂದಿನ ಧ್ಯೇಯನಿಷ್ಠ 'ತಾಯಿನಾಡು' ಪತ್ರಿಕೆಯ ರೂವಾರಿ ದಿವಂಗತ ಪಿ. ಆರ್. ರಾಮಯ್ಯನವರು. ಮಹಾತ್ಮ ಗಾಂಧೀಜಿಯವರ ಆದರ್ಶಗಳಿಗೆ ಮಾರುಹೋಗಿ ದೇಶದ ಸ್ವಾತಂತ್ರ್ಯ ಸಮರಕ್ಕೆ ಧುಮುಕಿದ ಅಸಂಖ್ಯಾತ ಯುವಕರಲ್ಲಿ ರಾಮಯ್ಯನವರೂ ಒಬ್ಬರು. ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಕೆಮಿಸ್ಟ್ರಿ ಎಂ.ಎಸ್‌ಸಿ. ತರಗತಿಯ ಕೊನೆಯ ಹಂತದಲ್ಲಿದ್ದ ಈ ಶಿಸ್ತಿನ ಸಿಪಾಯಿ ಕಾಲೇಜು ಬಿಟ್ಟು ಜೀವನಕ್ಕಾಗಿ ಹಿಂದಿ ಅಧ್ಯಾಪಕನಾಗಿ ರಾಜ್ಯಕ್ಕೆ ಹಿಂದಿರುಗಿದರು.

ಜಯಲಕ್ಷ್ಮಮ್ಮನವರ ಬದುಕಿನಲ್ಲಿ ಇದು ಮೊದಲ ತಿರುವು. ತಂದೆಯ ಮನೆಯ ಶ್ರೀಮಂತ ನೆಮ್ಮದಿಯ ಪರಿಸರದಿಂದ ಈ ಬಡ ಹಿಂದಿ ಅಧ್ಯಾಪಕನ ಜೊತೆಯ ಕಷ್ಟದ ಬದುಕಿಗೆ ಅವರು ಹೊಂದಿಕೊಳ್ಳಬೇಕಾಯಿತು. ಆ ವೇಳೆಗಾಗಲೇ ರಾಮಯ್ಯವರಿಗೆ ಮದುವೆಯಾಗಿ ಮೊದಲ ಹೆಂಡತಿಯೂ ಇದ್ದರು. ಈ ಆದರ್ಶ ಯುವಕ ಹೀಗೇಕೆ ಮಾಡಿದ? – ಎಂಬ ಪ್ರಶ್ನೆ ಮೂಡುವುದು ಸ್ವಾಭಾವಿಕವೇ. ಜಯಲಕ್ಷ್ಮಮ್ಮನವರಿಗೂ ಅವರ ಪತಿಗೂ ಹನ್ನೆರಡು ವರ್ಷಗಳ ಅಂತರ. ಬಹುಶಃ ಅಲ್ಲಿಯವರೆಗೆ ಮಕ್ಕಳಾಗದಿದ್ದುದರಿಂದ ಹಿರಿಯರ ಬಲವಂತದಿಂದ ಈ ಎರಡನೇ ಮದುವೆಯಾಗಿರಬೇಕು ಎಂಬ ವಾದಕ್ಕೆ ಪುಷ್ಟಿ ದೊರೆಯುತ್ತದೆ. ದೊಡ್ಡ ಅವಿಭಕ್ತ ಕುಟುಂಬ. ಅತ್ತೆ, ಮಾವ, ರಾಮಯ್ಯನವರ ನಾಲ್ಕು ಸೋದರರು, ಬಂದುಹೋಗುತ್ತಿದ್ದ ನೆಂಟರು – ಹೀಗೆ ದೊಡ್ಡ ಕುಟುಂಬ. ಈ ತುಂಬಿದ ಸಂಸಾರಕ್ಕೆ ಪುಟ್ಟ ಸೊಸೆಯಾಗಿ ಬಂದ ಜಯಲಕ್ಷ್ಮಿ ತನ್ನ ಹೃದಯವಂತಿಕೆಯಿಂದ ಎಲ್ಲರ ಮನ ಗೆದ್ದಳು. ರಾಮಯ್ಯನವರ ಈ ಇಬ್ಬರು ಹೆಂಡತಿಯರೂ ತುಂಬ ಅನ್ಯೋನ್ಯವಾಗಿ ಸ್ನೇಹಿತೆಯರಂತೆ ಇದ್ದರು ಎಂಬ ವಿಷಯ ಅಂದಿನ ಮುಗ್ಧ, ನಿಷ್ಕಪಟ, ಸರಳ ನಡತೆಗೆ ಉದಾಹರಣೆಯಾಗುತ್ತದೆ.

ಪಿ. ಆರ್. ಜಯಲಕ್ಷ್ಮಮ್ಮನವರು ಆ ಮನೆಯಲ್ಲಿ ತಮ್ಮ ಅಸ್ತಿತ್ವ ಕಂಡುಕೊಂಡಂತೆ, ಕುಟುಂಬಕ್ಕಷ್ಟೇ ಅಲ್ಲ ಇಡೀ ಸಮಾಜಕ್ಕೆ ಅಮ್ಮನಂತೆ, ಅಕ್ಕನಂತೆ ನೆರವಾಗಿ 'ಅಕ್ಕಮ್ಮ' ಎಂದೇ ಎಲ್ಲರಿಂದ ಕರೆಸಿಕೊಂಡರು. ಪರಸ್ಥಳಗಳಿಂದ ನೆರವು ಕೇಳಿ ಬಂದ ದೀನ ದಲಿತರಿಗೆ, ಬಡವಿದ್ಯಾರ್ಥಿಗಳಿಗೆ, ವಿಧವೆಯರಿಗೆ ಹಾಗೂ ಕಷ್ಟದ ಪರಿಸ್ಥಿತಿಯಲ್ಲಿರುವ ಯಾರೇ ಆಗಲಿ, ಯಾವ ಜಾತಿಯವರೇ ಆಗಿರಲಿ, ಅವರಿಗೆಲ್ಲ ಅಕ್ಕಮ್ಮ ನೆರವಾದ ಬಗೆ ಅನನ್ಯ. ಅವರ ಮನೆ ದೊಡ್ಡ ಛತ್ರದಂತೆ. ಅದರ ಪಾರುಪತ್ತೇದಾರರು ಅವರೇ. ತಮ್ಮ ಮನೆಯಲ್ಲಿಯೇ ಕೆಲವು ದಿನ (ಅದು ತಿಂಗಳಾಗಬಹುದು ವರ್ಷಗಳೂ ಆಗಬಹುದು) ಆಶ್ರಯ ನೀಡಿ, ನಂತರದ ದಿನಗಳಲ್ಲಿ ಸೂಕ್ತವಾದ ರೀತಿಯಲ್ಲಿ ಶಾಶ್ವತ ನೆಲೆ ಕಲ್ಪಿಸಲು ಪ್ರಯತ್ನಿಸುತ್ತಿದ್ದ ಅಂದಿನ ದಿನಗಳಲ್ಲಿ ಸರಿಸುಮಾರು ೪೦ ಜನರಾದರೂ ಅವರ ಮನೆಯಲ್ಲಿ ಯಾವಾಗಲೂ ಇರುತ್ತಿದ್ದರಂತೆ. ಈ ವೇಳೆಗೆ ಪಿ. ಆರ್. ರಾಮಯ್ಯನವರ 'ತಾಯಿನಾಡು' ಪತ್ರಿಕೆಯೂ ತುಂಬ ಪ್ರವರ್ಧಮಾನಕ್ಕೆ ಬಂದಿದ್ದು, ರಾಮಯ್ಯನವರು ಬಸವನಗುಡಿಯಲ್ಲಿ ದೊಡ್ಡಮನೆ ಕಟ್ಟಿಸಿದ್ದರು. ಈ ಮನೆಯ ಹೆಸರು ''ಶ್ರೀಶೈಲ ನಿಲಯ''. ಅಕ್ಕಮ್ಮನ ಆಸರೆಯ ಎಲ್ಲ ಜನರನ್ನೂ ತನ್ನ ಹೊಟ್ಟೆಯಲ್ಲಿ ತುಂಬಿಕೊಂಡು ಪೊರೆದ ಸ್ಥಾನ.

ಈ ಮನೆಯಲ್ಲಿದ್ದ ಸ್ಥಾವರ ಅತಿಥಿಗಳ ಜೊತೆ ವಾರಾನ್ನದ ಜಂಗಮ ಅತಿಥಿಗಳಿಗೂ ಸದಾ ಸ್ವಾಗತ. ಈಗ ಈ ಹುಡುಗರೆಲ್ಲ ಭಾರತದಲ್ಲಷ್ಟೇ ಅಲ್ಲ, ವಿದೇಶಗಳಲ್ಲೂ ಹೆಸರು ಮಾಡಿ ಒಳ್ಳೆಯ ಸ್ಥಾನ ಅಧಿಕಾರಗಳಲ್ಲಿ ಕಾರ್ಯ ನಿರ್ವಹಿಸಿದ್ದಾರೆ.

ಬೆಂಗಳೂರಿಗೆ ಕಾವೇರಿ ನೀರು ಇನ್ನೂ ಬಂದಿರದಿದ್ದ ಕಾಲ. ಎಲ್ಲ ತಿಪ್ಪಗೊಂಡನಹಳ್ಳಿ ಜಲಾಶಯದಿಂದಲೇ ಸರಬರಾಜಾಗಬೇಕಿತ್ತು. ಅನೇಕ ವಿಭಾಗಗಳಲ್ಲಿ ದಿನಗಟ್ಟಲೆ ನಲ್ಲಿಗಳು ಒಣಗಿ ಸೊರಗಿಹೋಗುತ್ತಿದ್ದುವು. ಈಗಲೂ ಕೆಲವೆಡೆ ಅದೇ ಸನ್ನಿವೇಶವಿದೆ. ಆದರೆ ಜಯಲಕ್ಷ್ಮಮ್ಮನವರಂತಹ ಜನಾನುರಾಗಿ ನಾಯಕರಿಲ್ಲ, ಸನ್ನಿವೇಶವಿದೆ. ಆಕೆ ಜನಪ್ರತಿನಿಧಿಯಾಗಿ ಮಾಡುತ್ತಿದ್ದ ಕೆಲಸ ಅನನ್ಯವಾದದ್ದು. ನೀರಿನ ಟ್ಯಾಂಕರ್‌ನಲ್ಲಿ ಡ್ರೈವರ್ ಜೊತೆ ಕೂತು ನೀರಿಲ್ಲದ ವಿಭಾಗಕ್ಕೆ ತಾವೇ ನೇರವಾಗಿ ಹೋಗಿ ನೀರು ಹಂಚಿಸುತ್ತಿದ್ದರು. ಅಧಿಕಾರಿಗಳಿಗೆ ಆಜ್ಞೆ ನೀಡಿ ಸುಮ್ಮನೆ ಕೂಡುವ ಸ್ವಭಾವ ಅವರದಾಗಿರಲಿಲ್ಲ, ಅಂತಹ ಉನ್ನತ ಮಟ್ಟದ ಜನಪ್ರತಿನಿಧಿಯನ್ನು ಪರಿಚಯಿಸಿದ್ದಾರೆ. ಬೆಂಗಳೂರು ಆಕಾಶವಾಣಿ ನಿಲಯಕ್ಕೆ ಸೊಬಗನ್ನು ತಂದಿತ್ತಿದ್ದ ಶ್ರೀಮತಿ ನಾಗಮಣಿ ಎಸ್. ರಾವ್ ಅವರು – ಶ್ರೀಮತಿ ಜಯಲಕ್ಷ್ಮಮ್ಮನವರ ಶತಮಾನೋತ್ಸವ ಸಂದರ್ಭದಲ್ಲಿ



*ನಮ್ಮ ಹಿಂದಿನ ಭೇಟಿ ನೆನಪಿದೆಯಾ ?*

ಅಕ್ಕಮ್ಮನ ಹೆಸರು ಕೇಳಿದೊಡನೆಯೇ ಕಣ್ಣಂಚಿನಲ್ಲಿ ಕೃತಜ್ಞತೆಯ ಕಣ್ಣೀರು ಒರೆಸಿಕೊಳ್ಳುತ್ತಾರೆ. ಬೆಂಗಳೂರಿನ ಸುಪ್ರಸಿದ್ಧ ಎನ್.ಎಂ.ಕೆ.ಆರ್.ವಿ. ಕಾಲೇಜಿನ ರೂವಾರಿ ದಿವಂಗತ ಸಿ. ಎನ್. ಮಂಗಳಾ ಅವರ ತಂದೆ ಶ್ರೀ ಸಿ. ನರಸಿಂಹಮೂರ್ತಿಯವರು (ಮುಂದೆ ಐ.ಎ.ಎಸ್. ಅಧಿಕಾರಿ ಯಾದವರು) ಸಹ ಅಕ್ಕಮ್ಮನ ವಾತ್ಸಲ್ಯದ ಸವಿ ಉಂಡವರು. ಈ ಸೂಕ್ಷ್ಮ ಮನಸ್ಸಿನ ಎಳೆಯ ಹುಡುಗ ಹೊತ್ತಾಯಿತೆಂದು ಊಟಮಾಡದೇ ಎಲ್ಲಿ ಹೊರಟುಬಿಡುವನೋ ಎಂಬ ಆತಂಕ ಅಕ್ಕಮ್ಮನದು. ಹಾಗಾಗಿ ಅಡಿಗೆ ತಡವಾದ ದಿನಗಳಲ್ಲಿ ಬಿಸಿಬಿಸಿ ಅನ್ನವನ್ನು ಆರಿಸಿ ಕಲಸಿಟ್ಟುಕೊಂಡು, ಒಂದು ತಾಲಿ ನೀರೂ ಇಟ್ಟುಕೊಂಡು ಕಾದಿದ್ದು, ಈ ಹುಡುಗ ಬಂದೊಡನೇ ಕೈತುತ್ತು ಹಾಕಿ ಕಳುಹಿಸುತ್ತಿದ್ದರಂತೆ. ಸಿ. ಎನ್. ಮಂಗಳಾ ಇದನ್ನು ಮತ್ತೆ ಮತ್ತೆ ಜ್ಞಾಪಿಸಿಕೊಳ್ಳುತ್ತಿದ್ದರು. ಬಡ ಹುಡುಗರ ಬಗ್ಗೆ ಜಯಲಕ್ಷ್ಮಮ್ಮನವರ ಕಳಕಳಿ ಆ ಮಟ್ಟದ್ದು.

ಎಲ್ಲರ ಕಷ್ಟಗಳೂ ನಿವಾರಣೆಯಾಗಬೇಕು. ಎಲ್ಲರೂ ನೆಮ್ಮದಿಯಿಂದ ಜೀವನ ನಡೆಸು ವಂತಾಗಬೇಕು. ಶ್ರೀಮಂತರಿಗೆ ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ಶಕ್ತಿ ಇರುತ್ತದೆ. ಆದ್ದರಿಂದ ಬಡಜನರ ಬಗ್ಗೆ ಹೆಚ್ಚಿನ ಗಮನ ಹರಿಸುವುದು ಅಗತ್ಯ. ಸರ್ಕಾರ ವಿವಿಧ ಸೇವಾಸಂಸ್ಥೆಗಳನ್ನು ಸದುದ್ದೇಶದಿಂದ ಆರಂಭಿಸುತ್ತದೆ. ಆದರೆ ಸೇವಾಮನೋಭಾವದಿಂದ ಕಾರ್ಯ ನಿರ್ವಹಿಸುವವರು ಇಲ್ಲದಿದ್ದರೆ, ಇಂತಹ ಸಂಸ್ಥೆಗಳು ನಿಷ್ಪ್ರಯೋಜಕವಾಗಿ ಬಿಡುತ್ತವೆ ಎಂದು ಯೋಚಿಸುತ್ತಿದ್ದ ಜಯಲಕ್ಷ್ಮಮ್ಮನವರು ಸಾರ್ವಜನಿಕ ಕ್ಷೇತ್ರಕ್ಕೆ ಪದಾರ್ಪಣ ಮಾಡಿ ಹಲವಾರು ಸಂಘಸಂಸ್ಥೆಗಳಲ್ಲಿ ದುಡಿದರು. ಅಂದಿನ ಬಸವನಗುಡಿ, ಜಯನಗರ ಕ್ಷೇತ್ರದಿಂದ ನಗರಸಭೆ ಚುನಾವಣೆಗಳಲ್ಲಿ ಎರಡು ಬಾರಿ ಸ್ಪರ್ಧಿಸಿ ಕಾರ್ಪೊರೇಟರ್ ಆದರು. ಒಂದು ವರ್ಷ ಡೆಪ್ಯುಟಿ ಮೇಯರ್ ಆಗಿಯೂ ಸೇವೆ ಸಲ್ಲಿಸಿದರು. ೧೯೫೭ರಿಂದ ೧೯೬೪ರ ಒಳಗಿನ ಏಳು ವರ್ಷಗಳಲ್ಲಿ ಅವರು ಪ್ರತಿದಿನ ಬೆಳಿಗ್ಗೆ ಮನೆ ಬಿಟ್ಟರೆ ರಾತ್ರಿಯೇ ಮನೆ ಸೇರುತ್ತಿದ್ದುದು. ತಾವು ಪ್ರತಿನಿಧಿಸುತ್ತಿದ್ದ ಪ್ರತಿ ವಾರ್ಡಿನ ಯೋಗಕ್ಷೇಮ ವಿಚಾರಿಸಿ ಅಗತ್ಯವಾದ ಸೌಲಭ್ಯಗಳನ್ನು – ಅದು ನೀರುಪೂರೈಕೆ ಕಾರ್ಯಕ್ರಮವಾಗಿರಬಹುದು, ರಸ್ತೆ ರಿಪೇರಿಯ ಅಗತ್ಯವಾಗಿರಬಹುದು, ರುದ್ರಭೂಮಿ-ಚಿತಾಗಾರಗಳ ಕೆಲಸವಾಗಿರಬಹುದು, ಮಕ್ಕಳ ಶಾಲೆಗೆ ಆಟದ ಮೈದಾನ ಮಂಜೂರು ಮಾಡಿಸುವ ಕೆಲಸವಾಗಿರಬಹುದು – ಸ್ವತಃ ನಿಂತು ನಡೆಸಿಕೊಡುತ್ತಿದ್ದರು. ಅವರ ಶ್ರದ್ಧೆ, ಶ್ರಮ ಅನಿರ್ಬಂಧಿತ. ರಾಜ್ಯ ಹೈಕೋರ್ಟಿನ ಅಂದಿನ ಮುಖ್ಯ ನ್ಯಾಯಾಧೀಶರಾಗಿದ್ದ ಜಸ್ಟಿಸ್ ಹೊಂಬೇಗೌಡರು ಸಮಾರಂಭವೊಂದರಲ್ಲಿ ಮಾತನಾಡುತ್ತ "ಈ ವಿಲ್ಸನ್ ಗಾರ್ಡನ್ ಪ್ರದೇಶವು ಒಂದು ಕಾಡು ಕೊಂಪೆಯಂತಿತ್ತು. ತಮ್ಮ ಸತತ ಹಾಗೂ ಮಹತ್ತರ ಪ್ರಯತ್ನಗಳಿಂದ ಶ್ರೀಮತಿ ಜಯಲಕ್ಷ್ಮಮ್ಮನವರು ಅದನ್ನು ಸುಂದರ ಬಡಾವಣೆಯಾಗಿ ಪರಿವರ್ತಿಸಿದ್ದಾರೆ" ಎಂದು ಹೇಳಿ ಅವರ ಕಾರ್ಯವನ್ನು ಶ್ಲಾಘಿಸಿದ್ದರಂತೆ.

ಸಮಾಜ ಕಲ್ಯಾಣ ಮಂಡಲಿಯ ಉಪಾಧ್ಯಕ್ಷೆಯಾಗಿಯೂ ಅವರು ಒಳ್ಳೆಯ ಕೆಲಸ ಮಾಡಿದ್ದಾರೆ. ಮಂಜೂರಾದ ಹಣ ವ್ಯರ್ಥವಾಗಬಾರದು; ಯೋಜಿತ ಕಾರ್ಯಗಳು ಸರಿಯಾಗಿ ಕಾರ್ಯಗತವಾಗಬೇಕು ಎಂದು ಸದಾ ಚಿಂತಿಸುತ್ತಿದ್ದ ಅವರು ಆಗಿಂದಾಗ್ಗೆ ಭೇಟಿ ಕೊಟ್ಟು ಪರಿಶೀಲನೆ ನಡೆಸುತ್ತಿದ್ದರು. ಜಯಲಕ್ಷ್ಮಮ್ಮನವರ ಜೊತೆ ಕಾರ್ಯ ನಿರ್ವಹಿಸುತ್ತಿದ್ದ ಇತರರು ಸ್ಮರಿಸಿಕೊಳ್ಳುವಂತೆ, ಈ ಅನಿರೀಕ್ಷಿತ ಭೇಟಿಗಳ ಉದ್ದೇಶ ತಪ್ಪು ಹುಡುಕುವುದಲ್ಲ; ಕೈಮೀರುವ ಮುಂಚೆ ಸೂಕ್ತ ಮಾರ್ಗದರ್ಶನ ನೀಡುವುದೇ ಆಗಿರುತ್ತಿತ್ತು.

ಅವರೇ ಬಡಮಕ್ಕಳಿಗಾಗಿ ಮನೆಯಲ್ಲೇ ಆರಂಭಿಸಿದ 'ಗೋಕುಲಂ ಗಾರ್ಡನ್' ಶಾಲೆ, 'ಗೋಪಾಲ ನಿಕೇತನ' ಎಂಬ ಹೆಸರಿನ ಅನಾಥಾಲಯ ಕೆಲವರ್ಷಗಳ ಕಾಲ ತುಂಬ ಉಪಯುಕ್ತವಾಗಿ ನಡೆದು, ಈಗ ನಿಂತುಹೋಗಿವೆ.

ಪಿ. ಆರ್. ಜಯಲಕ್ಷ್ಮಮ್ಮನವರು ಸೇವೆ ಸಲ್ಲಿಸಿದ ವಿವಿಧ ಸಂಘಸಂಸ್ಥೆಗಳ ಹೆಸರನ್ನು ಹೇಳುತ್ತಾ ಹೋದರೆ ಅದೇ ಒಂದು ದೊಡ್ಡ ಪಟ್ಟಿಯಾಗುತ್ತದೆ. ಬಡಜನರಿಗೆ, ಮಹಿಳೆಯರಿಗೆ ಶಿಕ್ಷಣ, ತರಬೇತಿ, ಸ್ವಾವಲಂಬನೆಯ ಹಾದಿಯಲ್ಲಿ ಮುನ್ನಡೆಸುವ ಕಾಳಜಿ ಈ ಎಲ್ಲ ಸಂಘಸಂಸ್ಥೆಗಳ ಉದ್ದೇಶಗಳಲ್ಲಿ ಮುಖ್ಯವಾಗಿದೆ.

ಭಿಕ್ಷುಕರ ಕಲ್ಯಾಣ ಸಮಿತಿ, ಮಹಿಳೆಯರಿಗಾಗಿ ಸಂಕ್ಷಿಪ್ತ ಶಿಕ್ಷಣ ತರಗತಿಗಳು, ಬಳಕೆದಾರರ ವೇದಿಕೆ, ಸಂತಾನ ನಿಯಂತ್ರಣ ಸಮಿತಿ – ಹೀಗೆ ಹಲವಾರು ಸಮಿತಿಗಳಲ್ಲಿ ಅಕ್ಕಮ್ಮ ದುಡಿದಿದ್ದಾರೆ.

ಭಾರತೀಯ ಗ್ರಾಮೀಣ ಮಹಿಳಾ ಸಂಘದ ಶಾಖೆಯನ್ನು ಕರ್ನಾಟಕದಲ್ಲಿಯೂ ಆರಂಭಿಸಿ (ದಿವಂಗತ ಯಶೋಧರಮ್ಮ ದಾಸಪ್ಪನವರ ಸಹಕಾರದೊಂದಿಗೆ) ಆ ಮೂಲಕ ರಾಜ್ಯದ ವಿವಿಧ ಸ್ಥಳಗಳಲ್ಲಿ ಅಂಧರಿಗಾಗಿ ವಸತಿಗೃಹ, ಅನಾಥ ಮಕ್ಕಳಿಗೆ, ಮಹಿಳೆಯರಿಗೆ, ವೃದ್ಧರಿಗೆ ಆಶ್ರಯಧಾಮಗಳು, ಕೊಳಚೆ ಪ್ರದೇಶಗಳಲ್ಲಿ ಬಾಲವಾಡಿ – ಹೀಗೆ ಹಲವಾರು ರೀತಿಯಲ್ಲಿ ದೀನ ದಲಿತರಿಗಾಗಿ ಅಕ್ಕಮ್ಮ ಜೀವನಪರ್ಯಂತ ಶ್ರಮಿಸಿದ್ದಾರೆ.

ಪಿ. ಆರ್. ಜಯಲಕ್ಷ್ಮಮ್ಮನವರು ಒಳ್ಳೆಯ ಬರಹಗಾರ್ತಿಯೂ ಆಗಿದ್ದರು. ಆದರೆ ಈ ಬರಹಗಳು, ಅವರ ಚಿಂತನೆ, ವಿಚಾರ ಮತ್ತು ಅನುಭವಗಳ ಸಂವಹನ ಮಾಧ್ಯಮ ಮಾತ್ರ. ಸಾಹಿತ್ಯ ಅವರ ಕ್ಷೇತ್ರವಲ್ಲ; ಜನಸೇವೆ ಅವರು ಮನಃಪೂರ್ವಕವಾಗಿ ಮಾಡುತ್ತಿದ್ದ ಕಾರ್ಯ. ಅದೇ ಅವರ ಕ್ಷೇತ್ರ. ತಮ್ಮ ಎಲ್ಲ ಕಾರ್ಯ ಚಟುವಟಿಕೆಗಳ ಮಧ್ಯೆಯೂ, ತಮ್ಮ ಸುತ್ತಲಿನ ಜನರಿಗೆ ಏನಾದರೂ ಹೇಳುವುದಿದೆ ಎನ್ನಿಸಿದರೆ ಅದು ಬರಹ ರೂಪ ತಾಳುತ್ತಿತ್ತು. ಇಂತಹ ಐವತ್ತಕ್ಕೂ ಹೆಚ್ಚಿನ ಲೇಖನಗಳನ್ನು ಅವರು ಬರೆದಿದ್ದಾರೆ. ಇವುಗಳಲ್ಲಿ ಸಾಹಿತ್ಯಕ ಕುಸುರಿ ಕೆಲಸವಿಲ್ಲದಿದ್ದರೂ ವಿಚಾರವಂತಿಕೆಯ ಪ್ರಭೆಗೆ ಕೊರತೆಯಿಲ್ಲ. ಅವರದೊಂದು ಲೇಖನವಿದೆ; ಅದರ ಶೀರ್ಷಿಕೆ "ಭಗೀರಥನು ಇಂಜಿನೀಯರ್ ಏಕಾಗಿರ ಬಾರದು ?" ಎಂದು. ಹಿಮಾಲಯ ಪರ್ವತದಲ್ಲಿ ಹುಟ್ಟಿ ಬಂಗಾಳಕೊಲ್ಲಿಯವರೆಗೂ ಹರಿಯುವ ಗಂಗಾ ನದಿಯನ್ನು ಭಗೀರಥ ಉಗ್ರ ತಪಸ್ಸು ಮಾಡಿ ಭೂಲೋಕಕ್ಕೆ ತಂದನೆಂಬ ಪ್ರತೀತಿ ಇದೆ. ಈ ಸಾಹಸದ ಕಥೆ ಗಂಗೆ ರಭಸದಿಂದ ಧುಮ್ಮಿಕ್ಕುವುದನ್ನು ತಡೆಯಲು ಶಿವ ನೆರವಾದದ್ದು, ಅದು ದಾರಿ ಬಿಟ್ಟು ಹರಿದಾಗ ಜಹ್ನು ಮಹರ್ಷಿ ಆಪೋಶನಗೈದು ನಂತರ ಕಿವಿಯಿಂದ ಬಿಟ್ಟು ಸರಿದಾರಿಯಲ್ಲಿ ಚಲಿಸುವಂತೆ ಮಾಡಿದ್ದು, ಇವೆಲ್ಲ ಎಂಜಿನೀಯರಿಂಗ್ ಉಪಕ್ರಮಗಳಿರಬಹುದೆ, ಎಂದು ವೈಜ್ಞಾನಿಕ ದೃಷ್ಟಿಯಿಂದ ನೋಡುವ ಜಯಲಕ್ಷ್ಮಮ್ಮ ನವರು ಸೂಯೆಜ್ ಕಾಲುವೆಯನ್ನು ಆಂಗ್ಲರೂ, ಪನಾಮ ಕಾಲುವೆಯನ್ನು ಅಮೆರಿಕಾದವರೂ ನಿರ್ಮಿಸಿದಂತೆಯೇ ಭಗೀರಥನೂ ಗಂಗೆಯ ಮಾರ್ಗ ನಿರ್ದೇಶಕನಾದ ಎಂಜಿನೀಯರ್ ಆಗಿರಬಹುದಲ್ಲವೆ ಎಂಬ ಚಿಂತನೆಯನ್ನು ಓದುಗನ ಮುಂದಿಡುತ್ತಾರೆ.

ಇದೇ ರೀತಿ ಅವರು "ಸಣ್ಣ ಉಳಿತಾಯ ಯೋಜನೆ", "ಮದುವೆ - ಆತುರ ಏಕೆ... ವಿಳಂಬ ಬೇಕೇ ?" ಇವೇ ಮುಂತಾದ ವಿಷಯಗಳ ಬಗ್ಗೆ ಬರೆದಿರುವ ಲೇಖನಗಳಲ್ಲಿನ ವೈಚಾರಿಕ ಹೊಳಹು ಇಂದಿಗೂ ಪ್ರಸ್ತುತ ಎನ್ನಿಸುತ್ತದೆ.

ನಿರಾಡಂಬರ ಮಾತುಕತೆ, ನಡವಳಿಕೆಯ ಅಕ್ಕಮ್ಮ ಯಾವಾಗಲೂ ಉತ್ಸಾಹದ ಬುಗ್ಗೆ. ದೇವರಲ್ಲಿ ಅಚಲವಾದ ನಂಬಿಕೆ. ದೇವರ ಮನೆಯ ಹುಂಡಿ ಸದಾ ಭರ್ತಿ. ಪರಸ್ಥಳಗಳಿಗೆ ಹೋದಾಗ ಹಾಗೂ ಪ್ರಯಾಣ ಸಮಯದಲ್ಲಿ ತಮ್ಮ ಮಡಿವಂತಿಕೆಯಿಂದ ಯಾರಿಗೂ ತೊಂದರೆಯಾಗದಂತೆ ಎಚ್ಚರ ವಹಿಸುತ್ತಿದ್ದರು. ಇದು ನನ್ನ ಜೀವನ ವಿಧಾನ. ಮನಸ್ಸು ತಿಳಿಯಾಗಿದ್ದು, ಪರರ ಸುಖ ದುಃಖಗಳಿಗೆ ಮಿಡಿದರೆ, ಅದಕ್ಕಿಂತ ಬೇರೇನು ಬೇಕು ? ಅವರವರ ದೇಸೀ ಸಂಸ್ಕೃತಿ ಅವರವರಿಗೆ. ಒಂದೆಡೆ ಅಂತಹುದನ್ನು ರಕ್ಷಿಸಬೇಕು ಎಂದು ಹೇಳುತ್ತಾ, ಮತ್ತೊಂದರ ಬಗ್ಗೆ ಅಪಹಾಸ್ಯ ಮಾಡುವುದು ಎಷ್ಟು ಸರಿ, ಎಂದೇ ಅವರು ಪ್ರಶ್ನಿಸುತ್ತಿದ್ದರು. ಹಾಗಾಗಿ, ಅಕ್ಕಮ್ಮನವರನ್ನು ಹತ್ತಿರದಿಂದ ಅರಿತವರು, ಅವರ ಈ ಮಡಿವಂತಿಕೆ ಯನ್ನೂ ಸಂಪ್ರದಾಯ ನಿಷ್ಠತೆಯನ್ನೂ ಅವರ ಗುಣವೆಂದೇ ಭಾವಿಸಿ ಗೌರವಿಸುತ್ತಿದ್ದರು.

ಬಹುಶಃ ಅವರ ಹೃದಯವಂತಿಕೆಯೇ ಅವರನ್ನು ವಿಚಾರವಂತೆಯನ್ನಾಗಿ ರೂಪಿಸಿತೆನ್ನ ಬಹುದು. ಏಕೆಂದರೆ ಮುಕ್ತ ಮನಸ್ಸಿನ ಅಕ್ಕಮ್ಮ ತಾವೆಷ್ಟೇ ಸಂಪ್ರದಾಯಸ್ಥರಾಗಿದ್ದರೂ ಇತರರ

ಮನಸ್ಸನ್ನು, ಅಭಿಪ್ರಾಯವನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲವರಾಗಿದ್ದರು. ಅದು ಅಂತರ್‌ಜಾತೀಯ ವಿವಾಹವಾಗಿರಬಹುದು, ವಿಚ್ಛೇದನದ ಸಮಸ್ಯೆಯಾಗಿರಬಹುದು, ಎರಡನೇ ಮದುವೆಯ ಸಂದರ್ಭವಾಗಿರಬಹುದು ಅಥವಾ ಗಂಡು-ಹೆಣ್ಣಿನ ಸಂಬಂಧದ ನಡುವಿನ ಯಾವುದೇ ಬಿಕ್ಕಟ್ಟಾಗಿರಬಹುದು. ಇಂತಹ ಎಲ್ಲ ಸಂದರ್ಭಗಳಲ್ಲಿ ಮಾರ್ಗದರ್ಶನ ಮಾಡುವುದರಲ್ಲಿ ಅವರು ಸಿದ್ಧಹಸ್ತರು. ಅವರ ವಿಸ್ತೃತ ವಿಶಾಲ ಕುಟುಂಬದಲ್ಲಿಯೇ ಇಂತಹ ಪರಿಸ್ಥಿತಿಗಳು ಎದುರಾದಾಗ ಮೊದಮೊದಲು ತಲ್ಲಣಗೊಂಡರು. ಆದರೆ ಅವರೊಳಗಿನ ವಿಚಾರವಂತೆ ಅವರಿಗೆ ದಾರಿ ತೋರಿಸಿರಬೇಕು. ಪಾರದರ್ಶಕ ವ್ಯಕ್ತಿತ್ವ ಅವರದು. ಎಲ್ಲರ ಬಾಳೂ ನೇರವಾಗಬೇಕು ಎಂದೇ ಸದಾಕಾಲ ಆಶಿಸುತ್ತಿದ್ದು, ಬದಲಾಗುತ್ತಿದ್ದ ಪರಿಸ್ಥಿತಿಯನ್ನು ಅರಿತುಕೊಂಡು ವರ್ತಿಸಲು ಯತ್ನಿಸುತ್ತಿದ್ದರು. ಇಂತಹವರಲ್ಲಿ ಅವರ ಮಗಳು ರಾಮೇಶ್ವರಿ ವರ್ಮಾ ಕೂಡ ಒಬ್ಬರು.

ಅಕ್ಕಮ್ಮ ದಂಪತಿಗಳು ರಾಮೇಶ್ವರಿಗೆ ಮದುವೆ ಮಾಡಿದಾಗ ಅವಳಿನ್ನೂ ತುಂಬಾ ಚಿಕ್ಕ ಹುಡುಗಿ. ಆಗ ಅಂದರೆ ೧೯೫೦ರ ವರ್ಷ. ಹಿರಿಯರಿದ್ದ ಸಂಪ್ರದಾಯಸ್ಥರ ಮನೆಗಳಲ್ಲಿ ಕನ್ಯಾದಾನದ ಮನೋಭಾವ ಇನ್ನೂ ಚಾಲ್ತಿಯಲ್ಲಿದ್ದ ಕಾಲ. ಬಹುಶಃ ಹದಿಮೂರು ವರ್ಷ ವಯಸ್ಸಿನ ಈ ಪುಟ್ಟ ಗೌರಿಗೆ, ಆಗಿನ್ನೂ ವಿದ್ಯಾರ್ಥಿಯಾಗಿದ್ದ ಎಳೆಯನೊಬ್ಬನನ್ನು ಕೊಟ್ಟು ಮದುವೆ ಮಾಡಲು ಇದೇ ಕಾರಣವಾಗಿರಬೇಕು. ಆ ಬಾಲಕನನ್ನು ತಮ್ಮ ಮನೆಯಲ್ಲೇ ಇಟ್ಟುಕೊಂಡು ಓದಿಸಿದ್ದೂ ಆಯಿತು. ಆದರೆ ಮದುವೆಯಾಗಿ ಹದಿನಾರು ವರ್ಷಗಳು ಸಂದರೂ ಈ ಪುಟ್ಟ ದಂಪತಿಗಳು ಯೌವನಕ್ಕೆ ಕಾಲಿಟ್ಟು ಬೆಳೆದರೂ ಅವರಿಬ್ಬರ ನಡುವೆ ಸಾಮರಸ್ಯ ಮೂಡಲೇ ಇಲ್ಲ. ಅಕ್ಕಮ್ಮ ತಲೆಮೇಲೆ ಕೈಹೊತ್ತು ಕುಳಿತುಕೊಂಡರು. ಆ ವೇಳೆಗೆ ಪ್ರೌಢೆಯಾಗಿ ಬೆಳೆದಿದ್ದ ರಾಮೇಶ್ವರಿ ವಿಚ್ಛೇದನದ ಪಟ್ಟು ಹಿಡಿದಾಗ ಅಕ್ಕಮ್ಮನದು ಮೌನ ಸಮ್ಮತಿ. ನಂತರದ ವರ್ಷಗಳಲ್ಲಿ ಅವರು ಇನ್ನೂ ಒಂದು ಆಘಾತ ಎದುರಿಸಬೇಕಾಯಿತು. ಸ್ವಂತ ಮಗಳೇ ಸವಾಲಾಗಿ ನಿಂತು ಅಂತರ್‌ಜಾತೀಯ ವಿವಾಹಕ್ಕೆ ಸಿದ್ಧಳಾಗಿ, ಕೇರಳದ ಶ್ರೀ ಬಾಲಗೋಪಾಲ ವರ್ಮಾ ಅವರನ್ನು ಪ್ರೇಮ ವಿವಾಹವಾಗುವುದಾಗಿ ತಿಳಿಸಿದಳು. ಆ ವೇಳೆಗೆ ಹೊರ ಪ್ರಪಂಚಕ್ಕೆ ತಮ್ಮನ್ನು ತೆರೆದುಕೊಂಡಿದ್ದ ಪಿ. ಆರ್. ಜಯಲಕ್ಷ್ಮ ಮಗಳ ಬಾಲ್ಯ ವಿವಾಹದಿಂದಾದ ಅನಾಹುತವನ್ನು ಕಂಡಿದ್ದವರು. ಹಾಗಾಗಿ ತಮ್ಮ ಸಮ್ಮತಿ ನೀಡಿ ದೂರದಿಂದಲೇ ಮಗಳಿಗೆ ಆಶೀರ್ವದಿಸಿದರು. ಆನಂತರದ ದಿನಗಳಲ್ಲಿ ಈ ಕೇರಳೀಯ ಅಳಿಯ ಅತ್ತೆಯ ಮನಸ್ಸನ್ನು ಗೆದ್ದು ಅವರ ಅಚ್ಚುಮೆಚ್ಚಿನ ಅಳಿಯನಾದ. ರಾಮೇಶ್ವರಿ ದಂಪತಿಗಳು ಅಕ್ಕಮ್ಮನನ್ನು ತಮ್ಮ ಮನೆಗೆ ಬರಮಾಡಿಕೊಳ್ಳಲು ಅವರಿಗೆ ಅಗತ್ಯವಾದ ಪ್ರತ್ಯೇಕ ಅನುಕೂಲಗಳನ್ನೆಲ್ಲ ಕಲ್ಪಿಸಿ ಒಟ್ಟಾಗಿ ಇರುವ ಸಂತೋಷವನ್ನು ಆಗಾಗ್ಗೆ ತಮ್ಮದಾಗಿಸಿಕೊಳ್ಳುತ್ತಿದ್ದರು.

ತಮ್ಮ ಆಶ್ರಯಕ್ಕೆ ಬಂದ ಯಾವುದೇ ಹೆಣ್ಣನ್ನು ಉದಾಸೀನ ಮನೋಭಾವದಿಂದ ನೋಡದೆ, ಅವರ ಅಂತರಂಗದ ಧ್ವನಿಯನ್ನು ಕೇಳಿಸಿಕೊಂಡು ಅವರನ್ನು ನಡೆಸಿಕೊಳ್ಳುತ್ತಿದ್ದ ರೀತಿ ಪಿ. ಆರ್. ಜಯಲಕ್ಷ್ಮನವರ ದೊಡ್ಡತನಕ್ಕೆ, ವೈಚಾರಿಕ ಪ್ರಜ್ಞೆಗೆ ಸಾಕ್ಷಿಯಾಗಿತ್ತು. ಶ್ರೀಮತಿ ಗಾಯತ್ರಿ ವಿಶ್ವನಾಥ್ ಜಯಲಕ್ಷ್ಮನವರ ಸೊಸೆ. ಆಶ್ರಯ ಕೋರಿ ಬಂದು ಮನೆಯಲ್ಲೇ ಬೆಳೆಯುತ್ತಿದ್ದ ಈ ಚೂಟಿ ಹುಡುಗಿಯನ್ನು ಕೊನೆಯ ಮಗ ವಿಶ್ವನಾಥ – ತುಂಬ ವಿದ್ಯಾವಂತ, ಒಳ್ಳೆಯ ಕೆಲಸದಲ್ಲಿದ್ದವ – ಮದುವೆಯಾಗಲು ಬಯಸಿದ. ಅಕ್ಕಮ್ಮ ಬೇಡವೆನ್ನಲಿಲ್ಲ, ಆದರೆ ಈ ಹುಡುಗಿಯ ಮನದಿಚ್ಛೆ ಏನೋ ಏನೋ ಎಂದು ವಿಚಾರಮಾಡಿದರು. ತಮ್ಮ ನಿರ್ಧಾರವನ್ನು ಈ ಬಡ ಕಿಶೋರಿಯ ಮೇಲೆ ಹೇರದೆ, ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳುವಂತೆ ಅವಳಿಗೆ ಸೂಚಿಸಿದರಂತೆ. ಇದು ಅವರ ದೊಡ್ಡಗುಣ ಎಂದು ಗಾಯತ್ರಿ ಈಗಲೂ ಸ್ಮರಿಸಿಕೊಳ್ಳುತ್ತಾರೆ.

ಬೆಂಗಳೂರಿನ ಬಸವನಗುಡಿಯ ಅವರ ಮನೆ ''ಶ್ರೀಶೈಲ ನಿಲಯ''ದ ಮೆಟ್ಟಿಲು ಹತ್ತಿ ಒಳಬಂದರೆಂದರೆ ಎಲ್ಲ ಅದೃಷ್ಟ ವಂಚಿತರ ಬದುಕಿನ ಅದೃಷ್ಟದ ಬಾಗಿಲು ತೆರೆದಂತೆಯೇ. ಯಾಕೆಂದರೆ ಇಂತಹ ದುಃಖಿಗಳ ಬಾಳನ್ನು ನೇರ್ಪುಗೊಳಿಸುವ ಕಾರ್ಯವನ್ನು ಅಕ್ಕಮ್ಮ ಕಾಯಾ ವಾಚಾ ಮನಸಾ ಮಾಡುತ್ತಿದ್ದರು.

ತಾವು ಸ್ಥಾಪಿಸಿದ ಅನಾಥಾಶ್ರಮಗಳಲ್ಲಿ ಸರ್ಕಾರಿ ಅನುದಾನ ಬರುವುದು ತಡವಾಗಿ ಮಕ್ಕಳಿಗೆ ಊಟ ಹಾಕುವುದೆ ದುಸ್ತರವಾದ ಸಂದರ್ಭಗಳಲ್ಲಿ, ತಮ್ಮಲ್ಲಿದ್ದ ಸ್ವಂತ ಹಣ ಖರ್ಚು ಮಾಡಿ ಆ ಮಕ್ಕಳ ಹಸಿವು ಇಂಗಿಸುತ್ತಿದ್ದರು. ಆ ಹಣವೂ ಮುಗಿದುಹೋದಾಗ ಗುರುತಿನವರ ಬಳಿ ಸಾಲ ತರಲೂ ಅವರು ಹಿಂಜರಿಯುತ್ತಿರಲಿಲ್ಲ. ಮನೆ ಜನ ಈ ಬಗ್ಗೆ ಕುಪಿತರಾಗಿ ''ನಿನ್ನ ಔದಾರ್ಯ ಮಿತಿಮೀರಿತು'' ಎಂದು ಟೀಕಿಸಿದ್ದೂ ಉಂಟು. ಆಗೆಲ್ಲ ಅಕ್ಕಮ್ಮ ತಮ್ಮ ಕಾರ್ಯವನ್ನು ಸಮರ್ಥಿಸಿಕೊಂಡು ಆ ಮಕ್ಕಳು ಹಸಿವಿನಿಂದ ಬಳಲುವುದನ್ನು ನೋಡುತ್ತಾ ಸುಮ್ಮನಿರಬೇಕಿತ್ತೇ ಎಂದು ಮರು ಸವಾಲು ಹಾಕುತ್ತಿದ್ದರು. ಅವರ ಕಾರ್ಯಕ್ಷಮತೆ ಒಡಲಾಳದಿಂದ ಬರುತ್ತಿದ್ದ ತಕ್ಷಣದ ಪ್ರತಿಕ್ರಿಯೆಯಾಗಿರುತ್ತಿತ್ತು. ಅವರು ಕೇವಲ ಲೆಕ್ಕಾಚಾರದ ವ್ಯಕ್ತಿಯಾಗಿರಲಿಲ್ಲ. ಏನೂ ಮಾಡದೆ ಕುಳಿತು ಟೀಕಿಸುವವರ ಗುಂಪಿಗೆ ಸೇರಿದವರಲ್ಲ.

ಅವರಂತೆ ಎಲ್ಲರನ್ನೂ, ಎಲ್ಲ ಪರಿಸ್ಥಿತಿಯಲ್ಲೂ, ತಬ್ಬಿಕೊಂಡು ಹೆಜ್ಜೆ ಹಾಕುವ ಜನ ಇಂದೂ ಇದ್ದಾರೆಯೇ ? ಹುಡುಕಬೇಕು.

ನಾಗಮಣಿ ಎಸ್. ರಾವ್
೨೧೫, 'ಶ್ರೇಯಸ್', ೪ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦೦೧೮

# ಕೊಂಬುಳ್ಳ ಪ್ರಾಣಿಗಳು

ಕೊಂಬುಳ್ಳ ಪ್ರಾಣಿಗಳಲ್ಲಿ
ಹಲವು ಹಾಯುತ್ತವೆ
ಕೊಂಬಿರದ ಜಂತುಗಳು

ಅವುಗಳ ವಿರುದ್ಧ
ಹಾಯಲು ಯತ್ನಿಸುತ್ತವೆ
ತಲೆ ಚಚ್ಚಿಕೊಳ್ಳುತ್ತವೆ
ಕೆಲವೊಮ್ಮೆ ಹಾಳಾಗುವಷ್ಟು; ತಲೆ
ಮೆದುಳು ಕಿತ್ತು ಹೊರಬರುವಷ್ಟು
ಕೂಗುತ್ತವೆ ಆಕಾರ... ವಿಕಾರವಾಗಿ

ಕೊಂಬಿರುವ ಪ್ರಾಣಿಗಳು ಕೊಬ್ಬಿರುತ್ತವೆ
ಸವಾರಿ ಮಾಡುತ್ತಲೆ ಇರುತ್ತವೆ
ತನುಮನ ತೃಪ್ತಿಯಾಗುವಷ್ಟು
ಈ ಲೋಕವೇ ಹೀಗೆ...
ವಚನಕಾರರು ಹೇಳಿದಂತೆ,
ಉಳ್ಳವರು ಶಿವಾಲಯವ ಮಾಡುವಂತೆ
ಬಡವರು ಏನು ತಾನೆ ಮಾಡಲು ಸಾಧ್ಯ ?

ಈ ಜಗತ್ತೇ ಹೀಗೆ...
ಕ್ರಾಂತಿಕಾರರು ನುಡಿದ ಹಾಗೆ,
ಇದ್ದವರು ಸವಾರಿ ಮಾಡುತ್ತಿರುತ್ತಾರೆ
ಬೆಂಝ್, ಝೆನ್, ಫೆರಾರಿ
ಇರದವರು ಚಕ್ರದಡಿ ಸಿಕ್ಕು ಅರೆಜೀವ
ಒದ್ದಾಡುತ್ತಿರುತ್ತಾರೆ... ಬೇಡುತ್ತಿರುತ್ತಾರೆ
ಪೂರ ಹೋಗುವ ತನಕ ಜೀವ
ಬೇಕು ಬೇಡಿ ಹೊಡಿಬೇಡಿ
ನ್ಯಾಯ ಕೊಡಿ...
ಬಲವೇ ಗೆಲುವ ಹಾದಿಯಾಗುತ್ತದೆ
ಕಂಬಳದಲ್ಲಿ ಕೊಬ್ಬಿದೆತ್ತು ತಾನೆ
ನಿಶಾನೆಗೆ ಕಾರಂಜಿ ಚಿಮ್ಮಿಸಿ ಮೆರೆಯುವುದು !?



ಎ. ಸುಬ್ರಹ್ಮಣ್ಯ ಭಟ್
ಉಪನ್ಯಾಸಕ, ತುಂಬೆ ಪದವಿಪೂರ್ವ ಕಾಲೇಜು, ತುಂಬೆ - ೫೭೪ ೧೪೩, ಬಂಟ್ವಾಳ, ದ.ಕ



# ಮೂರ್ತಿರಾವ್ ಅವರ ವೈಚಾರಿಕತೆ : ಒಂದು ಟಿಪ್ಪಣಿ

> ನವೋದಯ ಬರಹಗಾರರಲ್ಲಿ ಎ. ಎನ್. ಮೂರ್ತಿರಾಯರು ಅವರ ವೈಚಾರಿಕ ನಿಲುವಿಗಾಗಿ ಎದ್ದು ಕಾಣುತ್ತಾರೆ. ಸೃಜನಾತ್ಮಕತೆಯಲ್ಲಿ ದೇವರನ್ನು ಧರ್ಮವನ್ನು ಒಡೆದು ಕಟ್ಟಿಕೊಳ್ಳುವ ಬದಲು ಅವರು ಇರುವ ದೇವರನ್ನು ಪುನರ್‌ಸೃಷ್ಟಿ ಮಾಡಿ ಬಳಸಿಕೊಳ್ಳಲು ಪ್ರಯತ್ನಿಸುತ್ತಾರೆ. ದೇವರು-ಧರ್ಮವನ್ನೂ ಅವುಗಳ ಆಚರಣಾ ವಿಧಿಗಳನ್ನೂ ಬೇರೆ ಮಾಡಿ ವಿವರಿಸುವ ಅವರ ಹಠ ನಮಗೆ ಸಂಕಟದಂತೆ ತೋರುತ್ತದೆ. ಅಭಿವ್ಯಕ್ತಿಯಲ್ಲಿ ಅವರು ಪ್ರಾಮಾಣಿಕರು; ಆದರೆ ಅದು ಅವರ ಚಿಂತನೆಯನ್ನು ಗಟ್ಟಿಗೊಳಿಸುವಷ್ಟು ಶಕ್ತಿಶಾಲಿಯಾದುದಲ್ಲ.

**ಡಾ|| ಪಿ. ಶಿ. ರಾಮಚಂದ್ರೇಗೌಡ**

**ನ**ವೋದಯ ಸಾಹಿತಿಗಳಿಗೆ ಒಂದು ಅನಿವಾರ್ಯ ಬಿಕ್ಕಟ್ಟು ಅಥವಾ ಪ್ರಸ್ತುತತೆ ಎದುರಾಗಿತ್ತು. ಅದು ಧರ್ಮ, ದೇವರು, ವರ್ಣ, ಜಾತಿ, ವರ್ಗ, ಮಠಮಾನ್ಯ, ಮೌಲ್ಯ, ಶುದ್ಧತೆ, ಶ್ರೇಷ್ಠತೆ ಹಾಗೂ ಸಂಪತ್ತಿನ ಅಕ್ರಮ ಸಂಗ್ರಹವನ್ನು ಕುರಿತು ಮಾತನಾಡುವುದು. ಇದು ಹಳಗನ್ನಡ ಕವಿಗಳಿಗಿದ್ದ ಅಷ್ಟಾದಶವರ್ಣನೆಗಳ ಕಟ್ಟುಪಾಡಿನಂತಲ್ಲ. ಬರಹಗಾರನು ಸಮಕಾಲೀನನಾಗುವ ತುರ್ತು ಅಗತ್ಯವಾಗಿತ್ತು. ಸಾಂಪ್ರದಾಯಿಕತೆಯಿಂದ ಹೊರಳುವ ಹಾಗೂ ಪಾಶ್ಚಾತ್ಯ ಹೊಸ ಜೀವನ ವಿಧಾನಕ್ಕೆ ತೆರೆದುಕೊಳ್ಳುವ ಕಾರಣಕ್ಕಾಗಿ ಬರಹಗಾರ ವೈಯಕ್ತಿಕ ಅಪೇಕ್ಷೆಯ ಜೊತೆಗೆ ಸಾಮಾಜಿಕ ಅಸ್ತಿತ್ವದ ಜೊತೆಗೂ ಹೊಂದಾಣಿಕೆ ಮಾಡಿಕೊಳ್ಳಬೇಕಾಯಿತು. ಇಲ್ಲಿ ಸಂಸ್ಕೃತಿ ಮತ್ತು ನಾಗರಿಕತೆಗಳ ನಡುವಿನ ಒಂದು ಸಾಂಸ್ಕೃತಿಕ ಸಂಘರ್ಷ ಅನಿವಾರ್ಯವಾಯಿತು. ಇಂಥ ಸಾಂಸ್ಕೃತಿಕ ಸಂಘರ್ಷದ ಭಿನ್ನ ನೆಲೆಗಳನ್ನು ನವೋದಯಕಾಲದ ಬರಹಗಾರರು ಮಂಡಿಸಿದರು.

ಈ ಕಾಲದ ಬರಹಗಾರರನ್ನು ದೇವರು ಮತ್ತು ಧರ್ಮಗಳು ಬಹಳವಾಗಿ ತಲೆಕೆಡಿಸಿವೆ. ಪಾಶ್ಚಾತ್ಯ ನಾಗರಿಕತೆಗೆ ಮುಖಾಮುಖಿಯಾಗುವ ಅಭಿವೃದ್ಧಿಸಾಧನಗಳು ಇವರಲ್ಲಿ ಇಲ್ಲವಾಗಿ ತಮ್ಮ ಹಳೆಯ ಗಂಟು-ಪಂಟುಗಳಾದ ಧರ್ಮ-ದೇವರನ್ನು ಆಕ್ರಮಣಕಾರರ ಎದುರು ಬಿಚ್ಚಿ ಇಡಬೇಕಾಯಿತು. ಈ ಸಂದರ್ಭ ಭಾರತೀಯ ಸಂಸ್ಕೃತಿ ನಿರ್ವಾಹಕರನ್ನು ಒಳಗೊಳಗೆ ನಡುಗಿಸಿದ್ದೂ ಉಂಟು ಮತ್ತು ನಾಚಿಕೊಳ್ಳದೆ ಅದನ್ನು ಹೊರಗಿಟ್ಟು ಮಂಡಿಸಿದ್ದೂ ಉಂಟು. ಇವರ್‍ಯಾರಿಗೂ ಧರ್ಮದ ಸೆಕ್ಯೂಲರ್ ಸ್ವಭಾವ ಅರ್ಥವಾದಂತೆ ಕಾಣುವುದಿಲ್ಲ. ಧರ್ಮದ ವಿಕಾಸವನ್ನು ಗಮನಿಸುತ್ತಾ ಬಂದರೆ, ಅರಾಜಕತೆ ನಿವಾರಕ ಹಾಗೂ ಸಾಂಘಿಕ ನೆಲೆಯಾಗಿ ಧರ್ಮ ಕಾಣಿಸಿರುವುದರ ಕುರುಹುಗಳು ಕೂಡ ದೊರೆಯುತ್ತವೆ. ಸಮಕಾಲೀನವಾಗಿ ಧರ್ಮಕ್ಕೆ ಪರ್ಯಾಯ ಹುಡುಕುವ ವ್ಯವಧಾನ ಕೂಡ ಇವರಲ್ಲಿ ಕಂಡುಬಂದಂತಿಲ್ಲ.

ಕುವೆಂಪು ಅವರನ್ನು ಹೊರತುಪಡಿಸಿದರೆ, ದೇವರು ಮತ್ತು ಧರ್ಮ ಈಗಿರುವುದಕ್ಕಿಂತ ಬೇರೆ ಆಗಬಹುದು ಎಂಬ ಬಗ್ಗೆ ಹಲವರು ಚಿಂತಿಸಿದಂತಿಲ್ಲ. ಕುವೆಂಪು ಪ್ರಕೃತಿಯನ್ನು ದೇವರ ಸ್ಥಾನದಲ್ಲಿ, ಅಧ್ಯಾತ್ಮವನ್ನು ಧಾರ್ಮಿಕ ವಿಕಾಸದ ಸ್ಥಾನದಲ್ಲಿ, ಸಂಶೋಧನೆಯನ್ನು ನೇಗಿಲಯೋಗಿ, ಶಂಬೂಕ, ಏಕಲವ್ಯ ಹಾಗೂ ಜಲಗಾರ ಎಂಬ ವೃತ್ತಿ ನಿಷ್ಠೆ ತಪಸ್ಸಿನಲ್ಲಿ ಪುನರ್ ಸೃಷ್ಟಿಸಿಕೊಳ್ಳುತ್ತಾರೆ. ಆದ್ದರಿಂದಲೇ ಅವರಿಗೆ ಸಮಕಾಲೀನವಾಗಿ ಜಡಗಟ್ಟಿರುವ ದೇವರನ್ನು ಕುರಿತು :

*ನೂರು ದೇವರನೆಲ್ಲ ನೂಕಾಚೆ ದೂರ*
*ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ*

ಎಂದು ಹೇಳಲು ಸಾಧ್ಯವಾಗಿದೆ.

ಶಿವರಾಮ ಕಾರಂತರು ಪರಿಕಲ್ಪನೆಯ ರೂಪದಲ್ಲಿ ದೇವರು - ಧರ್ಮಕ್ಕೆ ಪರ್ಯಾಯವನ್ನು ಹುಡುಕುವ ಗೋಜಿಗೇ ಹೋಗಲಿಲ್ಲ. ಬದುಕಿನ ವಿಕಸನದಲ್ಲಿ ದೇವರು – ಧರ್ಮದ ಸೃಜನಾತ್ಮಕ ಬೆಳವಣಿಗೆಯನ್ನು ಕಂಡರು. ಅವರು ಹೇಳುವುದು ಹೀಗೆ:

''ನಮ್ಮ ಬದುಕಿಗಿಂತ ಹಿರಿದಾದ ದೇವರು ನಮಗೆ ನಿಲುಕಲಾರನೆಂಬುದೇ ನನ್ನ ತಿಳಿವು (ಬಾಳ್ವೆಯೇ ಬೆಳಕು ೪೯) ಎಷ್ಟು ಸವಿಯಾದ, ಸವಿಸ್ತಾರವಾದ ಜೀವನದ ಹಿನ್ನೆಲೆಯು ನಮಗಿರುತ್ತದೊ ಅಷ್ಟು ವಿಸ್ತಾರವಾದ ದೇವನು ನಮಗೆ ಇದಿರಾಗುತ್ತಾನೆ (ಬಾ.ಬೆ.೪೪). ಈ ಎಲ್ಲ ದೇವರುಗಳ ಕಲ್ಪನೆಯನ್ನು ಮಾಡಿದ ಜನಗಳು ಇನ್ನೂ ವಿಶ್ವದ ದೇವರನ್ನು ಕಲ್ಪಿಸಲು ಅನುಭವ ಸಾಲದವರು'' (ಬಾ.ಬೆ.೪೮).

ಈ ನಿಲುವು ಉಳಿದ ನವೋದಯ ಬರಹಗಾರರಿಗೆ ಸಾಧ್ಯವಾದಂತಿಲ್ಲ. ಇವರು ಗಾಂಧೀಜಿಯವರ ಕೈಚೀಲದಿಂದ ಈಚೆಗೆ ಬಂದಂತಿಲ್ಲ. ಗಾಂಧಿಯನ್ನು ದತ್ತಕ ಚಿಂತನೆಯನ್ನಾಗಿಯೆ ಇಟ್ಟುಕೊಂಡಿದ್ದಾರೆ. ಹೊರಗಿನಿಂದ ಏನೇ ಬರುತ್ತಿದ್ದರೂ ಇವರು ತಮ್ಮ ಪಾತ್ರೆಯ ಅಳತೆಯಲ್ಲಿ ಅಳೆಯಲು ಹೊರಡುತ್ತಾರೆ. ಅಂದರೆ ತಮ್ಮ ಅನುಭವದ ಒಳಕ್ಕೆ ಅದೆಲ್ಲವನ್ನೂ ಒಗ್ಗಿಸಿಕೊಳ್ಳಲು ಒದ್ದಾಡುತ್ತಾರೆ. ತಮ್ಮ ಅನುಭವವನ್ನು ಇವರು ಎಂದೂ ಅಳದ ಗುಮಾನಿಯಿಂದ ನೋಡಲು, ಅದರಲ್ಲಿ ಭಾರತದ ಅನೇಕ ಮುಖಗಳನ್ನು ಕಾಣಲು ಕಷ್ಟಪಡುತ್ತಾರೆ. ಹಾಗೆ ಕಂಡರೂ ಅದು ಅವರ ತಲೆಗೆ ಹತ್ತದ ಕೈಗೆ ಎಟುಕದ ಏನೋ ಆಗಿ ತೋರುತ್ತದೆ. (ಇಲ್ಲೂ ಮೂರ್ತಿರಾಯರು ಕಾಣುತ್ತಾರೆ).

ನವೋದಯದವರದು ತುಂಬಿಕೊಳ್ಳುವ ಚಿಂತನೆ, ಒಡೆದುನೋಡುವ ವೈಜ್ಞಾನಿಕ ದೃಷ್ಟಿಕೋನ ಅಲ್ಲ.

ಆದ್ದರಿಂದಲೆ ಅವರು ಉದಾರವಾದಿಗಳು. ಉದಾರವಾದವನ್ನು ಭೇದಿಸಿಕೊಂಡು ಹೊರಟಂತೆಲ್ಲ ತಾವೆ ಚಿಂದಿಯಾಗುವ ಒಳ ಭಯವನ್ನು ಅವರು ಅನುಭವಿಸಿದಂತೆ ತೋರುತ್ತದೆ. ಈ ಉದಾರವಾದದಿಂದ ಒಂದು ದೊಡ್ಡ ಅನುಕೂಲ ಭಾರತಕ್ಕೆ ಆಗಿದ್ದಿದೆ. ಅದು ಗ್ರಾಮೀಣ ಬದುಕು ಹಾಗೂ ವ್ಯಕ್ತಿತ್ವಗಳಲ್ಲಿ ದೈವತ್ವವನ್ನು ಕಾಣುವ ಧಾರ್ಮಿಕ ವಿಕೇಂದ್ರೀಕರಣ. ಮಾಸ್ತಿ ಹಾಗೂ ಗೊರೂರರ ಬರಹಗಳಲ್ಲಿ ಇಂಥ ಚಿಂತನೆಯನ್ನು ಧಾರಾಳವಾಗಿ ಕಾಣಬಹುದು. ಏಕಸಂಸ್ಕೃತಿಯ ಭಾರತದ ಪ್ರತಿಪಾದನೆಯಿಂದ ಬಹುಸಂಸ್ಕೃತಿಯ ಭಾರತದ ಕಡೆಗಿನ ಸದುದ್ದೇಶದ ಪಯಣ ಇದು. ನವೋದಯದವರ ವೈಚಾರಿಕತೆ ಮೂಲತಃ ಏಕಸ್ವರೂಪಿ ಹಾಗೂ ಆಡಳಿತಾತ್ಮಕ ಸ್ವರೂಪದ್ದು. 'ಜೈ ಭಾರತ ಜನನಿಯ ತನುಜಾತೆ, ಜಯ ಹೇ ಕರ್ನಾಟಕ ಮಾತೆ'ಯ ಅನನ್ಯತೆಯ ಪ್ರತಿಪಾದನೆಯಲ್ಲಿ ಇದನ್ನು ಕಾಣಬಹುದು. ಹೀಗೆ ದೈವತ್ವವನ್ನು ಭಾರತೀಯತೆಗೆ ಪರ್ಯಾಯ ಮಾಡಿಕೊಂಡು ಕುವೆಂಪು ಬಚಾವಾದರು. ಕಾರಂತರು ಜೀವನದ ದೇವರು-ಧರ್ಮವನ್ನು ವಿಸ್ತರಿಸಿದರು. ಉಳಿದವರು ಅವೆರಡನ್ನೂ ಹಿಡಿದುಕೊಂಡು ಜಗ್ಗಾಡಿದರು.



ಪೊಲೀಸರು ಹಾರಿಸಿದ ಗುಂಡು
ಸ್ವಲ್ಪದರಲ್ಲೇ ತಪ್ಪಿ ಹೋಯಿತೆಂದು
ಮನನೊಂದು ಆತ್ಮಹತ್ಯೆ ಮಾಡ್ಕೊಂಡ

ನವೋದಯ ಬರಹಗಾರರಲ್ಲಿ ಎ. ಎನ್. ಮೂರ್ತಿರಾಯರು ಅವರ ವೈಚಾರಿಕ ನಿಲುವಿಗಾಗಿ ಎದ್ದು ಕಾಣುತ್ತಾರೆ. ಸೃಜನಾತ್ಮಕತೆಯಲ್ಲಿ ದೇವರನ್ನು ಧರ್ಮವನ್ನು ಒಡೆದು ಕಟ್ಟಿಕೊಳ್ಳುವ ಬದಲು ಅವರು ಇರುವ ದೇವರನ್ನು ಪುನರ್ ಸೃಷ್ಟಿ ಮಾಡಿ ಬಳಸಿಕೊಳ್ಳಲು ಪ್ರಯತ್ನಿಸುತ್ತಾರೆ. ದೇವರು-ಧರ್ಮವನ್ನೂ ಅವುಗಳ ಆಚರಣೆ ವಿಧಿಗಳನ್ನೂ ಬೇರೆ ಮಾಡಿ ವಿವರಿಸುವ ಅವರ ಹಠ ನಮಗೆ ಸಂಕಟದಂತೆ ತೋರುತ್ತದೆ. ಅಭಿವ್ಯಕ್ತಿಯಲ್ಲಿ ಅವರು ಪ್ರಾಮಾಣಿಕರು; ಆದರೆ ಅದು ಅವರ ಚಿಂತನೆಯನ್ನು ಗಟ್ಟಿಗೊಳಿಸುವಷ್ಟು ಶಕ್ತಿಶಾಲಿಯಾದುದಲ್ಲ.

ಮೂರ್ತಿರಾಯರು ತಮ್ಮನ್ನು ಮಂಡಿಸಿಕೊಳ್ಳುವ ನೆಲೆಯಿಂದಲೆ ಇದನ್ನು ಪರಿಶೀಲಿಸೋಣ. ಅವರು ಹೇಳುತ್ತಾರೆ :

''ನಾನು ಬರೆಯುತ್ತಿರುವುದು ಯಾವ ವರ್ಗದವನಾಗಿಯೂ ಅಲ್ಲ; ಯಾವ ಜಾತಿಯವನಾಗಿಯೂ ಅಲ್ಲ; ಯಾವ ಜನಾಂಗ, ವೃತ್ತಿ ಅಥವಾ ಮತದವನಾಗಿಯೂ ಅಲ್ಲ. ಕೇವಲ ಮನುಷ್ಯನಾಗಿ (ಮುನ್ನುಡಿ iii, ಸಂ. ಹಿನ್ನೋಟ). ಆದರೆ ಅವರ ಅನುಭವ ಈ ಮಾತನ್ನು ನಿರಾಕರಿಸುತ್ತದೆ. ನೋಡಿ:

''ಆ ಕಾಲದ ಬ್ರಾಹ್ಮಣರೆಲ್ಲರಂತೆ ನಾನೂ ಬ್ರಾಹ್ಮಣರಲ್ಲದವರ ಜೀವನವನ್ನು ಒಳಗಿನಿಂದ ನೋಡಿದವನಲ್ಲ; ಅಸ್ಪೃಶ್ಯರೆನ್ನಿಸಿಕೊಂಡವರ ಜೀವನವಂತೂ ಏನೇನೂ ತಿಳಿಯದು. ತಿಳಿದುಕೊಳ್ಳಬೇಕೆಂಬ ಕುತೂಹಲವಿತ್ತೆಂದು ಹೇಳಲಾರೆ.'' (ಪು. ೧೯ ಸಂ. ಹಿನ್ನೋಟ)

ಇದೇ ಸಂರ್ಭವನ್ನು ಕಾರಂತರಲ್ಲಿ ನೋಡಿ: ''ದಾರಿಯಲ್ಲಿ ಉತ್ತಮರೆನಿಸುವವರ ಮಕ್ಕಳು ಇದಿರಾದರೆ ನನ್ನ ಕೈ ಅವರ ಗಲ್ಲಕ್ಕೆ ನೇರವಾಗಿ ಹೋಗುತ್ತಿತ್ತು. ಹರಿಜನರ ಮಕ್ಕಳು ಇದಿರಾದಾಗ ಮುಂದೆ ಹೋದ ಕೈ ಹಿಂದಕ್ಕೆ ಸರಿಯುತ್ತಿತ್ತು... ನಮ್ಮ ಆವರಣದಿಂದ ನಮ್ಮ ವಿಚಾರಶಕ್ತಿ, ನಡವಳಿಕೆಗಳು ದಾಸ್ಯಕ್ಕಿಳಿಯುವುದರ ಉದಾಹರಣೆಯಿದು'' (ಪು. ೩೩, ಬಾಳ್ವೆಯೇ ಬೆಳಕು). ಇಂಥ ಆತ್ಮಶೋಧನೆ ಇಲ್ಲದೆ ಸಂಪ್ರದಾಯದೊಳಗೆ ಬರೆದರೆ ವಿಚಾರ ಸಿದ್ಧಿಸದು.

ಮೂರ್ತಿರಾಯರ ಈ ಬಗೆಯ ಮಿತಿ ಉದ್ದೇಶಪೂರ್ವಕವಲ್ಲ, ಅವರ ಜೀವನದ ಇನ್‌ಫ್ರಾಸ್ಟ್ರಕ್ಚರ್ ಹಾಗೆ ಇದೆ. ಅದನ್ನವರು ಎರಡು ಕಡೆ ಹೇಳಿಕೊಂಡಿದ್ದಾರೆ: (i) ಭಾರತ ಸಂಸ್ಕೃತಿಯೊಂದಿಗೆ ಮುಖಾಮುಖಿ ಆಗುವಾಗ (ii) ಅಮೆರಿಕಾ ಸಂಸ್ಕೃತಿಗೆ ಮುಖಾಮುಖಿ ಆಗುವಾಗ.

(i) ''ನನ್ನಲ್ಲಿ ರೊಮ್ಯಾಂಟಿಕ್ ಮತ್ತು ವಾಸ್ತವಿಕ ಮನೋವೃತ್ತಿಗಳು, ಪರಸ್ಪರ ವಿರುದ್ಧವಾದ ಮನೋವೃತ್ತಿಗಳು – ಹೇಗೊ ಒಟ್ಟಿಗೆ ಮನೆಮಾಡಿಕೊಂಡಿವೆ ಎಂದು ತೋರುತ್ತದೆ.'' (೧೫೫ ಸಂ.ಹಿ.)

(ii) ''...ರಮ್ಯ ಮನೋವೃತ್ತಿಗೆ ಒಲಿದುಬಿದ್ದ ನನ್ನ ಮನಸ್ಸಿಗೆ ದಂತ, ನವಿಲು, ಕೋಗಿಲೆ, ಶ್ರೀಗಂಧ ಮುಂತಾದ ಸರಕುಗಳು ಪ್ರಿಯವೆ ಹೊರತು ಕಲ್ಲಿದ್ದಲು, ಕಬ್ಬಿಣದ ಸರಳು, ಉಕ್ಕಿನ ಪ್ಲೇಟು ಇತ್ಯಾದಿಗಳು ಪ್ರಿಯವಲ್ಲ. ಆದ್ದರಿಂದ ಕೈಗಾರಿಕೆಯ ಕಡೆಗೆ ಮನಸ್ಸು ಒಲಿಯಲೊಲ್ಲದು'' (೧೬೮ ಅ.ಅ.ಯಾತ್ರೆ).

ಈವೊಂದು ಅಸಂಬದ್ಧ ಸಂಬಂಧವನ್ನು ಸಹ್ಯಗೊಳಿಸುವ ಬದ್ಧತೆಯನ್ನು ಮುಂದಿಟ್ಟುಕೊಂಡು ಬಹಳ ಗಂಭೀರವಾಗಿಯೆ ಧರ್ಮ, ದೇವರು, ಕರ್ಮ, ಜಾತಿ, ಮತ, ಮತಾಂತರ, ಮೀಸಲಾತಿ, ಮಠ, ಭಾಷೆ, ವೇದ, ಮಂತ್ರ, ಶ್ರಾದ್ಧ, ಪೂಜೆ – ಇಂಥವುಗಳ ಬಗ್ಗೆ ಒಂಟೊಂಟಿಯಾಗಿ ಮತ್ತು ಜೊತೆಗೂಡಿಸಿ ಚರ್ಚಿಸುತ್ತಾರೆ. ಎಷ್ಟು ವಿಶಾಲವಾಗಿ ಬರೆಯುತ್ತಾರೆಂದರೆ

(i) ಇದು ದುಷ್ಟತನ ಎಂಬ ಅರಿವೇ ಇಲ್ಲದೆ ನಾವೆಲ್ಲ - ನಾಲ್ಕು ವರ್ಣದವರು ಮತ್ತು ಪಂಚಮರು ಸಂಪ್ರದಾಯವನ್ನು ಮುಂದುವರಿಸಿದೆವು (೧೧೪ ಸಂ.ಹಿನ್ನೋಟ)

(ii) ನಾವು ನಮ್ಮ ಮತದವನೊಬ್ಬ ಇವನು ಹುಟ್ಟಿನಿಂದ ಕೀಳು ಎಂದು ಭಾವಿಸಿದ್ದರಿಂದಾಗಿ ಅವನು ಬೇರೆ ಮತಕ್ಕೆ ಸೇರಿದರೆ, ಅದು ನಮ್ಮ ಅಪರಾಧ. ಆಮಿಷಗಳನ್ನೊಡ್ಡಿ ತಮ್ಮ ಮತಕ್ಕೆ ಸೇರಿಸಿಕೊಂಡರೆ ಅದು ಮಿಷನರಿಗಳ ಅಪರಾಧ (೧೧೫ ಸಂ.ಹಿನ್ನೋಟ)

(iii) ಇನ್ನು ಮುಂದೆ ಜಾತಿಯ ಮಾತೇ ಹೋಗಬೇಕು (೩ಮ. ೬ ಸಂ. ಹಿನ್ನೋಟ)

(iv) ಮಠಾಧಿಪತಿಗಳಿಗೆ ವಿಶೇಷ ಗೌರವವನ್ನೇಕೆ ಸಲ್ಲಿಸಬೇಕು? (೩೨೩ ಸಂ.ಹಿನ್ನೋಟ)

ಇಷ್ಟೆಲ್ಲ ಹೇಳುತ್ತ ಅವರು :

(i) ಸ್ವತಂತ್ರ ವಿಚಾರವಿಲ್ಲದೆ, ಸತ್ಯಾನ್ವೇಷಣೆ ಇಲ್ಲ(೯೧ ಸಂ.ಹಿ.)

(ii) ಸ್ವತಂತ್ರ ವಿಚಾರಕ್ಕೆ ಪ್ರಾಧಾನ್ಯ ಕೊಡದೆ ಪ್ರಮಾಣಕ್ಕೆ ಪ್ರಾಧಾನ್ಯ ಕೊಟ್ಟುದರಿಂದಲೇ ನಮ್ಮ ಸಮಾಜ ಹಸುರುಗಟ್ಟಿದ ಕೊಳದಂತಾಯಿತು (೨೯೨ ಸಂ.ಹಿ.)

ಹೀಗೆ ಮೇಲೇರಿದ ಮೂರ್ತಿರಾಯರು ತಡಕುವ ತಳವನ್ನು ಗಮನಿಸಿ :

(೧) ''ಗಾಯತ್ರಿ ಮಂತ್ರವೂ ಧನಕನಕ ವಸ್ತ್ರಾದಿಗಳೇನನ್ನೂ ಬೇಡುವುದಿಲ್ಲ; ಬುದ್ಧಿ ಯಶಸ್ವಿಯಾಗಿ ಕೆಲಸ ಮಾಡಲು ಅದಕ್ಕೆ ಪ್ರಚೋದನೆ ದೊರೆಯಲಿ ಎಂದು ಮಾತ್ರ ಬೇಡುತ್ತದೆ. ಆದ್ದರಿಂದ ನನಗೆ ತಿಳಿದ ಎಲ್ಲ ಸ್ತೋತ್ರಗಳಿಗಿಂತ ಅದು ಶ್ರೇಷ್ಠವಾದುದು ಎಂದು ನನ್ನ ಈಗಿನ ನಂಬಿಕೆ ''(ಪು ೬೩ ಸ.ಹಿ.)

ಈ ಸಂದರ್ಭದಲ್ಲಿ ಕುವೆಂಪು ಅವರ 'ಧ್ರಾಂ ಧ್ರೀಂ ಧ್ರೂಂ' ಎಂಬ ಕವನವನ್ನು ಜ್ಞಾಪಿಸಿಕೊಳ್ಳಿ:

*ಭೀಷಣ ಮಂತ್ರವು - ಧ್ರಾಂ ಧ್ರೀಂ ಧ್ರೂಂ!...*
*ಆ ಮಂತ್ರದ ವಂಶವನೇನೆಂಬೆನು ?*
*ಅದರ ಪಿತಾಮಹ - ಹ್ರಾಂ ಹ್ರೀಂ ಹ್ರೂಂ!* (೨೧ ಕೋ. ಮತ್ತು ಸೋ ರಷ್ಯ)

ಕುವೆಂಪು ಯಾಕೆ ಈ ಕವನವನ್ನು ಬರೆಯಬೇಕಾಗಿಬಂತು ? ಗಾಯತ್ರಿ ಮಂತ್ರ ಎಲ್ಲರಿಗೂ ಯಾಕೆ ಸಿಗಲಿಲ್ಲ ಹಾಗೂ ಸಿಗುತ್ತಿಲ್ಲ ಎನ್ನುವುದರ ಜೊತೆಗೆ ಅದರ ಮೀಸಲು ಯಾಕೆ ? ಯಾರ ಹಕ್ಕುದಾರಿಕೆ ? ಮತ್ತು ಈಗ ಅದು ಆಧುನಿಕ ಅಭಿವೃದ್ಧಿಯ ಒಂದು ಸೂತ್ರವನ್ನು ಸಮಗಟ್ಟಬಲ್ಲುದೆ ಎಂದು ಯೋಚಿಸದೆ ಹೇಳಿದರೆ ವಿಚಾರ ಎಲ್ಲಿ ಅಡ್ಡದಾರಿ ಹಿಡಿಯುತ್ತದೆ ಎಂಬುದನ್ನು ಯೊಚಿಸಬೇಕಾಗುತ್ತದೆ.

(ii) ''ನಮ್ಮ ಮದುವೆಯ ಸಂದರ್ಭದಲ್ಲಿ ನಡೆಯುವ ದುಂದುವೆಚ್ಚ, ಗಂಡಿನವರ ಅರ್ಥವಿಲ್ಲದ ದರ್ಪ, ಆಡಂಬರ, ಒಡವೆಗಳ, ಸೀರೆಗಳ ಪ್ರದರ್ಶನ ಇವೆಲ್ಲವನ್ನು ಕಂಡು ನಾನು ಅಸಹ್ಯಪಟ್ಟಿದ್ದೇನೆ. ವಧುವಿನ ಪ್ರಥಮ ದರ್ಶನ,

ಧಾರೆಯೆರೆಯುವುದು, ವಧೂವರರು ಒಟ್ಟುಗೂಡಿ ಹೋಮ ಮಾಡುವುದು, ಸಪ್ತಪದಿ, ಒಬ್ಬರಿಗೊಬ್ಬರು ಕೊಡುವ ಆಶ್ವಾಸನೆ, ಸುವಾಸಿನಿಯರು ಆರತಿಯೆತ್ತುವುದು, ಸಭಾಪೂಜೆ, ವೇದೋಕ್ತ, ಆಶೀರ್ವಾದ, ಮಂತ್ರಪಠನೆ - ಇವೆಲ್ಲದರ ಸೌಂದರ್ಯಕ್ಕೆ ಮಾರುಹೋಗಿಯೂ ಇದ್ದೇನೆ.'' (೧೦೧-೧೦೨ ಅ.ಅ. ಯಾತ್ರೆ.)

ಈ ಹೇಳಿಕೆಯ ಮೊದಲ ಹಾಗೂ ಎರಡನೆಯ ಭಾಗದ ಬಗ್ಗೆ ಲೇಖಕರ ಪ್ರತಿಕ್ರಿಯೆಯನ್ನು ಗಮನಿಸಿ, ಅದು ಅಸಹ್ಯ ಮತ್ತು ಸೌಂದರ್ಯಗಳ ನಡುವಣ ತಿಕ್ಕಾಟ. ಎರಡನೆಯ ಭಾಗದ ಕೆಲವು ಆಚರಣೆಗಳು ಹಿತ ಎನಿಸಬಹುದು. ಉಳಿದವು ! ಇವತ್ತಿನ ಅಪರಾಧವನ್ನು ಹಿಂದಿನ ಅಪರಾಧಗಳಿಂದ ತೆಗಳಲು ಸಾಧ್ಯವಾಗುವುದಿಲ್ಲ. ಮೂರ್ತಿರಾಯರು ಮೆಚ್ಚುವ ಎರಡನೆಯ ಪಟ್ಟಿಯ ನಡವಳಿಕೆಗಳ ಆವರಣ ಮೊದಲ ಪಟ್ಟಿಯ ಆಚರಣೆಗಳಿಗಿಂತ ಅಪಾಯಕಾರಿಯಾದುದು.

ಹೀಗೆ ಹಿಂದೂ ಸಂಪ್ರದಾಯಗಳ ಬಗ್ಗೆ ಬಿಡಿಬಿಡಿಯಾಗಿ ಚರ್ಚಿಸಿದ ಮೂರ್ತಿರಾಯರು ತಮ್ಮ 'ದೇವರು' ಕೃತಿಯಲ್ಲಿ ಒಂದು ತೀರ್ಮಾನವನ್ನು ಮುಂದಿಡುತ್ತಾರೆ:

''ದೈವಶ್ರದ್ಧೆ, ಮತಶ್ರದ್ಧೆಗಳು ಸಂಪೂರ್ಣವಾಗಿ ವೈಯಕ್ತಿಕವಾದರೆ, ಅದಕ್ಕೆ ಸಾಮಾಜಿಕ ಮುಖವೊಂದಿಲ್ಲದಿದ್ದರೆ, ಯಾರು ಯಾವ ದೇವರನ್ನು ಬೇಕಾದರೂ ನಂಬಲಿ, ಯಾವ ಮತಕ್ಕಾದರೂ ಸೇರಿರಲಿ ಆಕ್ಷೇಪಿಸಬೇಕಾದ್ದಿಲ್ಲ. ಅದಕ್ಕಾಗಿ ಅವರನ್ನು ಕಡೆಗಣಿಸಬೇಕಾದ್ದಿಲ್ಲ, ಹಳಿಯಬೇಕಾದ್ದಿಲ್ಲ. ಇಂಥ ಸಹನೆಯನ್ನು ಬೆಳಸಿಕೊಂಡು ಬಾಳುವುದು ಅಸಾಧ್ಯ ಎಂದು ಕೆಲವರು ಹೇಳುತ್ತಾರೆ. ಅದು ಸಾಧ್ಯ ಎಂದು ನಾನು ದೃಢವಾಗಿ ನಂಬಿದ್ದೇನೆ (ಪು೧೬೮).''

ವೈಚಾರಿಕ ಧರ್ಮ ಚಿಂತನೆಯ ನೆಲೆಯನ್ನೆ ನಿರಾಕರಿಸುವ ಮನೋಧರ್ಮ ಇದು. ದೈವ ಮತ್ತು ಮತ ವೈಯಕ್ತಿಕ ನೆಲೆಯಲ್ಲಿ ಅಪ್ರಸ್ತುತವಾದುದು. ಧರ್ಮ, ದೇವರು ಮತ್ತು ಅವುಗಳ ನಡವಳಿಕೆಗಳು ಮತವೊಂದರ ಅಭಿವೃದ್ಧಿ ಸಿದ್ಧಾಂತವಾಗಿಯೆ ಹುಟ್ಟಿ ಬಂದವು. ಇವತ್ತಿನ ಅಮೆರಿಕಾದ ಅಭಿವೃದ್ಧಿ ಸಿದ್ಧಾಂತದ ಶೋಷಣೆಗಿಂತ ಇವುಗಳ ಶೋಷಣೆ ಹೆಚ್ಚು ಬರ್ಬರ ಎಂದು ನಮಗೆ ತಿಳಿಯಬೇಕು.

ನಮ್ಮ ಮತಗಳಲ್ಲಿರುವ ದೇವರು, ಧರ್ಮ ಹಾಗೂ ಅವುಗಳ ಆಚರಣೆ, ನೆಮ್ಮದಿ, ಆನಂದ, ಪ್ರೀತಿಯಾಗಿ ಬಳಕೆಯಾಗುವ ಸಂದರ್ಭವಿದ್ದರೆ ಅವು ಸಮರ್ಥಿಸುವ ಮತಾಭಿಮಾನಿಗಳಿಂದ. ಅವು ನಮ್ಮನ್ನು ಭಿನ್ನ ಮಾಡುವ ಅತ್ಯಂತ ಮುಖ್ಯ ನಡವಳಿಕೆಗಳೂ ಆಗಿವೆ. ಮುರ್ತಿರಾಯರು ಮಾಂಸ ತಿನ್ನುವವರ ಪಕ್ಕ ಕುಳಿತು ಊಟ ಮಾಡಲಾರರೆಂದರೆ, ನಿರ್ದಿಷ್ಟ ಆಹಾರಕ್ಕಾಗಿ ಅಮೆರಿಕಾದಲ್ಲೂ ತಡಕಾಡುತ್ತಾರೆಂದರೆ ಅದು ಸಾಮಾನ್ಯ ಅಭಿರುಚಿಯಿಂದ ರೂಢಿಯಾದುದಲ್ಲ ಎಂಬುದನ್ನು ಅವರೇಕೆ ತಿಳಿಯುವುದಿಲ್ಲ? ವೇದ ಮಂತ್ರವನ್ನು ಶ್ರವಣ ಆನಂದಕ್ಕಾಗಿ ಸ್ವೀಕರಿಸುವುದು ವೈಯಕ್ತಿಕ ಅಭಿರುಚಿಯ ಮಾತೇ ಹೊರತು ವೇದವನ್ನು ಕುರಿತ ಮಾತಲ್ಲ. ಇಡೀ ಕನ್ನಡ ಚಿಂತನ ಪರಂಪರೆ ವೇದಗಳ ಬಗ್ಗೆ ಇದುವರೆಗೆ ಪ್ರತಿಕ್ರಿಯಿಸುತ್ತಾ ಬಂದುದಕ್ಕೆ ಏನು ಉತ್ತರ ಕೊಡುತ್ತಾರೆ ?

ಸಂಸಾರವನ್ನು ಅಲ್ಲಗಳೆಯುವ ಸಮಾಜ ಸಿದ್ಧಾಂತಕ್ಕೆ ಮೌಲಿಕ ಪ್ರತಿಕ್ರಿಯೆ ಎನ್ನುವಂತೆ ''ಸಂಸಾರವನ್ನು ಅಲ್ಲಗಳೆಯುತ್ತಿರುವ ನಮಗೆ ನಿಜವಾಗಿ ಆ ಸುಖ ಬೇಕಾಗಿದೆ'' (೪೮೫ ಸಂ.ಹಿ.) ಎಂಬ ಮೂರ್ತಿರಾಯರ ಹೇಳಿಕೆ ಮನನೀಯವಾಗಿದೆ. ವಿಚಾರ ನಿಲ್ಲುವುದು ಇಲ್ಲಿ.

ಆದರೆ ದೇವರ ಬಗ್ಗೆ ಚರ್ಚಿಸ ಹೊರಟ ಮೂರ್ತಿರಾಯರು ದೇವರ ಕೈಯಲ್ಲಿ ನೆಲೆಯಾಗುವುದು ಹೀಗೆ –

''ನಾನು 'ದೇವರು ಇಲ್ಲ' ಎಂದುಕೊಳ್ಳುವಾಗ ನನ್ನ ಮನಸ್ಸಿನಲ್ಲಿರುವುದು ಸಂತೋಷವಲ್ಲ. ನಾನು ಸಂಪ್ರದಾಯದ ಗುಲಾಮನಲ್ಲ. ವಿಚಾರವಾದಿ ಎಂಬ ಹೆಮ್ಮೆಯಲ್ಲ. ನಂಬುವವರನ್ನು ಹೀಯಾಳಿಸಬೇಕೆಂಬ ಅಪೇಕ್ಷೆಯಂತೂ ಖಂಡಿತ ಅಲ್ಲ. 'ದೇವರು ಇಲ್ಲವಲ್ಲ' ಎಂಬ... ಅದನ್ನು 'ವಿಷಾದ' ಎಂದು ಕರೆಯಬಹುದೇನೊ !' (೧೪೩, ದೇವರು, ೧೯೯೧)

ಮಾನವನ ಮಿತಿಗೆ ನಾವು ಕಟ್ಟಿಕೊಂಡ 'ದೇವರು' ಎಂದೂ ಪರಿಹಾರವಲ್ಲ. ಭೂತವನ್ನು ಮೈಮೇಲೆ ಎಳಕೊಳ್ಳುವ ಬಗ್ಗೆ ನನಗೆ ವಿಷಾದವಿದೆ.

ಮೂರ್ತಿರಾಯರು ದೇವರ ರೆಕ್ಕೆಪುಕ್ಕಗಳೆಂಬ ಆಚರಣೆಗಳನ್ನು ಟ್ರಿಮ್ ಮಾಡಿ ಶುದ್ಧ ರೂಪದಲ್ಲಿ ಬಳಸಿಕೊಳ್ಳಲು ಬಯಸುತ್ತಾರೆ; ಅದರಿಂದ ಅವರ ದೇವರು ಹಾರಾಡಲಾರದು; ದೇವರ ಕುರಿತು ಅದೊಂದು ಚರ್ಚೆ, ನಮ್ಮ ಸಮೀಪದ ಬದಲಾದ ಪರಿಸ್ಥಿತಿಗೆ ಪರಿಹಾರ, ಅಷ್ಟೆ.


**ಡಾ|| ಹಿ. ಶಿ. ರಾಮಚಂದ್ರೇಗೌಡ**
೨೨೨, ಹೊಂಬಾಳೆ, ೧ನೇ ಮುಖ್ಯರಸ್ತೆ, ಬಾಪೂಜಿ ಬಡಾವಣೆ, ಮೈಸೂರು - ೫೭೦೦೨೬


## ಸಾದರ ಸ್ವೀಕಾರ

**ಭಾರತದ ಸಂವಿಧಾನ - ಮೂಲಭೂತ ಹಕ್ಕುಗಳು**
*ಡಾ|| ಗೀತಾ ಕೃಷ್ಣಮೂರ್ತಿ*
ಪುಟ : ೫೬ ಬೆಲೆ : ರೂ. ೨೫

**ನೆನಪಿಗೊಂದು ಕೌನ್ಸೆಲಿಂಗ್** *ಗಂಗಾಧರ ಬೆಳ್ಳಾರೆ*
ಪುಟ : ೮೮ ಬೆಲೆ : ರೂ. ೪೦

**ಮಕ್ಕಳ ಬೆಳವಣಿಗೆ ಮತ್ತು ನಾವು** *ಜಿ. ಎಸ್. ಜಯದೇವ್*
ಪುಟ : ೧೨೮ ಬೆಲೆ : ರೂ. ೭೫

**ಶಿಕ್ಷಣ ರೂಪಾಂತರ** *ಲೇ. ಸಂಗ್ರಹ; ಸಂ. : ವಿದ್ಯಾಂಕುರ*
ಪುಟ : ೧೮೪ ಬೆಲೆ : ರೂ. ೧೦೦

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ., ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಬುದ್ಧ ಚರಿತೆ** *ಅನು : ಆರ್ಯ ಆಚಾರ್ಯ*
ಪುಟ : ೧೩೮ ಬೆಲೆ : ರೂ. ೧೦೦
ವಿಮೋಚನಾ ಪ್ರಕಾಶನ, ಅಥಣಿ - ೫೯೧ ೩೦೪, ಬೆಳಗಾವಿ ಜಿಲ್ಲೆ

**ಮಣ್ಣಿನೊಳಗಣ ಮರ್ಮ** (ಕಥಾ ಸಂಕಲನ) *ಚನ್ನಪ್ಪ ಅಂಗಡಿ*
ಪುಟ : ೯೬ ಬೆಲೆ : ರೂ. ೭೦
ಅಕ್ಕ ಪ್ರಕಾಶನ, ೯೩೦, ಕುವೆಂಪುನಗರ, ಬಿ.ಎಂ. ರಸ್ತೆ, ಕುಣಿಗಲ್ - ೫೭೨ ೧೩೦

**ಸಾಹಿತ್ಯ ಸಲ್ಲಾಪ** (ವಿಮರ್ಶಾ ಲೇಖನಗಳು)
*ಡಾ|| ದಸ್ತಗೀರ್‌ಸಾಬ್ ದಿನ್ನಿ*
ಪುಟ : ೯೮ ಬೆಲೆ : ರೂ. ೪೦
ಕನಸು ಪ್ರಕಾಶನ, ೪-೪-೫೭೮/೧, ಮುರಿಗೆಮ್ಮ ಗುಡಿ ಹತ್ತಿರ, ಜಹೀರಾಬಾದ್, ರಾಯಚೂರು - ೫೮೪ ೧೦೧

**ಕ್ಲಿಂಟನ್ ನಗು** (ವೈಚಾರಿಕ ಲೇಖನಗಳು)
*ಡಾ|| ಹಿ. ಶಿ. ರಾಮಚಂದ್ರೇಗೌಡ*
ಪುಟ : ೧೬೪ ಬೆಲೆ : ರೂ. ೧೧೦
ವಿಜಯಲಕ್ಷ್ಮೀ ಪ್ರಕಾಶನ, ೬೫೭, ಕೂಗುಬಂಡೆ ರಸ್ತೆ, E ಮತ್ತು F ಬ್ಲಾಕ್, ಕುವೆಂಪುನಗರ, ಮೈಸೂರು - ೨೩

**ಪುಸ್ತಕ ಸಂಸ್ಕೃತಿಯ ಪರಿವ್ರಾಜಕ ಕು. ಗೋ.**
*ಬೆಳಗೋಡು ರಮೇಶ ಭಟ್*
ಪುಟ : ೭೨ ಬೆಲೆ : ರೂ. ೩೦
ಸುಮುಖ ಪ್ರಕಾಶನ, ಮೂರು ಕಾವೇರಿ, ಕಿನ್ನಿಗೋಳಿ - ೫೭೪ ೧೫೦

**ಚುಳುಕಾದಿರಯ್ಯ** (ಕವನ ಸಂಕಲನ)
*ಡಾ|| ಕಾಶೀನಾಥ ಅಂಬಲಗೆ*
ಪುಟ : ೧೮೨ ಬೆಲೆ : ರೂ. ೭೦

**ಹಾಡುಗಳು ಉಳದಾವ** (ಕವನ ಸಂಕಲನ)
*ಡಾ|| ಕಾಶೀನಾಥ ಅಂಬಲಗೆ*
ಪುಟ : ೮೦ ಬೆಲೆ : ರೂ. ೬೦

**ಮೂವತ್ತಕ್ಕೆ ಮುನ್ನೂರು** (ಹನಿ ಕವಿತೆಗಳು)
*ಡಾ|| ಕಾಶೀನಾಥ ಅಂಬಲಗೆ*
ಪುಟ : ೧೦೮ ಬೆಲೆ : ರೂ. ೬೫

**ಬೇವು-ಬೆಲ್ಲ** (ಮಿನಿ ಕವನಗಳು) *ಡಾ|| ಕಾಶೀನಾಥ ಅಂಬಲಗೆ*
ಪುಟ : ೫೨ ಬೆಲೆ : ರೂ. ೫೦

ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
ಪ್ರಗತಿ ಪ್ರಕಾಶನ, ಜಯನಗರ, ವಿಶ್ವವಿದ್ಯಾಲಯ ರಸ್ತೆ, ಕಲಬುರ್ಗಿ - ೫೮೫ ೧೦೫



# ಹಿಮಾಲಯದ ನಾಡು ಭೂತಾನದಲ್ಲಿ ಎರಡು ದಿನ

ಹಿಮಾಲಯದ ತಪ್ಪಲಿನಲ್ಲಿರುವ ಚಿಕ್ಕ ದೇಶ ಭೂತಾನ್. ಭಾರತದ ಉತ್ತರದಲ್ಲಿ ಸಿಕ್ಕಿಂ, ನೇಪಾಳಗಳ ಮಧ್ಯೆ ಇರುವ ಈ ದೇಶ ಅತ್ಯಂತ ರಮಣೀಯವಾದ ಪ್ರದೇಶ. ನಿಸರ್ಗಪ್ರಿಯರಿಗೆ ಸಗ್ಗ. ಎತ್ತ ನೋಡಿದರೂ ಬೆಟ್ಟಗಳಿಂದ ಆವೃತವಾಗಿರುವ ಈ ಪ್ರದೇಶದಲ್ಲಿ ಎಷ್ಟುದೂರ ಕಣ್ಣು ಹಾಯಿಸಿದರೂ ಹಸಿರು ವನಗಳು ಕಂಗೊಳಿಸುತ್ತವೆ. ಹರಿಯುವ ನದಿಗಳು, ಬೆಟ್ಟದಿಂದ ಧುಮುಕುವ ಸಣ್ಣ ಜಲಪಾತಗಳು, ಎತ್ತರದ ಮರಗಳು ಮನ ತಣಿಸುತ್ತವೆ. ಎತ್ತರದ ಬೆಟ್ಟಗಳ ಮಧ್ಯೆ ಮಟ್ಟಸವಾದ ಪ್ರದೇಶದಲ್ಲಿ ಕಟ್ಟಿಕೊಂಡಿರುವ ವಾಸದ ಮನೆ, ಸುತ್ತಲೂ ಭತ್ತದ ಗದ್ದೆ ಇರುವ ಹಸನಾದ ಭೂಮಿ, ಅಲ್ಲಲ್ಲಿ ಕಾಣುವ ಸೇಬಿನ ತೋಟಗಳು, ಕಿತ್ತಳೆ ಮರಗಳು ಈ ನಾಡಿನ ಭೂಮಿಯ ಫಲವತ್ತತೆಗೆ ಸಾಕ್ಷಿಯಾಗಿ ನಿಂತಿವೆ. ಬಣ್ಣ ಬಣ್ಣದ ಗುಲಾಬಿ ವನಗಳು, ಇತರ ಬಗೆಯ ಹೂವಿನ ಗಿಡಗಳು ಆಕರ್ಷಣೀಯ. ನಗರದ ಜಂಜಡದಿಂದ ದೂರವಿದ್ದು ಹಿಮಾಲಯದ ಪ್ರಶಾಂತ ವಾತಾವರಣವನ್ನು ಆಸ್ವಾದಿಸಲು, ಆರಾಮವಾಗಿ ಗಡಿಬಿಡಿ ಇಲ್ಲದೆ ಸುತ್ತಾಡಿ ಆನಂದಿಸಲು ಸೂಕ್ತವಾದ ಸ್ಥಳ ಭೂತಾನ.

ಈಚೆಗಷ್ಟೇ ಪ್ರವಾಸಿಗರಿಗೆ ತೆರೆದುಕೊಳ್ಳುತ್ತಿರುವ ಹಿಮಾಲಯದ ಈ ನಾಡು ಸಮುದ್ರ ಮಟ್ಟದಿಂದ ಸುಮಾರು ಎಂಟು ಸಾವಿರ ಅಡಿಗಳಷ್ಟು ಎತ್ತರದಲ್ಲಿರುವ ತಂಪು ಪ್ರದೇಶ. ಬೌದ್ಧವಿಹಾರಗಳು, ಭೂತಾನದ ದೊರೆಯ ಅರಮನೆ, ಪಾರ್ಲಿಮೆಂಟ್ ಭವನ, ಮ್ಯೂಸಿಯಂ, ಕರಕುಶಲ ಕಲಾಶಾಲೆ, ಇವೇ ಮೊದಲಾದವು ಪ್ರೇಕ್ಷಣೀಯ ಸ್ಥಳಗಳು. ಇಲ್ಲಿನ ಪ್ರಮುಖ ಆಕರ್ಷಣೆ ಎಂದರೆ ನಿಸರ್ಗ. ಚಾರಣರಿಗೆ ಅತ್ಯಂತ ಪ್ರಿಯವಾದ ತಾಣ. ಅವರಿಗಾಗಿ ವಿಶೇಷಾದ ವ್ಯವಸ್ಥೆಗಳನ್ನೂ ಮಾಡಿದ್ದಾರೆ. ವರ್ಷದಲ್ಲಿ ಜೂನ್‌ನಿಂದ ಸೆಪ್ಟೆಂಬರ್ ತಿಂಗಳ ಕೊನೆಯವರೆಗೆ ಮಳೆಗಾಲವನ್ನು ಬಿಟ್ಟರೆ ಉಳಿದೆಲ್ಲ ದಿನಗಳಲ್ಲೂ ಪ್ರವಾಸಿಗರಿರುತ್ತಾರೆ. ಭೂತಾನಿ ಜನರು ಆಚರಿಸುವ ಹಬ್ಬಹರಿದಿನಗಳಲ್ಲಿ ಹೆಚ್ಚು ಪ್ರವಾಸಿಗರು ಬರುತ್ತಾರೆ. ೪೬,೫೦೦ ಚದರ ಮೀಟರು ವಿಸ್ತೀರ್ಣ ಹೊಂದಿರುವ ಈ ದೇಶದ ಜನಸಂಖ್ಯೆ ಸುಮಾರು ೨೨ ಲಕ್ಷ. ವಲಸೆಗಾರರು ಕಡಿಮೆ. ಉದ್ಯೋಗಕ್ಕಾಗಿ ಬರುವ ಭಾರತೀಯರನ್ನು, ನೇಪಾಳಿಯರನ್ನು, ಟಿಬೆಟ್ಟನ್ನರನ್ನು ಬಿಟ್ಟರೆ ಹೊರಗಿನವರು ಹೆಚ್ಚಾಗಿಲ್ಲ. ಪಶ್ಚಿಮ ಬಂಗಾಳದ ಗಡಿಯಲ್ಲಿರುವ ಫುಯೊಂತ್ ಷೋಲಿಂಗ್, ರಾಜಧಾನಿ ಥಿಂಪು ಮತ್ತು ಪಾರೋ ನಗರಗಳನ್ನು ಬಿಟ್ಟರೆ ಉಳಿದೆಲ್ಲ ಸಣ್ಣ ಪಟ್ಟಣಗಳು. ಕೃಷಿ ಪ್ರಧಾನ ದೇಶ. ತುಂಬಿ ಹರಿಯುವ ನದಿಗಳು, ಜಲಪಾತಗಳು ಇರುವುದರಿಂದ ಜಲವಿದ್ಯುತ್ ಉತ್ಪಾದನೆಗೆ ಹೆಚ್ಚು ಪ್ರಾಮುಖ್ಯತೆ. ಭಾರತದ ನೆರವು-ಸಹಕಾರಗಳಿಂದ ವಿದ್ಯುತ ಸ್ಥಾವರಗಳು ಸ್ಥಾಪನೆಗೊಂಡಿವೆ. ವಿದ್ಯುತ್ ಉತ್ಪಾದನೆಯಲ್ಲಿ ಹೆಚ್ಚಿನ ಭಾಗವನ್ನು ಭಾರತಕ್ಕೆ ಮಾರಾಟ ಮಾಡಲಾಗುತ್ತಿದೆ. ಸರಕಾರದ ಬೊಕ್ಕಸಕ್ಕೆ ಇದರಿಂದ ಸಾಕಷ್ಟು ವರಮಾನ ಬರುತ್ತದೆ.

ರಾಜಾಶ್ರಯದಲ್ಲಿರುವ ಭೂತಾನ ಈಗತಾನೆ ಪ್ರಜಾಪ್ರಭುತ್ವದತ್ತ ಹೆಜ್ಜೆ ಇರಿಸಿದೆ. ಹೊಸ ಸಂವಿಧಾನ ರೂಪಿಸಿಕೊಂಡಿರುವ ಈ ರಾಷ್ಟ್ರ ದೊರೆಯ ನಿರಂಕುಶಾಡಳಿತಕ್ಕೆ ಅಂಕುಶ ಹಾಕಿದೆ. ಪ್ರಜಾಪ್ರಭುತ್ವ ರೀತಿಯಲ್ಲಿ ಚುನಾವಣೆ ಜರುಗಿ ಪಾರ್ಲಿಮೆಂಟರಿ ವ್ಯವಸ್ಥೆ ಜಾರಿಗೊಂಡಿದೆ. ೧೯೭೨ರಲ್ಲಿ ಅಧಿಕಾರಕ್ಕೆ ಬಂದ ದೊರೆ ಜಿಗ್ಮೆ ಸಿಂಗೆ ವಾಂಗ್‌ಚುಕ್ ಈಗಲೂ ಸರಕಾರದ ಅಧಿಪತಿ. ಹೆಚ್ಚಿನ ಅಧಿಕಾರವೆಲ್ಲ ಚುನಾಯಿತ ಪ್ರತಿನಿಧಿಗಳ ಕೈಯಲ್ಲಿ. ಇಲ್ಲಿ ಜನವಸತಿ ಪ್ರಾರಂಭವಾದದ್ದು ಕ್ರಿ.ಶ. ೯ನೇ ಶತಮಾನದಲ್ಲಿ. ಟಿಬೆಟಿಯನ್ನರು ಇಲ್ಲಿಗೆ ಬಂದು ನೆಲೆಸಿ ಜೀವನ ಸಾಗಿಸತೊಡಗಿದರು. ಕ್ರಿ.ಶ. ೧೬ನೇ ಶತಮಾನದಲ್ಲಿ ಲಾಮಾ ಬೌದ್ಧಪಂಥದ ರಾಜ್ಯ ಸ್ಥಾಪನೆಗೊಂಡಿತು. ಬೌದ್ಧ ಸಂನ್ಯಾಸಿ ಮಠಗಳು ಸ್ಥಾಪನೆಗೊಂಡವು. ಹದಿನೆಂಟನೇ ಶತಮಾನದಲ್ಲಿ ಬ್ರಿಟಿಷರ ಆಡಳಿತ ಪ್ರಾರಂಭವಾದ ಮೇಲೆ ಭೂತಾನದ ಶ್ರೀಮಂತ ಉಗ್ಯೆನ್ ದೋರ್ಜಿ ವಾಂಗ್‌ಚುಕ್ ಎಂಬಾತನನ್ನು ದೊರೆಯಾಗಿ ನೇಮಕ ಮಾಡಲಾಯಿತು. ಈಗಲೂ ಅವನ ವಂಶಸ್ಥರೇ ಮುಂದುವರಿಯುತ್ತಿದ್ದಾರೆ. [illegible]

ಸಿ. ಆರ್. ಕೃಷ್ಣರಾವ್


ಪುರಾತನ ಬೀಸುವ ಕಲ್ಲು


ಕಲೆಗಾರ


ಬಿಲ್ಲುಗಾರಿಕೆ

ವ್ಯವಹಾರ, ರಕ್ಷಣೆ ಮೊದಲಾದವನ್ನೆಲ್ಲ ಬ್ರಿಟಿಷರೇ ನೋಡಿಕೊಳ್ಳುತ್ತಿದ್ದರು. ಭಾರತ ಸ್ವಾತಂತ್ರ್ಯ ಪಡೆದ ಮೇಲೆ ಭೂತಾನದ ವಿದೇಶೀ ವ್ಯವಹಾರಗಳನ್ನು ಭಾರತ ಸರಕಾರವೇ ವಹಿಸಿಕೊಂಡಿದೆ. ೧೯೪೯ರಲ್ಲಿ ಮಾಡಿಕೊಂಡ ಭಾರತ-ಭೂತಾನ್ ಒಪ್ಪಂದದ ಪ್ರಕಾರ ವಿದೇಶಾಂಗ ವ್ಯವಹಾರಗಳ ವಿಷಯದಲ್ಲಿ ಭೂತಾನ್ ಭಾರತದ ಸಲಹೆಯಂತೆ ನಡೆದುಕೊಳ್ಳುತ್ತದೆ. ೧೯೭೧ರಲ್ಲಿ ವಿಶ್ವಸಂಸ್ಥೆಯ ಸದಸ್ಯತ್ವವನ್ನು ಪಡೆದ ಭೂತಾನ ೧೯೭೩ರಲ್ಲಿ ಅಲಿಪ್ತ ರಾಷ್ಟ್ರಗಳ ಚಳವಳಿಯ ಸದಸ್ಯತ್ವ ಪಡೆಯಿತು; ೧೯೮೫ರಲ್ಲಿ ಸ್ಥಾಪನೆಗೊಂಡ ದಕ್ಷಿಣ ಏಶಿಯ ಪ್ರಾದೇಶಿಕ ಸಹಕಾರ ಕೂಟದ (ಸಾರ್ಕ್) ಸ್ಥಾಪಕ ಸದಸ್ಯ. ರಾಜಧಾನಿ ಥಿಂಪುನಲ್ಲಿ ಸಾರ್ಕ್‌ನ ಕಚೇರಿ ಸ್ಥಾಪನೆಗೊಂಡಿದೆ. ೧೯೭೪ರಲ್ಲಿ ಪ್ರವಾಸಿಗರಿಗೆ ಭೂತಾನ ತೆರೆದುಕೊಂಡಿದ್ದರೂ ಪ್ರಮುಖ ಬೌದ್ಧ ಸಂನ್ಯಾಸಿ ಮಠಗಳಿಗೆ, ಅರಮನೆಗೆ, ಪಾರ್ಲಿಮೆಂಟ್ ಕಟ್ಟಡ ಹಾಗೂ ಇತರ ಸರಕಾರಿ ಸಂಸ್ಥೆಗಳಿಗೆ ಪ್ರವೇಶದ ನಿರ್ಬಂಧವಿದೆ. ಹಾಗಿದ್ದರೂ ಪ್ರವಾಸಿಗರಿಗೆ ಅನುಕೂಲವಾಗುವಂಥ ಉತ್ತಮ ದರ್ಜೆಯ ಹೋಟೆಲುಗಳಿವೆ. ಪಂಚತಾರಾ ಹೋಟೆಲುಗಳಿಲ್ಲದಿದ್ದರೂ ಅದೇ ಬಗೆಯ ಸೌಕರ್ಯಗಳಿಗೆ ಕೊರತೆ ಏನಿಲ್ಲ. ಸಂಪರ್ಕ ವ್ಯವಸ್ಥೆ ಸಮರ್ಪಕಗೊಂಡಲ್ಲಿ ಮುಂಬರುವ ವರ್ಷಗಳಲ್ಲಿ ಪ್ರವಾಸೋದ್ಯಮ ಅಭಿವೃದ್ಧಿಗೊಂಡು ಹೆಚ್ಚು ಹೆಚ್ಚು ಪ್ರವಾಸಿಗರನ್ನು ಆಕರ್ಷಿಸಲು ಸಾಧ್ಯವಿದೆ.

ಭೂತಾನಕ್ಕೆ ಪ್ರಯಾಣ ಸೌಕರ್ಯ ಇನ್ನೂ ಸಮರ್ಪಕವಾಗಿಲ್ಲ. ರಾಜಧಾನಿ ಥಿಂಪುಗೆ ನೇರ ವಿಮಾನ ಹಾರಾಟ ಇಲ್ಲ. ಸುಮಾರು ೬೦ ಕಿ.ಮೀ. ದೂರದಲ್ಲಿರುವ ಪಾರಾ ಎಂಬಲ್ಲಿ ಅಂತಾರಾಷ್ಟ್ರೀಯ ವಿಮಾನನಿಲ್ದಾಣ ಇದೆ. ಖಾಸಗಿ ವಿಮಾನ ಸಂಸ್ಥೆಯೊಂದು ವಾರದಲ್ಲಿ ಎರಡು ಬಾರಿ ಇಲ್ಲಿಗೆ ಪ್ರಯಾಣಿಕರನ್ನು ಕರೆತರುತ್ತದೆ. ಇದು ಅಷ್ಟು ನಂಬಿಕಾರ್ಹವಾದದ್ದಲ್ಲ. ಅದರ ಹಾರಾಟ ಪ್ರಯಾಣಿಕರ ಸಂಖ್ಯೆಯ ಮೇಲೆ ಅವಲಂಬಿತ. ಭಾರತದಿಂದ ಹೋಗುವವರು ಬಾಗ್ಡೋಗ್ರ ವಿಮಾನ ನಿಲ್ದಾಣದಿಂದ ಹೋಗಬೇಕು. ಇಲ್ಲದಿದ್ದರೆ ರಸ್ತೆ ಪ್ರಯಾಣ. ಪಾರೋದಿಂದ ಥಿಂಪುಗೆ ಎರಡುಗಂಟೆ ಪ್ರಯಾಣ. ಘಟ್ಟದ ರಸ್ತೆ. ಬೆಟ್ಟ ಹತ್ತಿ ಇಳಿಯಬೇಕು. ಭಾರತೀಯ ಪ್ರವಾಸಿಗರು ಎರಡು ಕಡೆಯಿಂದ ಹೋಗುತ್ತಾರೆ : ಒಂದು ಸಿಕ್ಕಿಂನಿಂದ, ಇನ್ನೊಂದು ಪಶ್ಚಿಮ ಬಂಗಾಳದ ಸಿಲಿಗುರಿಯ ವಿಮಾನ ನಿಲ್ದಾಣ ಬಾಗ್ಡೋಗ್ರದಿಂದ. ಬಾಗ್ಡೋಗ್ರಾಗೆ ಬೆಂಗಳೂರಿನಿಂದ ಕೋಲ್ಕತ್ತಾ ಮೂಲಕ ಅಥವಾ ದೆಹಲಿಯಿಂದ ತಲುಪಬಹುದು. ಏರ್ ಇಂಡಿಯಾ ವಿಮಾನ ಸಂಸ್ಥೆಯವರು ಪ್ರವಾಸದ ಎಲ್ಲ ವ್ಯವಸ್ಥೆಯನ್ನೂ ಮಾಡುತ್ತಾರೆ. ಬಾಗ್ಡೋಗ್ರಾವರೆಗೆ ವಿಮಾನದಲ್ಲಿ, ಅನಂತರ ಕಾರಿನಲ್ಲಿ ಪ್ರಯಾಣ. ನಾವು ದೆಹಲಿ ಮಾರ್ಗವಾಗಿ ಬಾಗ್ಡೋಗ್ರ ತಲುಪಿದೆವು. ಇಲ್ಲಿಂದ ಭೂತಾನದ ಗಡಿಗೆ ನಾಲ್ಕು ಗಂಟೆಗಳ ಪ್ರಯಾಣ. ಸಂಜೆ ವೇಳೆಗೆ ಪಶ್ಚಿಮ ಬಂಗಾಳದ ಜಲ್ಪೈಗುರಿ ಗಡಿಯಲ್ಲಿರುವ ಭೂತಾನದ ಪಯೇಕ್ಸ್ ಪೋಲಿಂಗ್ ತಲುಪಿ ಹೋಟೆಲಿನಲ್ಲಿ ತಂಗಿದೆವು. ಈ ಗಡಿ ದಾಟಲು ಪರವಾನಗಿ ಏನೂ ಅಗತ್ಯವಿಲ್ಲ. ಜನ ಓಡಾಡುತ್ತಿರುತ್ತಾರೆ ಸುಲಭವಾಗಿ. ಗಡಿಯಲ್ಲಿ ಭೂತಾನಿನ ರಕ್ಷಣಾ ಸಿಬ್ಬಂದಿಯವರು ಇರುತ್ತಾರೆ. ಭೂತಾನಿನ ನಗರಕ್ಕೂ ಭಾರತದ ನಗರಕ್ಕೂ ವ್ಯತ್ಯಾಸವನ್ನು ಇಲ್ಲಿಯೇ ಗುರುತಿಸಬಹುದು. ಒಂದು ಕಡೆ ಜನಸಂಚಾರ ಹೆಚ್ಚಾಗಿರದ ರಸ್ತೆಗಳು, ಇನ್ನೊಂದು ಕಡೆ ಗಿಜಿ ಗಿಜಿ ಅಂತ ಜನತುಂಬಿರುವ ರಸ್ತೆಗಳು, ಇಕ್ಕೆಲಗಳಲ್ಲೂ ಅಂಗಡಿಗಳು. ತಮಗೆ ಬೇಕಾದ ಸರಕುಗಳನ್ನೂ, ತರಕಾರಿ ಹಣ್ಣುಗಳನ್ನೂ ಕೊಳ್ಳಲು ಭೂತಾನಿನ ಜನ ಜಲ್ಪೈಗುರಿ ಮಾರುಕಟ್ಟೆಗೆ ಬರುತ್ತಾರೆ.

ಭಾರತೀಯ ಪ್ರವಾಸಿಗರಿಗೆ ವೀಸಾ ಬೇಕಾಗಿಲ್ಲ. ಯಾವ ಶುಲ್ಕವೂ ಇಲ್ಲದೆ ಪರವಾನಗಿ ನೀಡುತ್ತಾರೆ. ಫುಯೆಂಕ್ಲೊ ಪೋಲಿಂಗ್‌ನಲ್ಲಿರುವ ಭಾರತೀಯ ಹೈಕಮಿಷನ್ ಕಛೇರಿಯವರು ಗುರುತಿನ ಚೀಟಿ ಪರಿಶೀಲಿಸಿ ಪರವಾನಗಿ ನೀಡಿಕೆಗೆ ಶಿಫಾರಸ್ಸು ಮಾಡುತ್ತಾರೆ. ಭಾವಚಿತ್ರದ ಪ್ರತಿಗಳನ್ನು ನೀಡಿದರೆ ಸಾಕು, ಭೂತಾನಿನ ವಿದೇಶೀ ಪ್ರವಾಸಿ ವಿಭಾಗದವರು ಅನಂತರ ಆಗತ್ಯವಿರುವ ಪರವಾನಗಿ ನೀಡುತ್ತಾರೆ. ಈ ಎಲ್ಲ ಔಪಚಾರಿಕ ವ್ಯವಹಾರ ಮುಗಿಯಲು ಎರಡು ಗಂಟೆ ಹಿಡಿಯುತ್ತದೆ. ಇನ್ನು ೧೭೧ ಕಿ.ಮೀ. ದೂರ ಇರುವ ಥಿಂಪುಗೆ ಪ್ರಯಾಣ. ಈ ದೂರವನ್ನು ಕ್ರಮಿಸಲು ಕನಿಷ್ಠ ೬ ಗಂಟೆ ಹಿಡಿಯುತ್ತದೆ. ಬೆಟ್ಟಗಳನ್ನು ಹಾದುಹೋಗಬೇಕು. ಕಡಿದಾದ ರಸ್ತೆ ತಿರುವುಗಳು ಜಾಸ್ತಿ. ಹಿಮಾಲಯದ ಈ ರಸ್ತೆಯನ್ನು ನಿರ್ಮಿಸಿ, ನಿರ್ವಹಣೆ ಮಾಡುತ್ತಿರುವುದು ಭಾರತ ಗಡಿಭದ್ರತಾ ಸೇನೆ. ರಸ್ತೆಯ ಹೆಚ್ಚಿನ ಭಾಗ ಸರಿಯಾಗಿದೆಯಾದರೂ, ಮಧ್ಯೆ ಸುಮಾರು ೩೦-೪೦ಕಿ.ಮೀ. ದುರಸ್ತಿಗೊಳ್ಳುತ್ತಿದೆ. ಈ ಪರ್ವತ ಪ್ರದೇಶದಲ್ಲಿ ಪ್ರಯಾಣಿಸುವುದೇ ಒಂದು ಸೊಬಗು. ರಸ್ತೆಯ ಒಂದು ಭಾಗದಲ್ಲಿ ಗೋಡೆಯಂತೆ ನಿಂತಿರುವ ಹಿಮಾಲಯ ಬೆಟ್ಟ. ದೊಡ್ಡ ದೊಡ್ಡ ಬಂಡೆಗಳು, ಎತ್ತರದ ಮರಗಳು ಯಾವಾಗ ಬೀಳುವುವೋ ಎಂಬ ಭಯ ಹುಟ್ಟಿಸುತ್ತವೆ. ಇನ್ನೊಂದು ಕಡೆ ಪ್ರಪಾತ. ದಟ್ಟ ಅರಣ್ಯ, ನೆಲವೂ ಕಾಣದ ಕಣಿವೆ. ವಾಹನ ಚಾಲಕ ಎಚ್ಚರ ತಪ್ಪಿದರೆ ಕತೆ ಮುಗಿದಹಾಗೆ. ಮಳೆಗಾಲ ಸಮೀಪಿಸುತ್ತಿದ್ದುದರಿಂದ ನಾವು ಪ್ರಯಾಣಿಸಿದ ಹಿಂದಿನ ದಿನ ರಾತ್ರಿ ಮಳೆ ಸುರಿದಿತ್ತು. ಕೆಲವೆಡೆ ಬಂಡೆಗಳು ಉರುಳಿ ರಸ್ತೆಗೆ ಬಂದಿದ್ದುವು. ರಸ್ತೆ ಪ್ರಯಾಣಕ್ಕೆ ಅನುಕೂಲ ಮಾಡಿಕೊಡಲು ಅರ್ಧಗಂಟೆ ಹಿಡಿಯಿತು. ದೊಡ್ಡ ದೊಡ್ಡ ರೋಡು ಯಂತ್ರಗಳು, ಮಣ್ಣೆತ್ತುವ ಯಂತ್ರಗಳು ಬಂಡೆಗಳನ್ನು ಬದಿಗೆ ತಳ್ಳಿ ವಾಹನ ಸಂಚಾರಕ್ಕೆ ಎಡೆಮಾಡುತ್ತವೆ. ಈ ಅನುಭವ ನಮಗೆ ಮೂರುನಾಲ್ಕು ಕಡೆ ಆಯಿತು. ಈ ದುರ್ಗಮ ಪ್ರದೇಶದಲ್ಲಿ ಸಂಚಾರ ಸುಗಮವಾಗಿಸುವುದಕ್ಕೆ ಗಡಿಭದ್ರತಾ ಸೇನೆಯವರು ಸತತವಾಗಿ ಶ್ರಮಿಸುತ್ತಾರೆ. ಇದು ಭಾರತದ ಭದ್ರತೆಗೂ ಅಗತ್ಯ.

ಥಿಂಪು ಭೂತಾನದ ರಾಜಧಾನಿ. ೫೦,೦೦೦ ಜನಸಂಖ್ಯೆ ಹೊಂದಿರುವ ಈ ನಗರದಲ್ಲಿ ಭೂತಾನದ ದೊರೆಯ ಅರಮನೆ, ಸರಕಾರಿ ಕಟ್ಟಡಗಳು ಮತ್ತು ಧಾರ್ಮಿಕ ಸಂಸ್ಥೆಗಳ ಕಟ್ಟಡಗಳಿವೆ. ಎಲ್ಲವೂ ವಾಂಗ್‌ಚೆ ನದಿಯ ಸುತ್ತಮುತ್ತ ಹರಡಿಕೊಂಡಿವೆ. ಮೊದಲೇ ಹೇಳಿರುವ ಹಾಗೆ ಅರಮನೆಗೆ, ಸರಕಾರಿ ಕಟ್ಟಡಗಳಿಗೆ, ಕೆಲವು ಬೌದ್ಧ ಸಂನ್ಯಾಸಿ ಮಠಗಳಿಗೆ ಪ್ರವಾಸಿಗರಿಗೆ ಪ್ರವೇಶ ನಿಷಿದ್ಧ. ಎಲ್ಲವನ್ನೂ ಹೊರಗಿನಿಂದಲೇ ನೋಡಿಬರಬೇಕು. ಭಾರತದ ಹೈಕಮೀಶನ್ ಕಚೇರಿ, ಸಾರ್ಕ್ ಕಛೇರಿ ಭವ್ಯವಾದ ಕಟ್ಟಡಗಳು. ರಾಜಧಾನಿಯ ರಸ್ತೆಗಳು ಅಗಲವಾಗಿದ್ದು, ಕಸದ ರಾಶಿಗಳಿಲ್ಲದೆ ಶುಭ್ರವಾಗಿವೆ. ಮಾರುಕಟ್ಟೆಯ ಎರಡು ಸಾಲು ರಸ್ತೆಗಳಲ್ಲಿ, ಹೆಚ್ಚಾಗಿ ಮಳಿಗೆಗಳಲ್ಲಿ ಕಾಣುವುದು ಭಾರತದ ಮತ್ತು ಚೀಣಾದ ಸರಕುಗಳು, ಭೂತಾನಿ ಕರಕುಶಲ ವಸ್ತುಗಳ ಮಾರಾಟದ ಮಳಿಗೆಗಳು. ಮೂರುನೂರು ವರ್ಷಗಳ ಹಿಂದಿನ ವಸತಿಗೃಹವೊಂದನ್ನು

ಮ್ಯೂಸಿಯಂ ಆಗಿ ಇರಿಸಿದ್ದಾರೆ. ಇದು ಮೂರು ಅಂತಸ್ತಿನ ಮರದ ದಿಮ್ಮಿಗಳಿಂದ ನಿರ್ಮಾಣಗೊಂಡಿರುವ ಮನೆ. ಕೆಳಗೆಲ್ಲ ಜಾನುವಾರುಗಳಿಗೆ ಸ್ಥಳ ಮತ್ತು ಅಗತ್ಯವಾದ ಮೇವು, ಕಟ್ಟಿಗೆ ದಾಸ್ತಾನು. ಮೊದಲ ಅಂತಸ್ತಿನಲ್ಲಿ ವಾಸ, ಅಡುಗೆಮನೆ ಹಾಗೂ ಅಗತ್ಯವಾದ ಧಾನ್ಯಗಳ ಸಂಗ್ರಹಕ್ಕೆ ವ್ಯವಸ್ಥೆ. ಮೂರನೇ ಅಂತಸ್ತಿನಲ್ಲಿ ಮಲಗುವ ಕೋಣೆ. ವಿಶಾಲವಾದ ಜಾಗ. ಮನೆಯ ಹೊರ ಆವರಣದಲ್ಲಿ ಕಲ್ಲಿನ ವರಳು, ಬೀಸುವ ಕಲ್ಲು ಇವೆ. ದೊಡ್ಡ ಪ್ರಮಾಣದಲ್ಲಿ ಗೋಧಿ ಬೀಸಲು ವಿಶೇಷವಾದ ಬೀಸುವ ಕಲ್ಲೊಂದು ಇದೆ. ಇದನ್ನು ಬೀಸಲು ದನಗಳನ್ನು ಬಳಸುತ್ತಿದ್ದರಂತೆ. ಇಲ್ಲಿಂದ ಸ್ವಲ್ಪ ದೂರದಲ್ಲಿ ಭೂತಾನದ ಕರಕುಶಲ ಕಲಾಶಾಲೆ ಇದೆ. ಇದೊಂದು ಭವ್ಯವಾದ ಕಟ್ಟಡ. ವಿಶಾಲವಾಗಿ ಹರಡಿಕೊಂಡಿರುವ ಇಲ್ಲಿನ ಕೋಣೆಗಳಲ್ಲಿ ಮರದ ಕೆತ್ತನೆ, ಲೋಹದ ಕೆತ್ತನೆ, ಚಿತ್ರಕಲೆ, ಪ್ರಿಂಟಿಂಗ್ ಮತ್ತು ಇತರ ಕುಶಲ ಕಲೆಗಳಲ್ಲಿ ತರಬೇತು ನೀಡುತ್ತಾರೆ. ಇಲ್ಲಿ ವೈಟ್‌ಸಿಡಾರ್ ಎಂಬ ಮೃದುವಾದ ಮರ ಹೆಚ್ಚಾಗಿ ದೊರೆಯುವುದರಿಂದ ಅದರಲ್ಲಿ ನಾನಾಬಗೆಯ ಕೆತ್ತನೆಗಳನ್ನು ಮಾಡುತ್ತಾರೆ. ಹೆಚ್ಚಾಗಿ ಇವೆಲ್ಲ ಬೌದ್ಧಧರ್ಮದ ಪ್ರಭಾವದಿಂದ ನಿರ್ಮಿತವಾಗುವ ಕೆತ್ತನೆಗಳು. ವರ್ಣಚಿತ್ರಗಳ ಶಾಲೆಯಲ್ಲಿ ಚಿತ್ರ ಬಿಡಿಸುತ್ತಾರೆ. ಇಲ್ಲಿನ ಕಲಾವಿದರು ಬಳಸುವ ಬಣ್ಣಗಳಲ್ಲಿ ನೀಲವರ್ಣಕ್ಕೆ ಹೆಚ್ಚು ಪ್ರಾಧಾನ್ಯತೆ. ಬಳಸುವ ಬಣ್ಣಗಳಲ್ಲಿ ಹೊಳಪು ಹೆಚ್ಚು. ಅವರ ವಿಶಿಷ್ಟವಾದ ಕಲೆಗೆ ಮಾರುಕಟ್ಟೆಯೂ ಇದೆ.

ಭೂತಾನದ ಕಟ್ಟಡಗಳ ವಿನ್ಯಾಸ ಭಿನ್ನ. ಎಲ್ಲವೂ ಚೌಕಾಕಾರದ ಕಟ್ಟಡಗಳು. ಛಾವಣಿ ನಮ್ಮ ಮಲೆನಾಡಿನ ಛಾವಣಿಯಂತೆ. ಇವು ಮಳೆಯನೀರು ಹರಿದುಹೋಗಲು ಅನುಕೂಲವಾಗುವಂತೆ ನಿರ್ಮಾಣಗೊಂಡಿರುತ್ತವೆ. ಒಳಗಿನ ಗೋಡೆಗಳಿಗೆ ಹೆಚ್ಚಾಗಿ ಮರವನ್ನು ಬಳಸುತ್ತಾರೆ. ಸುತ್ತಲೂ ಅರಣ್ಯ ಇರುವುದರಿಂದ ಮರ ಸುಲಭವಾಗಿ ದೊರೆಯುತ್ತದೆ. ಚಳಿಗಾಲದಲ್ಲಿ ಬೆಚ್ಚಗಿರಿಸುವುದರಿಂದ ಬೇಸಿಗೆಯಲ್ಲಿ ತಂಪಾಗಿರುವುದರಿಂದ ಮರವನ್ನು ಬಳಸುತ್ತಾರೆ. ಎಲ್ಲ ಕಟ್ಟಡಗಳಲ್ಲೂ ಅಲಂಕರಣಕ್ಕೆ ಹೆಚ್ಚು ಒತ್ತು ನೀಡುತ್ತಾರೆ. ಪ್ರಕಾಶಮಾನವಾದ ಬಣ್ಣಗಳನ್ನು ಬಳಸುತ್ತಾರೆ. ಭೂತಾನಿನ ಜನ ತಮ್ಮ ಸಂಪ್ರದಾಯಗಳಿಗೆ, ಉಡುಪುಗಳಿಗೆ, ಪರಂಪರೆಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತಾರೆ. ಬೌದ್ಧಮತ ಸಂಪ್ರದಾಯದಲ್ಲೇ ಉಡುಪು : ಇದು ಸ್ತ್ರೀ ಪುರುಷರಿಬ್ಬರಿಗೂ ಕಡ್ಡಾಯ. ನೀಳವಾದ ನಿಲುವಂಗಿಯನ್ನು ಸುತ್ತಿಕೊಂಡಿರುತ್ತಾರೆ ಪುರುಷರು. ಸ್ತ್ರೀಯರು ಸೀರೆಯಂಥ ಉದ್ದವಾದ ಬಟ್ಟೆಯೊಂದನ್ನು ಸೊಂಟದ ಸುತ್ತ ಸುತ್ತಿಕೊಂಡಿದ್ದು, ಮೇಲೊಂದು ಅಂಗಿ ಧರಿಸುತ್ತಾರೆ. ಬಣ್ಣಬಣ್ಣದ ಬಟ್ಟೆಗಳನ್ನು ಧರಿಸುವ ಈ ಜನರು ವಿದೇಶೀ ಉಡುಪುಗಳಿಗೆ ಮಾರುಹೋಗಿಲ್ಲ. ಸರಕಾರಿ ನೌಕರರು, ರಾಜಮನೆತನದವರು, ಶ್ರೀಮಂತ ಜಮೀನುದಾರರು ಇರುವುದರಿಂದ ಸಾಕಷ್ಟು ಸಂಖ್ಯೆಯಲ್ಲಿ ಕಾರುಗಳು, ಟ್ಯಾಕ್ಸಿಗಳು ಇವೆ. ಮಾರುಕಟ್ಟೆಯಲ್ಲಿ ವಿಶೇಷವೇನಿಲ್ಲ. ಭೂತಾನೀಯರು ಎಲೆ ಅಡಿಕೆ ಜಗಿಯುವ ಚಾಳಿ ಬೆಳೆಸಿಕೊಂಡಿರುವುದರಿಂದ ರಸ್ತೆಯ ಬದಿಗಳೇ ಪೀಕುದಾನಿ



ಭೂತಾನ ನೃತ್ಯ



ಭೂತಾನ ಸುಂದರಿಯರು

ಗಳಾಗಿಬಿಟ್ಟಿವೆ. ಅದೊಂದು ಬಿಟ್ಟರೆ ರಸ್ತೆ ಶುಚಿಯಾಗಿರುತ್ತದೆ. ಆಬಾಲ ವೃದ್ಧರಾದಿಯಾಗಿ ಎಲ್ಲರೂ ಎಲೆ ಅಡಕೆ ಅಗಿಯುತ್ತಾರೆ. ಊಟ, ತಿಂಡಿ ಎಲ್ಲ ಭಾರತದಲ್ಲಿನಂತೆಯೇ, ಖಾರ ಹೆಚ್ಚು. ಕಾನ್ವೆಂಟ್ ಶಾಲೆಗಳಿರುವುದರಿಂದ ಹೆಚ್ಚಿನವರು ಇಂಗ್ಲಿಷ್ ಮಾತನಾಡುತ್ತಾರೆ. ವಿದ್ಯಾಭ್ಯಾಸ, ವೈದ್ಯಕೀಯ ಸೇವೆ ಉಚಿತ. ಉನ್ನತ ವ್ಯಾಸಂಗಕ್ಕೆ ಭಾರತಕ್ಕೆ ಬರುತ್ತಾರೆ.

ಥಿಂಪುನಿಂದ ಮರುದಿನ ಪಾರೋ ಎಂಬ ನಗರಕ್ಕೆ, ಎರಡು ಗಂಟೆ ಪ್ರಯಾಣ. ರಸ್ತೆ ಸೊಗಸಾಗಿರುವುದರಿಂದ ಪ್ರಯಾಣ ಸುಗಮ. ಇಲ್ಲಿ ನೋಡುವುದಕ್ಕೆ ಒಂದೆರಡು ಬೌದ್ಧ ದೇವಾಲಯಗಳಿವೆ. ಸಾಕಷ್ಟು ಮೆಟ್ಟಿಲುಗಳನ್ನು ಏರಿಹೋಗಬೇಕು. ಹಳೆಯ ಕಾಲದ ಕಟ್ಟಡಗಳು. ಒಳಗೆ ಬೆಳಕಿನ ವ್ಯವಸ್ಥೆ ಸರಿಯಾಗಿರುವುದಿಲ್ಲ. ನೂರಾರು ಬುದ್ಧ ವಿಗ್ರಹಗಳು ಇರುತ್ತವೆ. ಬೌದ್ಧ ಗ್ರಂಥಗಳ ಪಠಣ ನಿರಂತರವಾಗಿ ಸಾಗುತ್ತಿರುತ್ತದೆ. ಹೊಸದಾಗಿ ಒಂದು ಮ್ಯೂಸಿಯಂ ಅನ್ನೂ ನಿರ್ಮಿಸಿದ್ದಾರೆ. ವಿಶಾಲವಾದ ಎತ್ತರದ ಪ್ರದೇಶದಲ್ಲಿರುವ ಈ ಮ್ಯೂಸಿಯಂ ನಾಲ್ಕು ಅಂತಸ್ತಿನ ಕಟ್ಟಡದಲ್ಲಿದೆ. ರಾಜಮನೆತನದ ಸಂಗ್ರಹಗಳನ್ನು ಇಲ್ಲಿ ತಂದಿರಿಸಿದ್ದಾರೆ. ಬೌದ್ಧ ವಿಹಾರಗಳ ಸಂಗ್ರಹಗಳು, ಅವಶೇಷಗಳು, ಚಿತ್ರಗಳು, ಶಿಲ್ಪಗಳು ಎಲ್ಲವನ್ನೂ ಇರಿಸಿದ್ದಾರೆ. ಈ ನಾಲ್ಕು ಅಂತಸ್ತಿನ ಕಟ್ಟಡ ಮರದಿಂದ ನಿರ್ಮಾಣವಾಗಿದೆ. ಹೊರಗಿನಿಂದ ನೋಡುವುದಕ್ಕೆ ನಮ್ಮ ದೊಡ್ಡ ರಥವನ್ನು ನೋಡಿದಂತಾಗುತ್ತದೆ. ಈ ಮ್ಯೂಸಿಯಂಅನ್ನು ಇನ್ನೂ ವಿಸ್ತರಿಸುವ ಯೋಜನೆ ಹಾಕಿಕೊಂಡಿದ್ದಾರೆ. ಇಲ್ಲಿಂದ ಹದಿನೈದು ಕಿಲೋಮೀಟರ್ ದೂರದಲ್ಲಿ ಹಳೆಯ ಕೋಟೆಯೊಂದಿದೆ. ರಸ್ತೆಯಿಂದ ಸುಮಾರು ಮೂರು ನಾಲ್ಕು ಕಿಲೋಮೀಟರು ಬೆಟ್ಟ ಹತ್ತಿ ಹೋಗಬೇಕು. ಚಾರಣರಿಗೆ ಪ್ರಿಯವಾದ ಸ್ಥಳ. ಅಲ್ಲಿ ನಿರಂತರವಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳು ಜರಗುತ್ತಿರುತ್ತವೆ. ಪಿಕ್‌ನಿಕ್‌ಗಾಗಿ ಹೋಗುವವರು ಅವರು ನೃತ್ಯ, ಸಂಗೀತಗಳಲ್ಲಿ ಮಗ್ನರಾಗಿರುತ್ತಾರೆ. ಎತ್ತರದ ಪ್ರದೇಶದಲ್ಲಿರುವ ಕೋಟೆಯ ಮೇಲಿನಿಂದ ಸುತ್ತಲ ಪ್ರದೇಶ ನೋಡಲು ರಮಣೀಯ. ಪ್ರೇಕ್ಷಣೀಯ ಸ್ಥಳಗಳು ಹೆಚ್ಚಿಲ್ಲದಿದ್ದರೂ ಭೂತಾನ ಪ್ರವಾಸ ಅವಿಸ್ಮರಣೀಯ. ಗಿರಿಧಾಮವೊಂದರಲ್ಲಿ ಯಾವ ಗಡಿಬಿಡಿಯೂ ಇಲ್ಲದೆ ಎರಡು ದಿನ ವಿಶ್ರಾಂತಿ ಪಡೆದು ಹಿಂದಿರುಗಬಹುದು. ನಾವು ವಾಪಸ್ಸಾಗುವ ದಿನ ಪ್ರಧಾನಿ ಮನಮೋಹನ ಸಿಂಗ್ ಭೂತಾನಿಗೆ ಅಧಿಕೃತ ಭೇಟಿ ನೀಡುತ್ತಿದ್ದರು. ಐವತ್ತು ವರ್ಷಗಳ ನಂತರ ಭಾರತದ ಪ್ರಧಾನಿಯೊಬ್ಬರು ನೀಡುತ್ತಿದ್ದ ಭೇಟಿ ಅದು. ರಸ್ತೆಗಳೆಲ್ಲ ಸಿಂಗಾರಗೊಂಡಿದ್ದವು. ರಸ್ತೆಯ ಬದಿಯಲ್ಲಿ ಬಿಸಿಲಿನಲ್ಲಿ ಶಾಲಾಮಕ್ಕಳು ಭಾರತ-ಭೂತಾನ್ ಬಾವುಟ ಹಿಡಿದು ಕಾಯುತ್ತಿದ್ದುವು. ಅದನ್ನು ನೋಡಿ ಸ್ವಲ್ಪ ಮುಜುಗರವಾಯಿತು.

ಪಿ. ಆರ್. ಕೃಷ್ಣರಾವ್
[illegible], ಬೆಂಗಳೂರು - [illegible]



ಉತ್ತರ ಕರ್ನಾಟಕದಲ್ಲಿ ಮನೆಮಾತಾಗಿರುವ ಶ್ರೀಕೃಷ್ಣಪಾರಿಜಾತವನ್ನು ರೂಢಿಯಲ್ಲಿ 'ಪಾರಿಜಾತ' ಎಂದು ಕರೆಯುತ್ತಾರೆ. ದೇವಲೋಕದ ಪಾರಿಜಾತ ಪುಷ್ಪದ ಸುತ್ತ ಹೆಣೆಯಲ್ಪಟ್ಟಿರುವ ಕಥಾ ಪ್ರಸಂಗವನ್ನು ಪಾರಿಜಾತ ಎಂಬ ಹೂವಿನ ಹೆಸರಿನಿಂದ ಗುರುತಿಸುತ್ತಿರುವುದು ಒಂದು ವಿಶೇಷ.

ಶ್ರೀಕೃಷ್ಣಪಾರಿಜಾತ ದುಷ್ಟಗಾನರೂಪದ ಒಂದು ಹಾಡುಗಬ್ಬ. ಅದನ್ನು ರಚಿಸಿದವನು ರಾಯಚೂರು ಜಿಲ್ಲೆಯ ಅಪರಾಳ ಗ್ರಾಮದ 'ತಮ್ಮಣ್ಣ' ಎಂಬ ಕವಿ. ಅವನ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳನ್ನು ಪರಿಶೀಲಿಸಿ ೧೭೬೦ರ ಸುಮಾರಿಗೆ ಜನಿಸಿರಬೇಕು ಎಂದು ಗುರುತಿಸಬಹುದು. ಕ್ರಿ.ಶ. ೧೮೦೦ರ ಒಳಗೆ ಅವನು 'ಶ್ರೀಕೃಷ್ಣ ಪಾರಿಜಾತ' ರಚಿಸಿರಬೇಕೆಂದು ಡಾ॥ ಬಸವರಾಜ ಮಲಶೆಟ್ಟರು ಅಭಿಪ್ರಾಯಪಡುತ್ತಾರೆ.

ಶ್ರೀಕೃಷ್ಣಪಾರಿಜಾತ ಏಕ ಕವಿ ಕೃತಿಯಲ್ಲ. ಅಪರಾಳ ತಮ್ಮಣ್ಣನು ಕೊರವಂಜಿ ಭಾಗದವರೆಗೆ ಮಾತ್ರ ಬರೆದನು. ನಂತರದ ಕೊನೆಯ ಭಾಗವನ್ನು ಬಗಲಿ ಸದಾಶಿವಯ್ಯನು ಬರೆದು ಪೂರ್ತಿಗೊಳಿಸಿದನು ಎಂಬ ಮುಖ್ಯ ವಿಚಾರವನ್ನು ಡಾ॥ ಮಲಶೆಟ್ಟರು ಸ್ಪಷ್ಟಪಡಿಸಿದ್ದಾರೆ. ಶ್ರೀಕೃಷ್ಣ ಪಾರಿಜಾತಕ್ಕೆ ಇಬ್ಬರು ಕೃತಿಕಾರರಿದ್ದರೂ ಅದು ಅಪರಾಳ ತಮ್ಮಣ್ಣನ ಕೃತಿ ಮಾತ್ರ ಎಂದು ಪ್ರಚಾರದಲ್ಲಿದೆ. ಇದರ ನಾಯಕ ಶ್ರೀಕೃಷ್ಣನಾಗಿದ್ದರೂ ಕೃತಿಯ ಬಹಳಷ್ಟು ಭಾಗವು ಸತ್ಯಭಾಮೆಯ ವಿರಹ, ಕೋಪ, ತಾಪ, ಭಕ್ತಿ, ಸಂಯೋಗ, ಶೃಂಗಾರಗಳಿಗೆ ಮೀಸಲಾಗಿದೆ. ಇದು ಮುಖ್ಯವಾಗಿ ಶೃಂಗಾರವನ್ನು ಗಮನದಲ್ಲಿ ಇಟ್ಟುಕೊಂಡು ರಚಿಸಿರುವಂಥ ಕೃತಿ. ಕವಿಯು ಶೃಂಗಾರದ ಅಭಿವ್ಯಕ್ತಿಗೆ ಸತ್ಯಭಾಮೆಯನ್ನು ಮಾಧ್ಯಮವನ್ನಾಗಿ

# ಡಾ॥ ಬಸವರಾಜ ಮಲಶೆಟ್ಟಿಯವರ ಶ್ರೀಕೃಷ್ಣಪಾರಿಜಾತ – ಒಂದು ವಿಶ್ಲೇಷಣೆ

ಪ್ರೊ॥ ಲಕ್ಷ್ಮಣ ಎಂ. ಕರಿಭೀಮಣ್ಣನವರ

ಮಾಡಿಕೊಂಡಿದ್ದಾನೆ. ಸತ್ಯಭಾಮೆಯ ಉದ್ವೇಗಪೂರ್ಣ ಚಿತ್ರ ಹಲವು ಭಾವ ಬಣ್ಣಗಳ ಅಸಮ ಸಮ್ಮಿಶ್ರಣವಾಗಿದೆ.

ಮೂಲತಃ ಹಾಡುಗಬ್ಬವಾದ ಶ್ರೀಕೃಷ್ಣಪಾರಿಜಾತವು ಪಾರಾಯಣ ಗ್ರಂಥವಾಗಿ ಬ್ರಾಹ್ಮಣ ಸಮುದಾಯದಲ್ಲಿ ಪ್ರಚಾರ ಗೊಂಡಿತ್ತು. ಈ ಹಾಡುಗಬ್ಬವನ್ನು ರಂಗಪ್ರಯೋಗಕ್ಕೆ ಅಳವಡಿಸಿ ಅದನ್ನೊಂದು ಬಯಲಾಟವನ್ನಾಗಿಸಿದವನು ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲ್ಲೂಕಿನ ಕುಲಗೋಡ ಗ್ರಾಮದ ತಮ್ಮಣ್ಣ. ತಮ್ಮಣ್ಣನಿಗೆ ಮರಾಠಿ ರಂಗಭೂಮಿ ಕುರಿತು ಗಾಢವಾದ ಪರಿಚಯವಿತ್ತು. ಅದರ ಪ್ರೇರಣೆಯಿಂದ ಅವನು ಪಾರಿಜಾತದ ರಂಗರೂಪ ತಯಾರಿಸಿದನು. ಮಹಾರಾಷ್ಟ್ರದ ತಮಾಷಾದ 'ಗೌಳಣ' ಭಾಗವನ್ನು ತಮ್ಮಣ್ಣನು ನೇರವಾಗಿ ಸ್ವೀಕರಿಸಿದನು. ಗೊಲ್ಲತಿಯೊಬ್ಬಳು ಹಾಲು ಮೊಸರು ಮಾರಲು ಬರುವುದು, ಅವಳನ್ನು ಬಾಲಕೃಷ್ಣನು ತಡೆದು ನಿಲ್ಲಿಸಿ ಚೇಷ್ಟೆ ಮಾಡುವುದು ಈ ಗೌಳಣದ ವಸ್ತುವಾಗಿದೆ. ತಮ್ಮಣ್ಣನು ಸ್ವೀಕರಿಸಿದ ಮರಾಠಿ 'ಗೌಳಣ'ವು ಪಾರಿಜಾತದಲ್ಲಿ 'ಗೊಲ್ಲತಿ' ಭಾಗವೆಂದು ಹೆಸರು ಪಡೆಯಿತು. ಈ ಕನ್ನಡ ಆವೃತ್ತಿಗೆ ತಮ್ಮಣ್ಣನು ಬೇರೆ ಬೇರೆ ಆಕರಗಳಿಂದ ಹಾಡುಗಳನ್ನು ಸಂಗ್ರಹಿಸಿದನು. ಅಂಥ ಆಕರಗಳನ್ನು ಡಾ॥ ಮಲಶೆಟ್ಟಿಯವರು ಗುರುತಿಸಿದ್ದಾರೆ. ಕೆಲವು ಹಾಡುಗಳನ್ನು ತಮ್ಮಣ್ಣನು ತಾನೇ ರಚಿಸಿದನು. ಕೆಲವು ಹಾಡುಗಳನ್ನು ಸ್ನೇಹಿತರಿಂದ ಬರೆಸಿಕೊಂಡನು.

ನಂತರ ಕೌಜಲಗಿ ನಿಂಗಮ್ಮನಿಂದ ಪಾರಿಜಾತವು ಹೆಚ್ಚು ಪ್ರಚಾರ ಪಡೆಯಿತು. ಪಾರಿಜಾತ ಪರಂಪರೆಗೆ ಭದ್ರ ಬುನಾದಿ ಹಾಕಿದ ಶ್ರೇಯಸ್ಸು ನಿಸ್ಸಂಶಯವಾಗಿ ನಿಂಗಮ್ಮನಿಗೆ ಸಲ್ಲುತ್ತದೆ. ೧೯೦೦ರ ವೇಳೆಗೆ ನಿಂಗಮ್ಮನ ಪಾರಿಜಾತ ಉತ್ತರ ಕರ್ನಾಟಕದಲ್ಲಿ ಮನೆಮಾತಾಗಿತ್ತು. ಅವಳು ಸ್ವತಃ ಶ್ರೇಷ್ಠ ಕಲಾವಿದೆಯಾಗಿದ್ದಳಲ್ಲದೆ ಹುಕ್ಕೇರಿ ಸಿದ್ಧರಾಮಪ್ಪ, ಬಡಕುಂದ್ರಿ ಬಸಪ್ಪ, ಮಹಾಲಿಂಗಪುರ ರಾಜಾಸಾಹೇಬ, ನಸಲಗೊಂಡದಲಗಾ ಶಿವಗುರಿ ಬರಗಿ ರಾಚಯ್ಯ, ನಾವಲಗಟ್ಟಿ ಸಾಂವಕ್ಕ – ಮುಂತಾದ ಪ್ರಸಿದ್ಧ ನಟ-ನಟಿಯರನ್ನು ತನ್ನ ಗರಡಿಯಲ್ಲಿ ಪಳಗಿಸಿ, ಬೆಳಕಿಗೆ ತಂದಳು. ಆವಳು ಒಮ್ಮೊಮ್ಮೆ ಪಾರಿಜಾತವನ್ನು ಗೊಲ್ಲತಿ-ರುಕ್ಮಿಣಿ ಭಾಗ, ಸತ್ಯಭಾಮೆಯ ಭಾಗ, ಕೊರವಂಜಿ ಭಾಗ – ಹೀಗೆ ಮೂರು ಭಾಗಗಳಲ್ಲಿ ವಿಂಗಡಿಸಿ ಮೂರುದಿನ ಪ್ರಯೋಗಿಸುತ್ತಿದ್ದಳೆಂದು ಆಟ ನೋಡಿದ ಕೆಲವರು ಹೇಳುತ್ತಾರೆ.

ಒಟ್ಟಾರೆಯಾಗಿ ಈ ನಾಟಕ ಅಪರಾಳ ತಮ್ಮಣ್ಣನಿಂದ ರಚಿಸಲ್ಪಟ್ಟು ಕುಲಗೋಡ ತಮ್ಮಣ್ಣನಿಂದ ರಂಗಭೂಮಿಗೆ ಬಂತು. ನಿಂಗಮ್ಮನಿಂದ ಪ್ರಚಾರಕ್ಕೆ ಬಂದಿರುವುದು ವಾಸ್ತವ ಸಂಗತಿ. ಆದರೆ ಪಾರಿಜಾತದ ರಂಗಪ್ರತಿಯನ್ನು ಪರಿಶೀಲಿಸಿದಾಗ ಅಷ್ಟರಿಯ ಸಂಗತಿಯೊಂದು ಗೋಚರಿಸುತ್ತದೆ. ನೂರಾರು ಕಲಾವಿದರು ಹೊಸ ಹಾಡುಗಳನ್ನು ಸೇರಿಸಿದ್ದಾರೆ. ಮೂಲ ಪಠ್ಯದ ಕೆಲವು ಹಾಡುಗಳನ್ನು ಕೈಬಿಟ್ಟಿದ್ದಾರೆ. ಆಶುಸಂಭಾಷಣೆಗಳ ಮೂಲಕ ರಂಗಪ್ರಯೋಗಕ್ಕೆ ನಿಶ್ಚಿತ ಆಕಾರ ನೀಡಿದ್ದಾರೆ. ಆದ್ದರಿಂದ ಸದ್ಯಕ್ಕೆ ಪ್ರಯೋಗಗೊಳ್ಳುತ್ತಿರುವ ಪಾರಿಜಾತ ಸಮಷ್ಟಿ ಸೃಷ್ಟಿ ಎಂಬುದನ್ನು ಗಮನದಲ್ಲಿ ಇಡಬೇಕು ಎಂದು ಮಲಶೆಟ್ಟಿಯವರು ಒತ್ತಿ ಹೇಳಿದ್ದಾರೆ.

'ಪಾರಿಜಾತದ ಭಾಗವತ'ನು ಭಾರತೀಯ ರಂಗಭೂಮಿಗೆ ಕರ್ನಾಟಕದ ಒಂದು ವಿಶಿಷ್ಟ ಕಾಣಿಕೆಯಾಗಿದ್ದಾನೆ. ಪಾರಿಜಾತ ಪ್ರಯೋಗವನ್ನು ಗಮನದಲ್ಲಿ ಇಟ್ಟುಕೊಂಡು ಹೇಳುವುದಾದರೆ ಪಾರಿಜಾತದ ನಾಯಕ 'ಭಾಗವತ'ನೆಂದೇ ಹೇಳಬೇಕು ಎಂಬುದನ್ನು ಡಾ॥ ಮಲಶೆಟ್ಟಿಯವರು ಅರ್ಥಪೂರ್ಣವಾಗಿ ವಿಶ್ಲೇಷಿಸಿದ್ದಾರೆ. ಭಾಗವತನು ಇತರ ಪಾತ್ರಗಳಿಗೆ ದೂತಿ (ಸೇವಕಿ) ಆಗಿರುತ್ತಾನೆ. ಭಾಗವತನು ಪ್ರೇಕ್ಷಕರ ಲೆಕ್ಕದಲ್ಲಿ ಸೂತ್ರಧಾರ. ಪಾತ್ರಗಳ ಲೆಕ್ಕದಲ್ಲಿ ದೂತಿ – ಹೀಗೆ ಇವನಿಗೆ ಎರಡು ಮುಖಗಳು. ಸೂತ್ರಧಾರನ ಮಾದರಿಯ ವ್ಯಕ್ತಿ ಇವನಾಗಿದ್ದರೂ ಇವನನ್ನು ಸೂತ್ರಧಾರನೆಂದು ಕರೆಯದೇ ಭಾಗವತನೆಂದು ಕರೆಯುವುದು ರೂಢಿಯಲ್ಲಿದೆ. ಭಾಗವತನು ಆರಂಭದಿಂದ ಕೊನೆಯವರೆಗೆ ರಂಗದ ಮೇಲಿರುತ್ತಾನೆ. ಪಾತ್ರಗಳು ತಾವು ತಾವೇ ಸಂಭಾಷಣೆಗೆ ತೊಡಗುವುದಕ್ಕಿಂತ ಹೆಚ್ಚಾಗಿ ಈ ಭಾಗವತನೊಂದಿಗೆ ಮಾತು-ಚರ್ಚೆಗೆ ನಿಲ್ಲುತ್ತವೆ.

ಒಟ್ಟಾರೆ, ಪ್ರೇಕ್ಷಕರ ಕಣ್ಣಿಗೆ ಹೆಚ್ಚಾಗಿ ಕಾಣುವ

*(ತಿರುವಿ ನೋಡಿ)*

# ನಗರಗಳಲ್ಲಿ ಬೆಳೆಯುತ್ತಿರುವ ಕೊಳೆಗೇರಿಗಳು

ಎಂ. ಬಿ. ನಾಯ್ಕ

ಒಂದು ಕಾಲವಿತ್ತು. ಹಳ್ಳಿಗಳಲ್ಲಿ ವಾಸಿಸುವ ಜನರು ವ್ಯವಸಾಯದಲ್ಲಿ ನಿರತರಾಗಿ ಸಂತೃಪ್ತರಾಗಿದ್ದರು. ಆಗ ಅವರನ್ನು ನಗರಗಳಿಗೆ ಬನ್ನಿ ಎಂದು ಒತ್ತಾಯ ಮಾಡಿ ಕರೆದರೂ ನಗರಗಳ ಕಡೆಗೆ ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಆದರೆ ಈಗ ಕಾಲ ಬದಲಾಗಿದೆ. ನಗರೀಕರಣ ಬೆಳೆದಂತೆ ಉದ್ಯೋಗಾವಕಾಶಗಳು ಲಭ್ಯವಾಗಿ ಭಾರತದ ಎಲ್ಲ ಹಳ್ಳಿಗಳ ಜನರೂ ನಗರಗಳ ಕಡೆಗೆ ದೌಡಾಯಿಸುತ್ತಿದ್ದಾರೆ. ಹಳ್ಳಿಗಳಲ್ಲಿ ಬೇಸಾಯ ಬಿಟ್ಟರೆ ಬೇರೆ ಉದ್ಯೋಗಗಳಿಗೆ ಅವಕಾಶವಿಲ್ಲ. ಈಗೀಗ ಮಳೆಯಾಧಾರಿತ ಕೃಷಿಯಲ್ಲಿ ಉತ್ಪತ್ತಿಯಿಲ್ಲ. ಉತ್ಪತ್ತಿಯಾದರೂ ಬೆಲೆಗಳ ಏರಿಕೆ ಮತ್ತು ದಲ್ಲಾಳಿಗಳ ಕೈವಾಡದಿಂದ ಖರ್ಚುಮಾಡಿದ ಹಣವೂ ಸಿಗುತ್ತಿಲ್ಲ. ಲಾಭಕ್ಕಿಂತ ಹಾನಿಯೇ ಹೆಚ್ಚು. ಹಾಗಾಗಿ ಇದ್ದ ಅಲ್ಪಸ್ವಲ್ಪ ಜಮೀನನ್ನು ಮಾರಾಟಮಾಡಿ ಹಳ್ಳಿಯ ಜನರು ನಗರಗಳ ಕಡೆಗೆ ಮುಖ ಮಾಡಿದ್ದಾರೆ. ಇದು ನಗರಗಳಲ್ಲಿ ಹೊಸ ಸಮಸ್ಯೆಗಳಿಗೆ ಕಾರಣವಾಗಿದೆ. ಸಂಯುಕ್ತ ರಾಷ್ಟ್ರ ಸಂಸ್ಥೆಯ ಇತ್ತೀಚಿನ ಒಂದು ವರದಿಯಂತೆ ಹೆಚ್ಚುತ್ತಿರುವ ನಗರೀಕರಣದ ಫಲವಾಗಿ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಹೊಸ ಸಮಸ್ಯೆ ತಲೆದೋರಿದೆಯಂತೆ. ಆ ವರದಿಯಂತೆ ಭಾರತದ ಗ್ರಾಮೀಣ ಭಾಗದಲ್ಲಿ ಉದ್ಯೋಗಾವಕಾಶಗಳೇ ಕಡಿಮೆಯಾಗಿದೆಯಂತೆ. ಅದಕ್ಕಾಗಿ ಅವರೆಲ್ಲ ಉದ್ಯೋಗವನ್ನರಸಿ ನಗರಗಳ ಕಡೆಗೆ ಪಲಾಯನ ಮಾಡುತ್ತಿದ್ದಾರೆ ಎನ್ನಲಾಗಿದೆ. ಬೆಂಗಳೂರಿನಂತಹ ನಗರಗಳಲ್ಲಿ ಉನ್ನತ ದರ್ಜೆಯಲ್ಲಿರುವ ಐಟಿ, ಬಿಟಿ, ಇಂಜಿನಿಯರಿಂಗ್, ಟೆಲಿಕಮ್ಯೂನಿಕೇಶನ್, ಫಾರ್ಮಾಸ್ಯೂಟಿಕಲ್ ಮೊದಲಾದ ಕಡೆಗಳಲ್ಲಿ ಕೆಲಸಮಾಡುವ ನೌಕರರು ತಮ್ಮ ಐಷಾರಾಮಿ ಬಂಗಲೆಗಳಲ್ಲಿ ವಾಸಿಸುತ್ತ, ಕಾರುಗಳಲ್ಲಿ ಕಾರುಬಾರು ಮಾಡುತ್ತ ಜೀವನ ಸಾಗಿಸುತ್ತಿದ್ದಾರೆ. ಆದರೆ ಗ್ರಾಮೀಣ ಪ್ರದೇಶಗಳಿಂದ ಕೆಲಸ ಹುಡುಕಿಕೊಂಡು ನಗರಗಳಿಗೆ ಬಂದ ಜನರು ವಾಸಕ್ಕೆ ಮನೆಯಿಲ್ಲದೆ ಕೊಳೆಗೇರಿಗಳನ್ನು ಸೇರಿ, ಹೆಚ್ಚಿನ ಪ್ರಮಾಣದಲ್ಲಿ ಕೊಳೆಗೇರಿಗಳು ಸೃಷ್ಟಿಯಾಗುತ್ತಿವೆ. ಅಲ್ಲಿ ಅವರಿಗೆ ಸರಿಯಾದ ವಸತಿ ಸೌಲಭ್ಯವಿಲ್ಲ. ನೀರಿನ ಸೌಕರ್ಯವಿಲ್ಲ. ವಿದ್ಯುತ್ತಿನ ಸೌಲಭ್ಯವಿಲ್ಲ. ಶಿಕ್ಷಣವಂತೂ ದೂರದ ಮಾತು. ಇಂಥ ಸಾಮಾನ್ಯ ನಾಗರಿಕ ಸೌಲಭ್ಯಗಳಾವುವೂ ಇಲ್ಲದ ಕೊಳೆಗೇರಿಗಳಲ್ಲಿ ಅವರ ಜೀವನ ನರಕಸದೃಶ. ಹೀಗಾಗಿ ನಗರಗಳಲ್ಲಿ ಅತಿ ಶ್ರೀಮಂತರ ಅಟ್ಟಹಾಸದ ಮೇಜವಾನಿ ಒಂದು ಕಡೆಯಾದರೆ ಇನ್ನೊಂದು ಕಡೆ ಕನಿಷ್ಠ ನಾಗರಿಕ ಸೌಲಭ್ಯವೂ ಇಲ್ಲದೆ ಪರದಾಡುತ್ತಿರುವ ಸಾಮಾನ್ಯ ಜನರ ಗೋಳು. ಇಷ್ಟಾದರೂ ನಗರಗಳಿಗೆ ಬಂದ ಗ್ರಾಮೀಣ ಜನರು ಮತ್ತೆ ತಿರುಗಿ ಹಳ್ಳಿಗಳಿಗೆ ಹೋಗಲು ಇಷ್ಟಪಡುವುದಿಲ್ಲ. ಕಾರಣವೇನೆಂದರೆ, ಅಲ್ಲಿ ಅವರಿಗೆ ಜಮೀನುಗಳಿಲ್ಲ. ಮಾಡಲು ಉದ್ಯೋಗಗಳಿಲ್ಲ. ಅದಕ್ಕಾಗಿ ಎಷ್ಟೇ ಕಷ್ಟವಾದರೂ ನಗರಗಳಲ್ಲಿಯೇ ಹೇಗಾದರೂ ಹೊಂದಿಕೊಂಡು ಇರಲು ಬಯಸುತ್ತಾರೆ.

ಬೆಂಗಳೂರಿನಂತಹ ನಗರಗಳಲ್ಲಿ ಉನ್ನತ ದರ್ಜೆಯಲ್ಲಿರುವ ಐಟಿ, ಬಿಟಿ, ಇಂಜಿನಿಯರ್, ಟೆಲಿಕಮ್ಯೂನಿಕೇಶನ್, ಫಾರ್ಮಾಸ್ಯೂಟಿಕಲ್ ಮೊದಲಾದ ಕಡೆಗಳಲ್ಲಿ ಕೆಲಸಮಾಡುವ ನೌಕರರು ತಮ್ಮ ಐಷಾರಾಮಿ ಬಂಗಲೆಗಳಲ್ಲಿ ವಾಸಿಸುತ್ತ, ಕಾರುಗಳಲ್ಲಿ ಕಾರುಬಾರು ಮಾಡುತ್ತ ಜೀವನ ಸಾಗಿಸುತ್ತಿದ್ದಾರೆ. ಆದರೆ ಗ್ರಾಮೀಣ ಪ್ರದೇಶಗಳಿಂದ ಕೆಲಸ ಹುಡುಕಿಕೊಂಡು ನಗರಗಳಿಗೆ ಬಂದ ಜನರು ವಾಸಕ್ಕೆ ಮನೆಯಿಲ್ಲದೆ ಕೊಳೆಗೇರಿಗಳನ್ನು ಸೇರಿ, ಹೆಚ್ಚಿನ ಪ್ರಮಾಣದಲ್ಲಿ ಕೊಳೆಗೇರಿಗಳು ಸೃಷ್ಟಿಯಾಗುತ್ತಿವೆ. ಅಲ್ಲಿ ಅವರಿಗೆ ಸರಿಯಾದ ವಸತಿ ಸೌಲಭ್ಯವಿಲ್ಲ, ನೀರಿನ ಸೌಕರ್ಯವಿಲ್ಲ, ವಿದ್ಯುತ್ತಿನ ಸೌಲಭ್ಯವಿಲ್ಲ. ಶಿಕ್ಷಣವಂತೂ ದೂರದ ಮಾತು. ಇಂಥ ಸಾಮಾನ್ಯ ನಾಗರಿಕ ಸೌಲಭ್ಯಗಳಾವುವೂ ಇಲ್ಲದ ಕೊಳೆಗೇರಿಗಳಲ್ಲಿ ಅವರ ಜೀವನ ನರಕಸದೃಶ.

ನಗರೀಕರಣದ ಜೊತೆಜೊತೆಗೆ ನಗರಗಳಲ್ಲಿರುವ ಬಡವರ ಸಂಖ್ಯೆಯೂ ದಿನದಿಂದ ದಿನಕ್ಕೆ ಏರುತ್ತಿದೆ. ಯೋಜನಾ ಆಯೋಗದ ಇತ್ತೀಚಿನ ಒಂದು ಸರ್ವೇಕ್ಷಣೆಯಂತೆ ನಗರಗಳಲ್ಲಿರುವ ನಿರ್ಗತಿಕರ ಸಂಖ್ಯೆ ಕಳೆದ ಐದು ವರ್ಷಗಳಲ್ಲಿ ಸುಮಾರು ೬ ಕೋಟಿ ೮೦ ಲಕ್ಷಗಳಾಗಿವೆಯಂತೆ. ಅವರಿಗೆ ಅಲ್ಲಿ ಯಾವ ಸವಲತ್ತುಗಳೂ ಇಲ್ಲ. ಇಂತಹ ಕೊಳೆಗೇರಿಗಳಲ್ಲಿ ವಾಸಿಸುವ ಶೇಕಡ ೫೭ರಷ್ಟು ಮಕ್ಕಳು ಪೌಷ್ಟಿಕಾಂಶಗಳ ಕೊರತೆಯಿಂದ ಬಳಲುತ್ತಿದ್ದಾರೆ. ಅಷ್ಟೇ ಅಲ್ಲ, ಅನಾರೋಗ್ಯದ ಕಾರಣದಿಂದ ಮೃತರಾಗುವ ಮಕ್ಕಳ ಮರಣದ ಸಂಖ್ಯೆಯೂ ಹೆಚ್ಚು. ಅಲ್ಲಿ ಅವರಿಗೆ ಸರಿಯಾದ ಶೌಚಾಲಯದ ಸೌಲಭ್ಯವಿಲ್ಲ. ಶುದ್ಧವಾದ ಕುಡಿಯುವ ನೀರಿನ ಸೌಲಭ್ಯವಿಲ್ಲ. ಎಷ್ಟೋ ಕೊಳೆಗೇರಿಗಳು ಸರಕಾರದ ಅಧಿಕಾರದ ವ್ಯಾಪ್ತಿಯೊಳಗೆ ಬರುವುದಿಲ್ಲ.



ಈಗ ಭಾರತ ಜಾಗತೀಕರಣ, ಉದಾರೀಕರಣ ಮತ್ತು ಮುಕ್ತ ವ್ಯಾಪಾರಕ್ಕೊಳಪಟ್ಟ ದೇಶವಾದ್ದರಿಂದ ಅದಕ್ಕೆ ಸಂಬಂಧಪಟ್ಟಂತೆ ನಗರಗಳು ಬೆಳೆಯುವುದು ಸಹಜವೇ ಆಗಿದೆ. ನಗರಗಳು ಬೆಳೆದಂತೆ ಹೇರಳವಾದ ಉದ್ಯೋಗಾವಕಾಶಗಳು ಲಭ್ಯವಾಗುತ್ತಿರುವುದು ಸಹಜ ಸಂಗತಿ. ಹಾಗಾಗಿ ಉದ್ಯೋಗವನ್ನರಸಿ ನಗರಗಳಿಗೆ ವಲಸೆ ಬರುತ್ತಿರುವವರ ಸಂಖ್ಯೆಯೂ ಹೆಚ್ಚಾಗುತ್ತಿದೆ. ವ್ಯಾಪಾರೀಕರಣದಲ್ಲಿ ಮಾತ್ರ ನಾವು ಅಮೆರಿಕಾ, ಇಂಗ್ಲೆಂಡ್, ಜಪಾನ್ ದೇಶಗಳ ನೀತಿಯನ್ನನುಸರಿಸಿ ಕೇವಲ ಅದರ ಲಾಭವನ್ನಷ್ಟೇ ತೆಗೆದುಕೊಳ್ಳುವ ಕಡೆಗೆ ಗಮನ ಹರಿಸಿದ್ದೇವೆ. ಆ ಲಾಭದಲ್ಲಿ ಬಡಜನರ ಕೊಡುಗೆಯಿರುವುದನ್ನು ಗಮನಿಸಬೇಕು ಮತ್ತು ಬಂದ ಲಾಭದಲ್ಲಿ ಅವರ ಪ್ರಾಥಮಿಕ ಸೌಲಭ್ಯಗಳಿಗೆ ಕೆಲವಷ್ಟು ಹಣವನ್ನು ಖರ್ಚುಮಾಡಬೇಕು. ಅಮೆರಿಕಾದಂಥ ಮುಂದುವರೆದ ದೇಶಗಳಲ್ಲಿಯೂ ಕೊಳೆಗೇರಿಗಳಿವೆ. ಆದರೆ ನಮ್ಮಲ್ಲಿರುವಷ್ಟು ಹೀನಮಟ್ಟದಲ್ಲಿಲ್ಲ. ಅಲ್ಲಿನ ಸರಕಾರ ಎಲ್ಲಾ ಹಂತಗಳಲ್ಲಿ ತಕ್ಕಷ್ಟು ಸೌಲಭ್ಯ ಒದಗಿಸಲು ಯತ್ನಿಸುತ್ತದೆ. ಏನೇ ಇರಲಿ, ಅಮೆರಿಕಾ, ಜಪಾನ್, ಇಂಗ್ಲೆಂಡ್, ಜರ್ಮನಿ, ಚೀನಾ ದೇಶಗಳನ್ನೇ ಅನುಸರಿಸುವುದನ್ನು ಬಿಟ್ಟು ನಮ್ಮ ದೇಶದ ಕೊಳೆಗೇರಿ ನಿವಾಸಿಗಳ ಅಭಿವೃದ್ಧಿಯ ಕಡೆಗೂ ಗಮನಹರಿಸುವುದು ಅತ್ಯವಶ್ಯವಾಗಿದೆ. ನಮ್ಮ ದೇಶದ ಅಭಿವೃದ್ಧಿಯಲ್ಲಿ ಅವರ ಪಾಲೂ ಇದೆ. ನಮ್ಮ ದೇಶದಲ್ಲಿರುವ ಸುಮಾರು ೫೧೬೧ ಸಣ್ಣ ಮತ್ತು ದೊಡ್ಡ ನಗರಗಳನ್ನು ಸಂಪೂರ್ಣವಾಗಿ ಅಭಿವೃದ್ಧಿಪಡಿಸುವುದರತ್ತ ಗಮನ ಹರಿಸಬೇಕು. ಅಷ್ಟೇ ಅಲ್ಲ, ಸ್ವಸ್ಥ, ಸುರಕ್ಷಿತ ಮತ್ತು ಅಪರಾಧರಹಿತ ನಗರಗಳನ್ನಾಗಿ ಮಾಡುವುದರತ್ತ ಲಕ್ಷ್ಯವಹಿಸಬೇಕು.

ಇನ್ನೊಂದು ಮುಖ್ಯವಾದ ವಿಚಾರವೇನೆಂದರೆ ಕೆಲಸವನ್ನು ಹುಡುಕಿಕೊಂಡು ನಗರಗಳಿಗೆ ಓಡಿಬರುವಂಥ ಜನರ ಸಂಖ್ಯೆ ಕಡಿಮೆಯಾಗಬೇಕು. ಅದಕ್ಕಾಗಿ ಅವರಿರುವಲ್ಲೇ ಎಂದರೆ ಗ್ರಾಮೀಣ ಪ್ರದೇಶದಲ್ಲಿ ಅವರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡಬೇಕು. ಗಾಂಧೀಜಿಯವರ ಗ್ರಾಮಸ್ವರಾಜ್ಯದ ಕನಸು ನನಸಾಗಬೇಕು. ಅದಕ್ಕಾಗಿ ಗ್ರಾಮಗಳಲ್ಲಿ ಕೋಳಿ ಸಾಕಾಣಿಕೆ, ಹೈನುಗಾರಿಕೆ, ಆಹಾರ ಸಂಸ್ಕರಣಾ ಘಟಕ, ಗ್ರಾಮೀಣ ಭಾಗದಲ್ಲಿ ಬೆಳೆಯುವ ಬೆಳೆಯನ್ನಾಧರಿಸಿ ಸಣ್ಣ-ಪುಟ್ಟ ಕೈಗಾರಿಕೆಗಳು ಸ್ಥಾಪಿತವಾಗಿ ಗ್ರಾಮೀಣ ಜನರಿಗೆ ನಿರಂತರ ಕೆಲಸ ಸಿಗುವಂತೆ ನೋಡಿಕೊಳ್ಳಬೇಕು. ಈ ದಿಸೆಯಲ್ಲಿ ನಮ್ಮ ರಾಜ್ಯ ಸರಕಾರದ ಸ್ವಸಹಾಯ ಸಂಘಗಳು, ವಿಶೇಷತಃ ಸ್ತ್ರೀ ಶಕ್ತಿ ಸಂಘಗಳು, ಗ್ರಾಮೀಣ ಭಾಗದಲ್ಲಿ ಅಲ್ಲಿಯ ಜನರಿಗೆ ಅನುಕೂಲವಾಗುವಂಥ ಗೃಹಕೈಗಾರಿಕೆಗಳನ್ನು ಸ್ಥಾಪಿಸುವಲ್ಲಿ ಸಾಲ ಸೌಲಭ್ಯಗಳನ್ನು ಒದಗಿಸುತ್ತಿರುವುದು ಶ್ಲಾಘನೀಯವಾಗಿದೆ. ಇದರಿಂದ ನಗರಗಳಿಗೆ ಹಳ್ಳಿಗಳಿಂದ ಕೆಲಸ ಹುಡುಕಿಕೊಂಡು ಬರುವವರ ಸಂಖ್ಯೆ ಸ್ವಲ್ಪವಾದರೂ ಕಡಿಮೆಯಾದೀತೇನೋ ?

ಅಂತೆಯೇ ನಗರಗಳಲ್ಲಿ ಹೊಸ ಕೊಳೆಗೇರಿಗಳ ಸಂಖ್ಯೆ ಬೆಳೆಯದಂತೆ ನೋಡಿಕೊಳ್ಳಬೇಕು. ಈಗಾಗಲೇ ಇರುವ ಕೊಳೆಗೇರಿಗಳಿಗೆ ಅಗತ್ಯವಿದ್ದ ಪ್ರಾಥಮಿಕ ಸೌಲಭ್ಯಗಳನ್ನು ಒದಗಿಸಿಕೊಡುವ ನಿಟ್ಟಿನಲ್ಲಿ ಸರಕಾರ ತೀವ್ರ ನಿಗಾ ವಹಿಸಬೇಕು. ಅದಕ್ಕಾಗಿ ಸರಕಾರದ ಅಭಿವೃದ್ಧಿ ಯೋಜನೆಯಡಿ ಹೊಸ ಹೊಸ ಯೋಜನೆಗಳನ್ನು ಹಮ್ಮಿಕೊಳ್ಳಬೇಕಿದೆ. ಥೈಲಾಂಡ್‌ನಲ್ಲಿನ ಸರಕಾರ ಮತ್ತು ಅಲ್ಲಿನ ಎನ್.ಜಿ.ಓ.ಗಳು ಕೊಳೆಗೇರಿಗಳನ್ನು ಅಭಿವೃದ್ಧಿಪಡಿಸಲು ಒಂದು ನಿರ್ದಿಷ್ಟ ಯೋಜನೆಯನ್ನೇ ರೂಪಿಸಿಕೊಂಡಿವೆ. ಅಂಥದ್ದೇ ಒಂದು ಯೋಜನೆಯನ್ನು ನಮ್ಮಲ್ಲಿಯೂ ಸಹ ಅನುಷ್ಠಾನಕ್ಕೆ ತಂದು ಕೊಳೆಗೇರಿಗಳನ್ನು ಅಭಿವೃದ್ಧಿಪಡಿಸುವಂತಾಗಬೇಕು. ಭಾರತದಂತಹ ದೇಶದಲ್ಲಿ ಎಲ್ಲರೂ ಉಳ್ಳವರೇ ಇರಲು ಸಾಧ್ಯವಿಲ್ಲ. ಇಲ್ಲದವರ ಕಡೆಗೂ ಗಮನ ಹರಿಸಬೇಕು. ಆದರೆ ನಮ್ಮ ದೇಶದ ಪರಿಸ್ಥಿತಿ ವಿಚಿತ್ರ. ನಮ್ಮ ರಾಜಕಾರಣಿಗಳಿಗೆ ಕೊಳೆಗೇರಿ ನಿವಾಸಿಗಳ ನೆನಪಾಗುವುದು ಕೇವಲ ಚುನಾವಣೆ ಬಂದಾಗ ಮಾತ್ರ. ಚುನಾವಣೆ ಘೋಷಣೆಯಾದ ಮೇಲೆ ಮೂಗು ಮುಚ್ಚಿಕೊಂಡಾದರೂ ಸ್ಲಂ ಏರಿಯಾದ ಮನೆಗಳಿಗೆ ಎಡತಾಕುವ ರಾಜಕಾರಣಿಗಳು ಅವರಿಂದ ವೋಟು ಪಡೆದು ಆರಿಸಿಬಂದ ನಂತರ ಆ ಕಡೆ ಹೊರಳಿಯೂ ನೋಡುವುದಿಲ್ಲ. ಅವರಿಗೆ ಕೊಳೆಗೇರಿಗಳ ನೆನಪಾಗುವುದು ಮತ್ತೆ ಚುನಾವಣೆ ಘೋಷಣೆಯಾದ ಮೇಲೆಯೇ! ಹೀಗಿರುವಾಗ ಕೊಳೆಗೇರಿಗಳ ಅಭಿವೃದ್ಧಿ ಹೇಗೆ ತಾನೆ ಸಾಧ್ಯ ? ಆದ್ದರಿಂದ, ಬರಿ ವೋಟಿನ ರಾಜಕಾರಣವನ್ನಷ್ಟೇ ಮಾಡದೆ ನಿಜವಾದ ಮಾನವೀಯ ಕಳಕಳಿಯಿಂದ ನಗರಗಳಲ್ಲಿರುವ ಗ್ರಾಮೀಣ ಭಾಗಗಳಲ್ಲಿರುವ ಬಡವರ, ನಿರ್ಗತಿಕರ ಉದ್ಧಾರ ಮಾಡಲು ಸರಕಾರ ಶಕ್ತಿಮೀರಿ ಶ್ರಮಿಸಬೇಕು. ಹಾಗಾದಾಗ ಮಾತ್ರ ನಮ್ಮ ದೇಶವು ಎಲ್ಲಾ ದೃಷ್ಟಿಯಿಂದಲೂ ಆರೋಗ್ಯವಂತ, ಸ್ವಾವಲಂಬಿ ದೇಶವಾಗಲು ಸಾಧ್ಯವಿದೆ.

ಎಂ. ಬಿ. ನಾಯ್ಕ್
ರಂಗಸ್ವಾಮಿ ಪ್ರಸನ್ನ, ಮೊದಲನೇ ಮುಖ್ಯರಸ್ತೆ, ಹತ್ತನೇ ಅಡ್ಡರಸ್ತೆ, ಶಾಂತಿನಗರ, ಹಾಸನ - ೫೭೩ ೨೦೧

---

*ಶ್ರೀಕೃಷ್ಣಪಾರಿಜಾತ... (೫೨ನೇ ಪುಟದಿಂದ)*

ಪಾತ್ರವೆಂದರೆ ಭಾಗವತನೇ. ಸ್ತುತಿ ಪದ ಮತ್ತು ಕಥಾರಂಭದ ಪದಗಳನ್ನು ಹಾಡಿ ಉಳಿದ ಸಮಯದಲ್ಲಿ ಪಾತ್ರಗಳ ಹಾಡಿಗೆ ಹಿಮ್ಮೇಳ ಒದಗಿಸುತ್ತಾನೆ. ಆದ್ದರಿಂದ ಶ್ರೀಕೃಷ್ಣ ಪಾರಿಜಾತದಲ್ಲಿ ಭಾಗವತನು ಸೂತ್ರಧಾರ, ದೂತಿ ಮತ್ತು ಹಿಮ್ಮೇಳ ಈ ಮೂವರ ಸಮ್ಮಿಶ್ರಣವಾಗಿದ್ದಾನೆ ಎಂಬುದು ಡಾ॥ ಮಲಶೆಟ್ಟಿಯವರ ಅಭಿಪ್ರಾಯವಾಗಿದೆ.

ಪಾರಿಜಾತದ ಸಂಗೀತವನ್ನು ಕುರಿತು ಡಾ॥ ಮಲಶೆಟ್ಟಿಯವರು ತಲಸ್ಪರ್ಶಿಯಾದ ವಿಚಾರವನ್ನು ಮಂಡಿಸಿದ್ದಾರೆ. ಅಪರಾಳ ತಮ್ಮಣ್ಣನ ಪಾರಿಜಾತದ ಹಾಡುಗಳಿಗೆ ಕರ್ನಾಟಕ-ಸಂಗೀತದ ರಾಗ-ತಾಳಗಳ ನಿರ್ದೇಶನವಿದೆ. ಅಂದಮೇಲೆ ಆರಂಭದ ಘಟ್ಟದಲ್ಲಿ ಅವು ಕರ್ನಾಟಕ ಸಂಗೀತ ಶೈಲಿಯಲ್ಲಿ ಹಾಡಲ್ಪಟ್ಟಿದ್ದವು ಎಂಬುದು ಡಾ॥ ಮಲಶೆಟ್ಟಿಯವರ ಅಭಿಪ್ರಾಯ. ಆ ಕೃತಿಯು ಒಂದು ಪಾರಾಯಣ ಗ್ರಂಥವಾಗಿ ಪ್ರಚಾರ ಪಡೆದ ಮೇಲೆ ಅದರ ಹಾಡುಗಾರಿಕೆಯಲ್ಲಿ ಶಾಸ್ತ್ರೀಯತೆ ಕಡಿಮೆಯಾಗಿ ದೇಸೀಯ ಅಂಶಗಳು ಸೇರಿಕೊಂಡವು. ಆರಂಭಕಾಲದ ಪಾರಿಜಾತದ ಸಂಗೀತ ಸಂಪೂರ್ಣ ಕರ್ನಾಟಕೀಯವಾಗಿತ್ತು, ನಿಂಗಮ್ಮನ ಮೇಳದಲ್ಲಿ ಕರ್ನಾಟಕ ಸಂಗೀತಕ್ಕೆ ಹೊಂದುವಂತೆ ಪಿಟೀಲು ಮೃದಂಗಗಳು ಪಕ್ಕವಾದ್ಯಗಳಾಗಿದ್ದವು. ಮುಂದಿನ ಹಂತದಲ್ಲಿ ಪಾರಿಜಾತಕ್ಕೆ ಹಿಂದೂಸ್ತಾನಿ ಸಂಗೀತದ - ಪ್ರವೇಶವಾದುದರ ವಿವರಗಳನ್ನು ಮಲಶೆಟ್ಟರು ಹೀಗೆ ವಿವರಿಸಿದ್ದಾರೆ: ''೧೯೨೦ರಿಂದೀಚೆಗೆ ಉತ್ತರ ಕರ್ನಾಟಕದಲ್ಲಿ ಹಿಂದೂಸ್ತಾನಿ ಸಂಗೀತದ ಗಾಳಿ ಜೋರಿನಿಂದ ಬೀಸಿತು. ಕರ್ನಾಟಕ ಸಂಗೀತ ಜನರಿಂದ ದೂರವಾಗ ತೊಡಗಿತು. ನಿಂಗಮ್ಮನ ಆಟದಲ್ಲಿ ಹಿಂದೂಸ್ತಾನಿ ಸಂಗೀತ ಕಲಿತ ಕೆಲವು ನಟರು ಪ್ರವೇಶಿಸಿದ್ದರಿಂದ ಚಾರಿತ್ರಿಕ ಬದಲಾವಣೆ ನಡೆಯಿತು.'' ಹೀಗೆ ನಿಂಗಮ್ಮನ ಆಟದಲ್ಲಿ ಸೇರಿಕೊಂಡ ಹಿಂದೂಸ್ತಾನಿ ಸಂಗೀತ ಕಲಿತ ಗಾಯಕ ನಟರೆಂದರೆ ಮಹಲಿಂಗಪುರದ ರಾಜಾಸಾಹೇಬ, ನನದಿಗೋಂದಳಿ, ಸಿರಗುಪ್ಪಿ ಕಾಡಗೌಡ ಮುಂತಾದವರು. ಇವರು ಕೆಲವು ಹಾಡುಗಳನ್ನು ಹಿಂದೂಸ್ತಾನಿಯ 'ಖ್ಯಾಲ್' ಮಾದರಿಯಲ್ಲಿ ತೀರ ವಿಲಂಬಿತ ಲಯದಲ್ಲಿ ಹಾಡುವ ಪರಿಪಾಠ ಬೆಳೆಸಿದರು. ಆ ನಂತರದ ಪಾರಿಜಾತ ನಟರು ಇವರನ್ನು ಅನುಕರಿಸಲಾರಂಭಿಸಿದರು. ಬರುಬರುತ್ತಾ ಕರ್ನಾಟಕ ಸಂಗೀತ ಹಿಂದೆ ಸರಿದು ಹಿಂದೂಸ್ತಾನಿ ಸಂಗೀತವು ಪಾರಿಜಾತ ಆಟವನ್ನು ವ್ಯಾಪಿಸಿ ನಿಂತಿತು. ಅಲ್ಲದೆ ಪಾರಿಜಾತದಲ್ಲಿ ನಾಟ್ಯ-ಸಂಗೀತ, ಲಘುಸಂಗೀತ ಮುಂತಾದವು ಬೆರೆತಿರುವುದನ್ನು ಮಲಶೆಟ್ಟರು ಗುರುತಿಸಿದ್ದಾರೆ. ಶ್ರೀಕೃಷ್ಣಪಾರಿಜಾತವು ಕಂಪನಿ ನಾಟಕಗಳ ನೇರ ಪ್ರಭಾವಕ್ಕೆ ಒಳಗಾಗಿದೆ. ನಾಟಕಗಳಲ್ಲಿರುವಂತೆ ಇಲ್ಲಿಯೂ ಪಾತ್ರಗಳು ತಮ್ಮ ಹಾಡನ್ನು ತಾವೇ ಹಾಡುವ ಪರಂಪರೆ ಇರುವುದನ್ನು ಗಮನಿಸಬಹುದು.

ಪಾರಿಜಾತವನ್ನು ಪ್ರದರ್ಶಿಸುವ ಮೇಳಗಳು ತಮಗೆ ಅನುಕೂಲ ಕಂಡಂತೆ ಪ್ರಯೋಗ ಶೈಲಿಯನ್ನು ರೂಢಿಸಿಕೊಂಡಿವೆ. ಒಂದೊಂದು ಮೇಳದ ಪ್ರಯೋಗ ಒಂದೊಂದು ತೆರನಾಗಿರುತ್ತದೆ. ಯಾವುದೇ ಒಂದು ಮೇಳದ ಪಾರಿಜಾತ ಪ್ರಯೋಗ ಎಷ್ಟೇ ಆದರೂ ಸಮಗ್ರವೆನಿಸಲಾರದು. ಈ ಕೊರತೆಯನ್ನು ಮನಗಂಡ ಡಾ॥ ಬಸವರಾಜ ಮಲಶೆಟ್ಟಿಯವರು ತಾವು ಬಹುದಿನಗಳಿಂದ ನೋಡುತ್ತ ಬಂದ ಬೇರೆ ಬೇರೆ ಮೇಳಗಳ ಪಾರಿಜಾತ ಪ್ರಯೋಗಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಸಾಮಾನ್ಯವೆನಿಸುವಂಥ ಒಂದು ರಂಗಪಠ್ಯವನ್ನು ಸಿದ್ಧಗೊಳಿಸಿದ್ದಾರೆ. ಅವರ ಈ ಶ್ರೀಕೃಷ್ಣಪಾರಿಜಾತ ಸಂಕಲನ ಕೃತಿ – ಯಾವುದೇ ಒಂದು ಮೇಳದ ರಂಗ ಪಠ್ಯವಾಗಿರದೆ ಎಲ್ಲ ಮೇಳಗಳ ಸಾಮಾನ್ಯ ಪಠ್ಯವಾಗಿದೆ. ಪಾರಿಜಾತದ ಬಗ್ಗೆ ಸಮಗ್ರವಾಗಿ ಅಧ್ಯಯನ ಮಾಡುವವರಿಗೆ ಇದು ಅತ್ಯಂತ ಉಪಯುಕ್ತ ಗ್ರಂಥವಾಗಿದೆ.

ಈ ಕೃತಿಯನ್ನು ಕುರಿತು ಶ್ರೀ ರಾಘವೇಂದ್ರ ಪಾಟೀಲ ಅವರು, ಶ್ರೀಕೃಷ್ಣಪಾರಿಜಾತವನ್ನು ಸಿದ್ಧಪಡಿಸಿದವರು ಜಾನಪದ ಸಾಹಿತ್ಯದ ಬಗ್ಗೆ ವಿಶೇಷ ಪ್ರೀತಿ ಮತ್ತು ಅದರ ಬಗೆಗಿನ ತಜ್ಞ ತಿಳುವಳಿಕೆಯನ್ನು ಹೊಂದಿರುವ ಡಾ॥ ಮಲಶೆಟ್ಟರು ಪಾರಿಜಾತದ ರಂಗ ಪ್ರಯೋಗ ದಲ್ಲಿಯೂ ಸ್ವತಃ ಪರಿಶ್ರಮ ಹೊಂದಿದವರಾಗಿದ್ದಾರೆ – ಎಂದು ಹೇಳಿದ್ದಾರೆ.

ಪ್ರೊ॥ ಲಕ್ಷ್ಮಣ ಎಂ. ಕರಿಭೀಮಣ್ಣನವರ
ಶಿಕ್ಷಕ ಸಂಶೋಧಕ (ಗು.ವಿ.ವಿ.), ಶ್ರೀಮತಿ ಅಲ್ಲಂ ಸುಮಂಗಳಮ್ಮ ಮಹಿಳಾ ಮಹಾವಿದ್ಯಾಲಯ, ಬಳ್ಳಾರಿ



# ತಮಿಳು ಭಾಷೆಯ ಮೊದಲ ದಲಿತ ಆತ್ಮಕತೆ ಭಾಮಾ ಅವರ 'ಕರುಕ್ಕು'

ತಮಿಳು ಮೂಲ : 'ಭಾಮ'
ಅನುವಾದ : **ಎಸ್. ಫ್ಲೋಮಿನ್ ದಾಸ್**
**ಕಾವ್ಯದಾಸ್ ಪ್ರಕಾಶನ**
ಸಿ. ಕೆ. ಪುರ, ಚಿತ್ರದುರ್ಗ- ೫೭೭ ೫೦೧
**ಬೆಲೆ : ರೂ. ೮೦ ಪುಟ : ೧೩೨**

ಶ್ರೀಮತಿ ಭಾಮಾ ಅವರು ತಮಿಳು ಭಾಷೆಯ ಓರ್ವ ಲೇಖಕಿ. ಮದುರೈ ಸಮೀಪದ ಒಂದು ಕುಗ್ರಾಮ ಪುದುಪಟ್ಟಿಯಲ್ಲಿ ೧೯೫೮ರಲ್ಲಿ ಹುಟ್ಟಿದ ಭಾಮಾ ರೋಮನ್ ಕ್ಯಾಥೋಲಿಕ್ ಕ್ರೈಸ್ತ ಪಂಥಕ್ಕೆ ಸೇರಿದವರಾದರೂ ಮೂಲತಃ ಇವರು ಒಂದು ದಲಿತ ಜನಾಂಗದಿಂದ ಬಂದವರು. ದಲಿತ ಜನಾಂಗದ ಎಲ್ಲ ನೋವು, ಹಿಂಸೆಗಳನ್ನು ಸಹಿಸಿಕೊಂಡೂ ಈಕೆ ಪದವೀಧರೆಯಾಗಿ, ಶಿಕ್ಷಕಿಯಾಗಿ ಕೆಲಸ ಮಾಡುವುದರ ಜೊತೆಗೆ ಕ್ರೈಸ್ತ ಸನ್ಯಾಸಿನಿಯಾಗಿ ಸೇವೆ ಸಲ್ಲಿಸಿ, ಈ ಸೇವೆಯಿಂದ ಹೊರ ಬಂದು ಸ್ವಾತಂತ್ರ್ಯವನ್ನು ಪಡೆದು ಬೇರೊಂದು ಶಾಲೆಯಲ್ಲಿ ಇದೀಗ ಶಿಕ್ಷಕಿಯಾಗಿ ಕೆಲಸ ಮಾಡುತ್ತಿದ್ದಾರೆ. ತಮ್ಮ ಬಾಲ್ಯ, ಶಿಕ್ಷಣ ಹಾಗೂ ಸೇವೆಯ ಸಂದರ್ಭದಲ್ಲಿ ಈಕೆ ಪಡೆದ ಎಲ್ಲ ಅನುಭವಗಳೂ ತಮಿಳು ಭಾಷೆಗೆ ಕೆಲ ಅಮೂಲ್ಯ ಕೃತಿಗಳನ್ನು ನೀಡಿವೆ ಅನ್ನುವುದು ಒಂದು ವಿಶೇಷ.

ಭಾಮಾ ಅವರು ಸಂಗತಿ, ವನ್ನಮ್ ಎಂಬ ಎರಡು ಕಾದಂಬರಿಗಳನ್ನು, ಕಿಸುಂಬಕಾರನ್ ಎಂಬ ಒಂದು ಕಥಾ ಸಂಕಲವನ್ನ ಹೊರತಂದಿದ್ದಾರೆ. ಅಲ್ಲದೆ ತಮಿಳು ಭಾಷೆಯ ಪ್ರಥಮ ದಲಿತ ಆತ್ಮಕಥೆ ಎಂಬ ಗೌರವಕ್ಕೆ ಪಾತ್ರವಾಗಿರುವ 'ಕರುಕ್ಕು' ಎಂಬ ಆತ್ಮಕಥೆ ಇವರಿಗೆ ಹೆಸರನ್ನು ತಂದಿದೆ. ೧೯೯೨ರಲ್ಲಿ ಪ್ರಕಟವಾದ 'ಕರುಕ್ಕು' ಈಗಾಗಲೇ ಆಂಗ್ಲ ಭಾಷೆಗೆ ಅನುವಾದಗೊಂಡಿದೆ.

'ಕರುಕ್ಕು' ದಲಿತ ಮಹಿಳೆಯೋರ್ವಳ ಆತ್ಮಕಥೆ ಎಂಬ ಕಾರಣಕ್ಕೇನೆ ಮಹತ್ವವನ್ನು ಪಡೆದ ಕೃತಿಯಲ್ಲ. ಈ ಕೃತಿ ಮೊದಲ ಬಾರಿಗೆ ಅನ್ನುವ ಹಾಗೆ ರೋಮನ್ ಕ್ಯಾಥೋಲಿಕ್ ಧರ್ಮದ ಅಂತರಂಗದಲ್ಲಿ ಅಡಗಿರುವ ಎಲ್ಲ ಹಿಂಸೆ, ಅಸಮಾನತೆ, ಕ್ರೌರ್ಯ, ಜಾತೀಯತೆ, ಬಡವ, ಶ್ರೀಮಂತ ಮೊದಲಾದ ಮನೋಭಾವವನ್ನ ವಿಶ್ಲೇಷಿಸುವ ಒಂದು ಕೃತಿಯಾಗಿ ಗಮನ ಸೆಳೆಯುತ್ತದೆ. ಕ್ರೈಸ್ತ ಧರ್ಮವನ್ನ ಸ್ವೀಕರಿಸಿದ ನಂತರವೂ ತನ್ನ ಜನಾಂಗ ದಲಿತರೆಂಬ ಕಳಂಕದಿಂದ ಮುಕ್ತಿ ಪಡೆಯದೆ ಹೇಗೆ ಧಾರ್ಮಿಕ ದಬ್ಬಾಳಿಕೆಗೆ ಬಲಿಯಾಯಿತು ಎಂಬುದನ್ನು 'ಕರುಕ್ಕು' ನಮ್ಮ ಮುಂದೆ ಇಡುತ್ತದೆ.

ಪಶ್ಚಿಮ ಘಟ್ಟಗಳ ನಡುವಿನ ಹಲವು ಬೆಟ್ಟಗುಡ್ಡಗಳ ನಡುವೆ ಇರುವ ತನ್ನ ಸಣ್ಣ ಊರಿನ ಚೆಲುವು, ಸೊಬಗಿನ ಬಗ್ಗೆ ಲೇಖಕಿ ಮನದುಂಬಿ ಹೇಳುತ್ತಾರೆ. ಭತ್ತದ ರಾಶಿಯ ಗೋಪುರಗಳಂತೆ ಕಾಣುವ ಹಲವು ಮಲೆಗಳು, ಸದಾ ನೀರಿನಿಂದ ಆವೃತಗೊಂಡ ಹಳ್ಳ ಕೊಳ್ಳಗಳು, ಈ ಹಳ್ಳಗಳಲ್ಲಿ ಹೇರಳವಾಗಿ ದೊರೆಯುತ್ತಿದ್ದ ಮೀನುಗಳು, ಬೆಟ್ಟಗಳ ಮೇಲಿನ ಕಾಡುಗಳು, ಇವುಗಳ ನಡುವೆ ಹೊಲ ಗದ್ದೆಗಳಲ್ಲಿ ಕೆಲಸ ಮಾಡುವ ಜನ, ಹಾಗೆಯೇ ಭೂಮಿಯ ಒಡೆಯರಾದ ನಾಯ್ಕರುಗಳು, ಮುಂದುವರಿದ ಇತರೇ ಜಾತಿಯ ಜನ, ಇವರ ನಡುವೆ ಪರೆಯರೇ ಮೊದಲಾದ ದಲಿತರು, ಇವರ ಬಡತನ, ಜಾತೀಯ ಕಾರಣಗಳಿಂದಾಗಿ ಪರೆಯರನ್ನ ಕೀಳಾಗಿ ಕಾಣುವ ಸ್ಥಿತಿ ಎಲ್ಲವನ್ನೂ ಲೇಖಕಿ ದಾಖಲಿಸುತ್ತ ಹೋಗುತ್ತಾರೆ.

ಜಾತೀಯ ತಾರತಮ್ಯಗಳ ನಡುವೆಯೂ ಲೇಖಕಿಯ ಅಣ್ಣನ - ''ನೋಡಮ್ಮ... ನಾವು ಪರೆಯ ಜಾತಿಯಲ್ಲಿ ಹುಟ್ಟಿರುವ ಕಾರಣ ನಮಗೆ ಯಾವುದೇ ಮರ್ಯಾದೆ ಘನತೆ, ಗೌರವ, ಸ್ಥಾನ ಮಾನ ಏನೂ ಈ ಸಮಾಜದಲ್ಲಿ ಇಲ್ಲ, ಆದರೆ ಅದೇ ನಾವು ಚೆನ್ನಾಗಿ ಓದಿ ವಿದ್ಯಾವಂತರಾಗಿ ಮುಂದೆ ಬಂದೆವಾದರೆ, ಆಗ ಎಲ್ಲ ಕೊಳಕು ಭಾವನೆಗಳು ದೂರವಾಗಿ, ಕೀಳು ನೋಟಗಳು ಇಲ್ಲವಾಗಿ, ನಮಗೂ ಸ್ಥಾನ ಮಾನ ಗೌರವ ಘನತೆ ತಾನಾಗಿ ಬರುತ್ತದೆ. ಅದಕ್ಕಾಗಿ ನೀನು ಎಲ್ಲವನ್ನು ಮರೆತು ಅತ್ಯಂತ ಆಸಕ್ತಿ ವಹಿಸಿ ಓದಿ ಮುಂದೆ ಬರಬೇಕು'' ಎಂಬ ಮಾತು ಲೇಖಕಿಯ ಮನಸ್ಸಿನಲ್ಲಿ ಮೂಡಿ ನಿಂತು ಅವರು ಶಿಕ್ಷಣದ ಬಗ್ಗೆ ಆಸಕ್ತಿ ತಾಳುತ್ತಾರೆ. ಈ ಶಿಕ್ಷಣದ ನಡವೆಯೂ ಜಾತಿ, ದಲಿತಳೆಂಬ ಶಾಪ, ಹರಿಜನ ಮಕ್ಕಳು ಯಾರು ಎದ್ದು ನಿಲ್ಲಿ ಎಂಬಂತಹ ಪ್ರಶ್ನೆಗಳು ಲೇಖಕಿಯನ್ನು ಕಾಡುತ್ತವೆ. ಇದು ಕಾಲೇಜಿನಲ್ಲಿಯೂ ಬೆನ್ನು ಹತ್ತುತ್ತದೆ. ಕೊನೆಗೆ ಕಾನ್ವೆಂಟಿಗೂ ಬಂದು ತಲುಪುತ್ತದೆ. ದೇವರ ಸೇವೆಯನ್ನು ಮಾಡಲೆಂದೇ ಬಂದ ಪಾದರಿ ಸಿಸ್ಟರುಗಳಲ್ಲಿ ಕೂಡ ಈ ಜಾತೀಯ ಭಾವನೆ ಇರುವುದನ್ನು ಲೇಖಕಿ ಗುರುತಿಸುತ್ತಾರೆ.

ಕ್ರೈಸ್ತರಲ್ಲಿಯೇ ದಲಿತರ ಭೂಮಿಯನ್ನು ಕಬಳಿಸಲು ಮುಂದುವರಿದ ಕ್ರೈಸ್ತರು ಮಾಡುವ ಎಲ್ಲ ಹುನ್ನಾರಗಳನ್ನೂ ಭಾಮ ಗುರುತಿಸುತಾರೆ.

ಇದು ಹೊರಗಿನ ಪ್ರಪಂಚದಲ್ಲಿ ನಡೆಯುವ ವಿಷಯವಾದರೆ ಧಾರ್ಮಿಕವಾಗಿ ಅಂತರಂಗದಲ್ಲಿ ನಡೆಯುವ ಹಲವು ವಿಷಯಗಳು ಇವರ ಗಮನಕ್ಕೆ ಬರುತ್ತಾ ಹೋಗುತ್ತವೆ. ಪಾದರಿ ಮಾದರಿಗಳು ಏಸುವಿನ ತ್ಯಾಗದ ಜೀವನದ ಬಗ್ಗೆ ಹೇಳುತ್ತ ಆಂತರಿಕವಾಗಿ ಭೋಗ ಜೀವನವನ್ನು ನಡೆಸುವುದನ್ನ ಇವರು ನೋಡುತ್ತಾರೆ. ಕಾನ್ವೆಂಟಿನ ಸುಖದ ಬದುಕಿನ ಬಗ್ಗೆ ಇವರಲ್ಲಿ ಜಿಗುಪ್ಸೆ ಮೂಡುತ್ತದೆ. ಹಾಗೆಯೇ ಸಿಸ್ಟರುಗಳು ಹೇಳುವ ಸೈತಾನ, ಭೂತ ಇತ್ಯಾದಿಗಳು ಇವರನ್ನು ಚರ್ಚಿನಲ್ಲಿಯೇ ಕಣ್ಣಿಗೆ ಬಿದ್ದಂತಾಗಿ ಕಾಡುತ್ತವೆ.

ಭಾಮಾ ಸ್ವತಃ ತಾವೇ ಬೈಬಲನ್ನ ಓದಿ ಏಸುವಿನ ಉಪದೇಶ ಮತ್ತು ಬದುಕನ್ನ ಅರಿಯುವ ಪ್ರಯತ್ನ ಮಾಡುತ್ತಾರೆ. ಚರ್ಚಿನ ಬಗ್ಗೆ ಪಾದರಿ ಮಾದರಿಗಳ ಬಗ್ಗೆ ಅವರಿಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲವಾದರೂ ಅವರು ಏಸುವನ್ನ ನಂಬುತ್ತಾರೆ. ತಮ್ಮ ಮೊದಲ ಹಂತದ ವಿದ್ಯಾಭ್ಯಾಸ ಮುಗಿಯುತ್ತಿದೆ ಅನ್ನುವಾಗ ಕಾನ್ವೆಂಟಿನ ಸಿಸ್ಟರಾಗುವ ನಿರ್ಧಾರಕ್ಕೆ ಬರುತ್ತಾರೆ. ಅವರ ಹತ್ತಿರದ ನೆಂಟರು ಬೇಡವೆಂದರೂ ಕೇಳದ ಭಾಮಾ ಕನ್ಯಾಸ್ತ್ರೀ ಪಟ್ಟವನ್ನು ಸ್ವೀಕರಿಸುತ್ತಾರೆ. ಇದಕ್ಕೆ ಪ್ರಬಲವಾದ ಇನ್ನೊಂದು ಕಾರಣವೆಂದರೆ ತಾವು ಸಿಸ್ಟರ್ ಆಗುವುದರ ಮೂಲಕ ದಲಿತ ಮಕ್ಕಳ ಸೇವೆಯನ್ನು ಮಾಡಬಹುದೆಂಬ ದೂರದ ಆಸೆ.

ಕನ್ಯಾಸ್ತ್ರೀ ಸಭೆಯನ್ನು ಸ್ಥಾಪಿಸಿದ ಸ್ಥಾಪಕಿ ಮಹಾ ಮಾತೆಯ ಜೀವನ ಸಾಧನೆಯನ್ನ ಓದಿಕೊಂಡ ಭಾಮಾ ಆದರಿಂದ ಸ್ಫೂರ್ತಿ ಪಡೆಯುತ್ತಾರೆ. ಅಂತೆಯೇ ತಾವೂ ನಡೆದುಕೊಳ್ಳಬೇಕು ಎಂದು ನಿರ್ಧರಿಸುತ್ತಾರೆ. ಏಸು ಹಾಗೂ ದೇವ ಮಾತೆಯರಲ್ಲಿ ಇವರಿಗೆ ಅಪಾರ ನಂಬಿಕೆ ಇರುತ್ತದೆ. ಹೀಗಾಗಿ ಭಾಮಾ ಬೆಟ್ಟದಷ್ಟು ಆಸೆಯನ್ನ ಹೊತ್ತು ಸಿಸ್ಟರಾಗುತ್ತಾರೆ. ಆದರೆ ಪ್ರಾರಂಭದಲ್ಲಿಯೇ ಅವರಿಗೆ ನಿರಾಶೆಯಾಗುತ್ತದೆ. ಅವರನ್ನು ಶ್ರೀಮಂತರ ಮಕ್ಕಳೇ ತುಂಬಿದ ಒಂದು ಶಾಲೆಗೆ ಕಳುಹಿಸಿಕೊಡುತ್ತಾರೆ. ಅಲ್ಲಿ ಏಸು ಕ್ರಿಸ್ತ ಕೂಡ ಶ್ರೀಮಂತಿಕೆಯ ವಿಲಾಸದಲ್ಲಿ ಮೈಮರೆತಿದ್ದಾನೇನೋ ಅನಿಸುತ್ತದೆ ಲೇಖಕಿಗೆ.

ಈ ಬದುಕಿನಲ್ಲಿ ಏನೂ ಬದಲಾವಣೆಯನ್ನು ಇವರು ಕಾಣುವುದಿಲ್ಲ. ಕಷ್ಟ ಪಡುವವರ ನಡುವೆ ತಾವು ಇರಬೇಕು, ಅವರ ನೋವಿಗೆ ಉಪಶಮನ ನೀಡಬೇಕು, ಸಾಂತ್ವನ ನೀಡಬೇಕು ಎಂಬ ಅವರ ಕನಸು ಕನಸಾಗಿಯೇ

**ಡಾ|| ನಾ. ಡಿಸೋಜ**

ಉಳಿದು ಕೇವಲ ಸುಖ ಸಂಪತ್ತಿನ ನಡುವೆ ಬದುಕುವಂತಹ ಪರಿಸ್ಥಿತಿ ಬರುತ್ತದೆ. ಬಡವರ ಬಗ್ಗೆ ಕಿಂಚಿತ್ತೂ ವಿಚಾರಮಾಡದೆ ಸುಖ ಭೋಗದಲ್ಲಿ ಬದುಕುವುದು ಭಾಮಾ ಅವರಿಗೆ ಸಹಿಸದಾಗುತ್ತದೆ.

''ಕಾನ್ವೆಂಟೇ ಒಂದು ಪ್ರತ್ಯೇಕ ಪ್ರಪಂಚ. ಅಲ್ಲಿ ಧಾರಾಳವಾಗಿ ಏಸು ಸ್ವಾಮಿ, ದೇವಮಾತೆ ಇವರುಗಳ ಬಗ್ಗೆ, ಸಭೆಯ ನೇಮ ನಿಯಮ ಗೊತ್ತು ಗುರಿಗಳ ಬಗ್ಗೆ ಮಹತ್ತರವಾದ ಮಾತುಕತೆ ಚರ್ಚೆಗಳಾಗುತಿದ್ದವು. ವೇಳೆಗೆ ಸರಿಯಾಗಿ ಸುಖ ಭೋಜನ ಮಾಡುತ್ತಿದ್ದವು. ನಿಯಮಾನುಸಾರ ಬಡಬಡನೆ ಜಪವನ್ನ ಜಪಿಸುತ್ತಿದ್ದವು. ಆ ಹಬ್ಬ ಈ ಹಬ್ಬ ಎಂದು ಕೊಂಡಾಡಿ ಅನುಗಾಲವೂ ಒಳ್ಳೊಳ್ಳೆಯ ಔತಣ ಕೂಟ ಏರ್ಪಡಿಸಿ, ಸಂತೋಷ ಸಡಗರದಿಂದ ಕಾಲ ಕಳೆಯುತ್ತಿದ್ದವು'' ಅನ್ನುತ್ತಾರೆ ಭಾಮಾ. ಆದರೆ ಅವರ ವ್ಯಥೆ ಮಾತ್ರ ಬೇರೆ. ಬಡವರ, ದಲಿತರ ಸೇವೆ ಮಾಡುವ ಅವಕಾಶ ತಮಗೆ ಸಿಗಲಿಲ್ಲವಲ್ಲ ಎಂಬ ನೋವು ಅವರನ್ನ ಕಾಡುತ್ತಿತ್ತು. ಈ ನೋವೇ ಅವರನ್ನ ಒಂದು ದೃಢ ನಿರ್ಧಾರಕ್ಕೆ ಪ್ರೇರೇಪಿಸಿತು. ಭಾಮಾ ತಮ್ಮನ್ನು ಯಾವುದಾದರೂ ಅನಾಥಾಶ್ರಮಕ್ಕೆ ಇಲ್ಲವೆ ಒಂದು ಕುಗ್ರಾಮಕ್ಕೆ ವರ್ಗ ಮಾಡುವಂತೆ ಕೇಳಿಕೊಳ್ಳುತ್ತಾರೆ, ಆದರೆ ಅವರ ಬೇಡಿಕೆಗೆ ಬೆಲೆ ಸಿಗುವುದಿಲ್ಲ. ಆಗ ಭಾಮಾ ತಾವು ಬಯಸಿ ಬಯಸಿ ಪಡೆದ ಕನ್ಯಾಸ್ತ್ರೀ ಪಟ್ಟವನ್ನ ತ್ಯಜಿಸಿ ಖಾಸಗಿ ಶಾಲೆಯೊಂದರಲ್ಲಿ ಕೆಲಸ ಮಾಡಲು ಸೇರಿಕೊಳ್ಳುತ್ತಾರೆ.

ಭಾಮಾ ಹೆಣ್ಣಾಗಿ, ದಲಿತ ಜನಾಂಗದಿಂದ ಬಂದವರಾಗಿ, ಕ್ರೈಸ್ತ ಧರ್ಮದ ಅಂಧ ಅನುಕರಣೆಗೆ ಗುರಿಯಾದ ಹೆಣ್ಣಾಗಿ ಇಲ್ಲಿ ಪಡುವ ಪಾಡು ಘೋರವಾದದ್ದು. ಸಾಮಾನ್ಯವಾಗಿ ಕ್ರೈಸ್ತರಾದವರು, ಧರ್ಮದ ಒಳಗಿನ ಯಾವುದೇ ದೋಷಗಳನ್ನ ಇನ್ನೊಬ್ಬರ ಮುಂದೆ ತೆರೆದು ಇಡುವ ಧೈರ್ಯ ಮಾಡುವುದಿಲ್ಲ. ಹೀಗಾಗಿ ಹೊರಗಿನಿಂದ ತುಂಬಾ ಸುಂದರವಾಗಿ ಕಾಣುವ ಕ್ರೈಸ್ತ ಪ್ರಪಂಚ ಒಳಗಿನಿಂದ ಕೊಳೆತು ನಾರುತ್ತಿರುತ್ತದೆ. ಆದರೆ ಈ ಕೊಳಕು ಪ್ರಪಂಚದ ಅನಾವರಣವನ್ನ ಭಾಮಾ ಮಾಡುವುದರ ಜೊತೆಗೆ ಇದರ ವಿರುದ್ಧ ಒಂದು ಹೋರಾಟವನ್ನು ನಡೆಸಿ ಗೆಲ್ಲುತ್ತಾರೆ.

ಮರಾಠಿ ಹಾಗೂ ತೆಲುಗು ಭಾಷೆಯಲ್ಲಿ ಬಂದಿರುವ ದಲಿತ ಆತ್ಮಕತೆಗಳನ್ನು ಓದಿ ಮೆಚ್ಚಿರುವ ಕನ್ನಡ ಓದುಗರು 'ಕರುಕ್ಕು' ಅನ್ನು ಅವಶ್ಯ ಓದಬೇಕಾಗಿದೆ. ಈ ತಮಿಳು ಕೃತಿಯನ್ನು ಶ್ರೀ ಎಸ್.ಫ್ಲೋಮಿನ ದಾಸ್ ಅವರು ಕನ್ನಡಕ್ಕೆ ಅನುವಾದಿಸಿರುತ್ತಾರೆ.

ಡಾ|| ನಾ. ಡಿಸೋಜ
೧೫/೧೪, ೨ನೇ ಕ್ರಾಸ್, ನೆಹರು ನಗರ, ಸಾಗರ - ೫೭೭೪೦೧

# ಹೆಂಗಸರೆಂದರೇ ಹೀಗೆ

ಹೆಂಗಸರೆಂದರೇ ಹೀಗೆ
ಒಟ್ಟು ಸೇರಿದರೆ ಸಾಕು
ವಸ್ತು ಒಡವೆ ಉಡುಗೆ ತೊಡುಗೆ
ಇವುಗಳದೇ ಸಮಾಚಾರ

ಅವರಿವರ ತೀರ್ಮಾನ ನಿರಾಕರಿಸಲು
ಮೈ ಕೈ ಕತ್ತೆಲ್ಲ ಬೋಳುಬೋಳು
ಅವರಿವರು ಕೊಟ್ಟ
ಇಲ್ಲಾ ತಾವೇ ಮರುಳಾಗಿ ಕೊಂಡ
ಅದ್ದೂರಿ ಸೀರೆಗಳು
ಬೀರುವಿನಲೇ ಭದ್ರ
ಯಾರದೋ ಜರತಾರಿಯ ಸರಭರ ಸದ್ದು
ಕಣ್ತುಂಬುವ ಬಣ್ಣ
ಮನಸೂರೆಗೊಂಡಾಗ
ಬೀರುವಿನಿಂದೆತ್ತಿ ನೇವರಿಸಿ
ಉಟ್ಟು ಕನ್ನಡಿ ಮುಂದೆ, ಗಳಿಗೆ ಕಟ್ಟುವಿಕೆ

ಹೆಂಗಸರೆಂದರೇ ಹೀಗೆ
ಒಟ್ಟು ಸೇರಿದರೆ ಸಾಕು
ಮಾತು ಮಾತು ಮಾತು ಬಿಟ್ಟರಿನ್ನಿಲ್ಲ

ಸುಳ್ಳಾಗಿಸಲು ನಿರ್ಮಿಸಿಕೊಂಡಿದ್ದಾರೆ ಬಂದೀಖಾನೆ
ಇಷ್ಟಿಷ್ಟೇ ನಗು ಕೇಳಿದ್ದಕ್ಕಷ್ಟೇ ಉತ್ತರ
ಚುಟುಕಾಗಿ ಚುರುಕಾಗಿ
ಮುಕ್ಕಾಲುಪಾಲು ಮಾತು ಗಂಟಲೊಳಗೇ ಹೂತಿವೆ
ತೊಟ್ಟಿಲು ತುಂಬುವ, ಬಸಿರು ಬಾಣಂತನದ,
ಅರಿಶಿನ ಕುಂಕುಮದ ಆಮಂತ್ರಣಗಳಿಗೆಲ್ಲ
ಕನಿಕರ ಉಪೇಕ್ಷೆ ತಿರಸ್ಕಾರ !

ಹೆಂಗಸರೆಂದರೇ ಹೀಗೆ
ಒಟ್ಟು ಸೇರಿದರೆ ಸಾಕು
ಊಟ ತಿಂಡಿ ಅಡುಗೆಯದೇ ಸುದ್ದಿ

ಪಥ್ಯವಾಗದ್ದಕ್ಕೆ ಅವರೀಗ ಅರೆಬಾಣಸಿಗರು
ಏನೋ ಒಂದಿಷ್ಟು ಬೇಯಿಸಿ
ಹಸಿಬಿಸಿ ತಾವುಂಡು ಇವರಿಗೂ ಇಕ್ಕಿ
ಇಡುತ್ತಾರೆ ಪೂರ್ಣವಿರಾಮ.
ದಿನಕ್ಕೊಂದು ಬಗೆ; ಹತ್ತಾರು ಪಾಕ ವೈವಿಧ್ಯ,
ಬಡಿಸುವುದಕೂ ವ್ಯಾಕರಣ
ಕಂಡು ಬೆರಳು ಕಚ್ಚುತ್ತಾರೆ
ಒಳಗೊಳಗೇ ಮರುಗುತ್ತಾರೆ.

ಹೆಂಗಸರೆಂದರೇ ಹೀಗೆ
ಬೌದ್ಧಿಕತೆಗಿಂತ ಭಾವುಕತೆಗೆ ವಾಲುವವರು

ತಿರಸ್ಕರಿಸಲೆಂದೇ ಆರಂಭ ಈ ಕಸರತ್ತು
ಹಾವ ಭಾವ ಭಂಗಿ ಪದಸಂಪತ್ತು ಗಾಂಭೀರ್ಯ
ಎಲ್ಲ ಎರವಲು
ಪುರುಷ ಮಾದರಿಗಳ ಅನುಕರಣೆಯ ತರಬೇತಿ
ವೇದಿಕೆ ಮೇಲಿನ ಮುಖವಾಡ
ಬರಬರುತ್ತ ಕ್ಷಣಕ್ಷಣಕ್ಕೂ ಅನ್ವಯ

ಹೆಂಗಸರೆಂದರೇ ಹೀಗೆ
ಒಟ್ಟು ಸೇರಿದರೆ ಸಾಕು ...

ನೇತಿ ನೇತಿಯ ಓಟ ಮುಗಿದು
ಪಟ್ಟಿ ತೆರೆದರೆ ಕಂಡದ್ದು
ವ್ಯಾಖ್ಯಾನಕಾರ ಲೋಕದ ಕಣ್ಣ ಕುಹಕ;
ತಮ್ಮ ಲೋಕದ ಕನಿಕರ !
ಅವರ್ಬಿಟ್ಟು ಇವರ್ಬಿಟ್ಟು ಉಳಿದವರ್‍ಯಾರು ?
ಒಂಟಿ ದ್ವೀಪಗಳು.
ಬಣ್ಣ, ವಾಸನೆ, ರುಚಿ ಕಳಕೊಂಡ
ಸಪ್ಪೆ ಸಪ್ಪೆ ಬದುಕು !



ಸಬಿಹಾ ಭೂಮೀಗೌಡ
ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ
ಮಂಗಳಗಂಗೋತ್ರಿ - ೫೭೪ ೧೯೯



**ಊರ ಒಳಗಣ ಬಯಲು** (ಕಥಾ ಸಂಕಲನ)

ಡಾ|| ವಿನಯಾ

**ಪುಟ** : ೮೨ **ಬೆಲೆ : ರೂ. ೪೦**

**ಛಂದ ಪುಸ್ತಕ**, ಐ-೦೦೪, ಮಂತ್ರಿ ಪ್ಯಾರಡೈಸ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು - ೫೬೦ ೦೭೬

ಕವಿತೆಗಳ ರಚನೆಯಿಂದ ಈಗಾಗಲೇ ಪರಿಚಿತರಾದ ಡಾ|| ವಿನಯಾರವರ ಕಥಾ ಸಂಕಲನವಿದು. ಇಲ್ಲಿನ ಕಥೆಗಳು ವಿವಿಧ ಪತ್ರಿಕೆಗಳಲ್ಲಿ ಪ್ರಕಟಗೊಂಡು ಬಹುಮಾನ, ಮೆಚ್ಚುಗೆ ಪಡೆದಿವೆ. ಈ ಕಥೆಗಳು ಮಾನವ ಸಂಬಂಧಗಳ ಸ್ವರೂಪ, ಮತ್ತು ಬದುಕನ್ನು ಹಿಡಿದಿಡಬಲ್ಲ ವಿಚಾರಗಳನ್ನು ಕುರಿತ ಕಥೆಯ ಹಂದರದೊಳಗೇ ನವುರಾಗಿ ಚರ್ಚಿಸುತ್ತವೆ. 'ಒಂದು ಖಾಸಗಿ ಪತ್ರ' 'ಊರ ಒಳಗಣ ಬಯಲು', 'ಕಡಿತನಕಾ ಕಾಯೋ ಅಭಿಮಾನ', 'ಎಲ್ಲ ಆರಾಮ', 'ನೋಯದವರೆತ್ತ ಬಲ್ಲರೋ', 'ದಣಿವು ಕಾಡುವ ಹೊತ್ತು', 'ಕ್ಷಮೆಯಿರಲಿ ಕಂದಾ', 'ಪ್ರೀತಿ' – ಹೀಗೆ ಹನ್ನೊಂದು ಕತೆಗಳನ್ನು ವಿನಯಾರವರು ಆತ್ಮೀಯವಾಗಿ, ಸರಳ, ಸೂಕ್ಷ್ಮವಾಗಿ ಹೆಣೆದಿದ್ದಾರೆ. ಅವರ ಬರವಣಿಗೆ ಸರಳವಾಗಿದ್ದರೂ ಅಷ್ಟೇ ಗಾಢವಾಗಿದ್ದು, ಇಲ್ಲಿನ ಕತೆಗಳು ಮನದ ಕದ ತೆರೆದು ಕಥೆ ಓದಿದ ಹಿತದೊಂದಿಗೆ ಜಿಜ್ಞಾಸೆಗೂ ಬೀಳುವಂತೆ ಮಾಡುತ್ತವೆ.



**ಮಂದಾರ**

(ಪ್ರೊ|| ಮಾಲತಿ ಪಟ್ಟಣಶೆಟ್ಟಿ ಅಭಿನಂದನ ಗ್ರಂಥ)

ಸಂಪಾದಕರು : ಡಾ|| ಶಿವಾನಂದ ಗಾಳಿ

ಡಾ|| ಹೆಚ್. ಎ. ಪಾರ್ಶ್ವನಾಥ್, ಡಾ|| ಶಾಂತಾ ಇಮ್ರಾಪೂರ, ಡಾ|| ಜಿನದತ್ತ ಅ. ಹಡಗಲಿ

**ಪುಟ : xxvi + ೫೪೪ + ೮** **ಬೆಲೆ : ರೂ. ೩೫೦**

**ಚಂದ್ರನಾಥ ಪ್ರಕಾಶನ**, ಸನ್ಮತಿ ಮಾರ್ಗ, ಧಾರವಾಡ - ೧



ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಕವಯಿತ್ರಿ ಪ್ರೊ|| ಮಾಲತಿ ಪಟ್ಟಣಶೆಟ್ಟಿಯವರಿಗೆ ಪ್ರಮುಖರು, ಚಿಂತಕರು, ಆತ್ಮೀಯರು ಅರ್ಪಿಸಿರುವ ಅಭಿನಂದನಾ ಗ್ರಂಥವಿದು. ಇದು ನಾಲ್ಕು ಪಕಳೆಗಳಲ್ಲಿ ಹರಡಿಕೊಂಡಿದೆ. ಮೊದಲನೆಯದು 'ನಾವು ಕಂಡಂತೆ' ಎಂಬಲ್ಲಿ ನಾಡಿನ ಪ್ರಮುಖರು, ಚಿಂತಕರು, ಮಾಲತಿಯವರ ಸಂಪರ್ಕಕ್ಕೆ ಬಂದ ಆತ್ಮೀಯರು, ಗೆಳೆಯ-ಗೆಳತಿಯರು ತಾವು ಕಂಡ ಲೇಖಕಿಯ ವ್ಯಕ್ತಿತ್ವದ ಚಿತ್ರವನ್ನು ಆತ್ಮೀಯತೆಯಿಂದ ಕಟ್ಟಿಕೊಟ್ಟಿದ್ದಾರೆ. ಎರಡನೆಯ ಪಕಳೆ – ಲೇಖಕಿಯ ಆತ್ಮಕಥನ 'ನೆನಪಿನ ಹನಿಗಳು' ಎಂಬಲ್ಲಿ ಲೇಖಕಿಯ ಬದುಕಿನ ಕೆಲವು ಪುಟಗಳಿವೆ. ಮೂರನೆಯ ಭಾಗದಲ್ಲಿ ಲೇಖಕಿಯ ಸಾಹಿತ್ಯ ಕೃಷಿಯನ್ನು ಸಮೀಕ್ಷಿಸಲಾಗಿದೆ. ನಾಲ್ಕನೆಯ ಪಕಳೆ 'ಭಾರತೀಯ ಭಾಷೆಗಳಲ್ಲಿ ಸ್ವಾತಂತ್ರ್ಯೋತ್ತರ ಮಹಿಳಾ ಕಾವ್ಯ'.

**ಮಿಡಿವ ಮನಗಳಿಗೆ ಗಡಿಗಳಿಲ್ಲ** (ಅನುವಾದಿತ ಕಥೆಗಳು)

ಟಿ. ವಿ. ಮಾಗಳದ

**ಪುಟ : xviii + ೧೫೬** **ಬೆಲೆ : ರೂ. ೧೦೦**

**ಸ್ಪಂದನ ಪ್ರಕಾಶನ**, ಧಾರವಾಡ - ೭



ಬೇಂದ್ರೆ ಹೇಳಿದಂತೆ 'ಕನ್ನಡವ ಕನ್ನಡಿಸುತ್ತಿರಬೇಕು'. ಅನ್ಯದ್ದನ್ನೂ ಕನ್ನಡದಲ್ಲಿ ಕನ್ನಡಿಸಬೇಕು. ಹಾಗೆ ಮಾಡುವ ಕಾರ್ಯವೆಲ್ಲವೂ ಸ್ವಾಗತಾರ್ಹವಾದವು. ಟಿ. ವಿ. ಮಾಗಳದ ಅವರು ವಿಶ್ವ ಸಾಹಿತ್ಯದ ಕಥಾ ಸಂಪತ್ತನ್ನು ಕನ್ನಡದಲ್ಲಿ ನೀಡುವ ಪ್ರಯತ್ನವನ್ನು ಇಲ್ಲಿ ಮಾಡಿದ್ದಾರೆ. ಪ್ರಸಿದ್ಧರಾದ ಆ್ಯಂಟನ್ ಚೆಕಾವ್, ಲಿಯೋ ಟಾಲ್‌ಸ್ಟಾಯ್, ಓ. ಹೆನ್ರಿ, ಎಡ್ಗರ್ ಅಲನ್ ಪೋ, ಅಬಿಯೊಸೆ ನಿಕೋಲ್, ಆಸ್ಕರ್ ವೈಲ್ಡ್ ಮೊದಲಾದ ಲೇಖಕರ ಸತ್ವಶಾಲಿಯಾದ ಹದಿನೈದು ಕತೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. 'ಭಾಷೆ ಯಾವುದಾದರೇನು ಭಾವವೊಂದೆ' ಎಂಬಂತೆ ಇಲ್ಲಿನ ಕತೆಗಳು ಪಾಶ್ಚಾತ್ಯರದು ಎಂಬ ಎಲ್ಲೆಯನ್ನು ಮೀರಿ ಮಾನವೀಯವಾಗಿವೆ. ಮಾನವ ಸಂಬಂಧಗಳನ್ನು, ಭಾವನೆ, ಬದುಕನ್ನು ಇವು ಸಾರ್ವತ್ರಿಕವೆಂಬಂತೆ ಹಿಡಿದುಕೊಟ್ಟಿವೆ.



**ಅಶ್ವತ್ಥರ ಬದುಕು : ಒಂದು ನೋಟ**

ಡಾ|| ಎಚ್. ಎಸ್. ಸುಜಾತಾ

**ಪುಟ : XXVIII + ೧೭೮** **ಬೆಲೆ : ರೂ. ೧೪೦**

**ಸುಹಾಸ ಪ್ರಕಟಣೆಗಳು**, ೫೩, ೪ನೇ ಮುಖ್ಯರಸ್ತೆ, ಮಾರುತಿ ದೇವಸ್ಥಾನದ ಬೀದಿ, ಕುವೆಂಪುನಗರ, ಮೈಸೂರು - ೯

ಎಂ. ಎಸ್. ಪುಟ್ಟಣ್ಣರವರ ಬಗ್ಗೆ ಸಂಶೋಧನೆ ನಡೆಸಿದ ಡಾ|| ಎಚ್. ಎಸ್. ಸುಜಾತರವರ ಮತ್ತೊಂದು ಪರಿಶ್ರಮದ ಸಂಶೋಧನೆಯ ಕೃತಿ ಇದಾಗಿದೆ. ಕನ್ನಡದ ನವೋದಯ ಕತೆಗಾರರಾದ ಕೂದುವಳ್ಳಿ ಅಶ್ವತ್ಥನಾರಾಯಣ ರಾವ್ ಅವರ ಸರಳ, ಪ್ರಾಮಾಣಿಕ, ಸಮೃದ್ಧ ಬದುಕಿನಿಂದ ಪ್ರೇರಿತರಾದ ಲೇಖಕಿ, ಅವರ ಜೀವನ ಮತ್ತು ವ್ಯಕ್ತಿತ್ವವನ್ನು ಸಮರ್ಪಕವಾಗಿ ಇಲ್ಲಿ ಕಟ್ಟಿಕೊಟ್ಟಿದ್ದಾರೆ. ಯಾವುದೇ ನಂಬಿಕೆಯನ್ನು ತರ್ಕಕ್ಕೆ ಒಡ್ಡುವ, ಪ್ರಶ್ನಿಸುವ, ತತ್ವನಿಷ್ಠರೂ, ಸಮತಾವಾದಿಯೂ, ಜೀವನಪರ ಚಿಂತಕರೂ ಆಗಿ ಸರಳವಾಗಿ ಬದುಕಿದ ಅಶ್ವತ್ಥರ ವ್ಯಕ್ತಿತ್ವವನ್ನು ಇಲ್ಲಿ ಕಾಣಬಹುದು. ಛಾಯಾಚಿತ್ರಗಳ ಸಂಪುಟ, ಅನುಬಂಧಗಳು, ಅಶ್ವತ್ಥರೊಂದಿಗಿನ ಸಂದರ್ಶನ – ಇವೆಲ್ಲಾ ಬಹಳ ಉಪಯುಕ್ತವಾಗಿವೆ.



**ಪಾತ್ರಗಳು ಇರಲಿ ಗೆಳೆಯ** (ಕವನ ಸಂಕಲನ)

ಸತ್ಯನಾರಾಯಣರಾವ್ ಅಣತಿ

**ಪುಟ : xii + ೮೮** **ಬೆಲೆ : ರೂ. ೫೦**

**ಸೃಷ್ಟಿ ಪಬ್ಲಿಕೇಷನ್ಸ್**, ನಂ. ೨/೨, ೧ನೇ ಅಡ್ಡರಸ್ತೆ, ೧ನೇ ಮುಖ್ಯರಸ್ತೆ, ಗೋವಿಂದಪ್ಪ ಲೇಔಟ್, ನಾಗಶೆಟ್ಟಿಹಳ್ಳಿ, ಬೆಂಗಳೂರು - ೫೬೦ ೦೯೪

ಅನೇಕ ಕವನ ಸಂಗ್ರಹಗಳನ್ನು ಪ್ರಕಟಿಸುವುದರ ಮೂಲಕ ನಾಡಿಗೆ ಪರಿಚಿತರಾದ ಸತ್ಯನಾರಾಯಣರಾವ್ ಅಣತಿಯವರ ಮತ್ತೊಂದು ಕವನ ಸಂಕಲನವಿದು. ಇಪ್ಪತ್ತಾರು ಕವಿತೆಗಳ ಈ ಗುಚ್ಛದಲ್ಲಿ ವೈವಿಧ್ಯತೆಯ ಜತೆಗೆ ಕಾವ್ಯಮಯತೆ, ಸೂಕ್ಷ್ಮತೆ, ಗದ್ಯಪ್ರಿಯತೆಯನ್ನೂ ಕಾಣಲು ಸಾಧ್ಯ. ಅದೆಲ್ಲದಕ್ಕೂ ಮೂಲವೆಂಬಂತೆ ಲೇಖಕರ ಅದಮ್ಯ ಜೀವನಪ್ರೀತಿ ಕವನ ಸಂಕಲನದುದ್ದಕ್ಕೂ ಹರಡಿದೆ. 'ಕಟ್ಟಡಗಳು', 'ಪುರಾತನ ಮನೆಯಲ್ಲಿ', 'ಗಣೆ', 'ಪಾತ್ರಗಳು ಇರಲಿ ಗೆಳೆಯ', 'ಬೇಟೆ' - ಚಿತ್ರಕ ಶೈಲಿಯ ಧ್ವನಿಪೂರ್ಣವಾದ ಕವಿತೆಗಳು. ತಾನೊಲಿದಂತೆ ಹಾಡಿದರೇನೆ ಆತ್ಮಸುಖ ಎಂಬುದನ್ನು 'ಶ್ರೋಣನ ವೀಣೆ' ಕವಿತೆ, ಶ್ರೋಣ ಮತ್ತು ಬುದ್ಧನ ಸಂವಾದದ ಮೂಲಕ ಸಾಂಕೇತಿಕವಾಗಿ ಚಿತ್ರಿಸುತ್ತದೆ. 'ಕತ್ತಲೆಯಲ್ಲಿ ಹತ್ತು ನಿಮಿಷ' – ಆಧುನಿಕತೆ ಮತ್ತು ಪ್ರಾಚೀನತೆಯ ಮುಖಾಮುಖಿಯಾಗಿಸುತ್ತಲೇ ಇಂದಿನ 'ಅವಕಾಶ, ಅನುಕೂಲ' ಎರಡೇ ಜೀವನದ ಮುಖ್ಯ ತತ್ವವಾಗಿರುವ ವಾಸ್ತವವನ್ನು ಗದ್ಯ ಲಯದಲ್ಲಿ ಸೊಗಸಾಗಿ ಚಿತ್ರಿಸಿದ್ದಾರೆ.

**ವಚನ ಸಂಸ್ಕೃತಿ**

ಡಾ|| ಬಸವರಾಜ ಸಬರದ

**ಪುಟ : iv + ೨೮೬** **ಬೆಲೆ : ರೂ. ೧೪೦**

**ಪಲ್ಲವಿ ಪ್ರಕಾಶನ**, ಸರಸ್ವತಿಪುರ, ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ – ೫೮೫ ೧೦೬



'ವಚನ ಚಳುವಳಿ' ಕೃತಿಯ ಮೂಲಕ ವಚನಸಾಹಿತ್ಯವನ್ನು ನೋಡುವ ಬಗೆಗೆ ಹೊಸ ಸ್ಪರ್ಪಡೆಯನ್ನು ನೀಡಿದ ಡಾ|| ಬಸವರಾಜ ಸಬರದರವರ ಮತ್ತೊಂದು ಕೃತಿ ಇದು. ಈಗಾಗಲೇ ವಚನಸಾಹಿತ್ಯಕ್ಕೆ ಸಂಬಂಧಿಸಿದಂತೆ ಕಿರು ಕೃತಿಗಳನ್ನು ರಚಿಸಿದ ಲೇಖಕರ ಕ್ರಿಯಾಶೀಲತೆ ಮತ್ತು ಚಿಂತನೆ ಈ ಕೃತಿಯಲ್ಲಿ ಗಾಢವಾಗಿ ಫಲಿಸಿದೆ. 'ಸಂಸ್ಕೃತಿ' ಎಂಬುದು ಸಮೂಹದ ಜನಜೀವನ ವಿಧಾನ. 'ವಚನ'ವೆಂಬುದು ಸಾಹಿತ್ಯದ ಒಂದು ರೂಪವಾಗಿರುವುದರ ಜತೆಗೆ, ನುಡಿದಂತೆ ನಡೆಯುವ ಕೊಟ್ಟ ಮಾತು ಆಗಿ, 'ವಚನ ಸಂಸ್ಕೃತಿ' ಎಂಬುದು ನುಡಿದಂತೆ ನಡೆವ, ನಡೆಯುವ, ಜನಜೀವನವನ್ನು ಕುರಿತು ಚರ್ಚಿಸುವ ಆಶಯದಿಂದ ಕೂಡಿದೆ. 'ವಚನಕಾರರ ದೃಷ್ಟಿಯಲ್ಲಿ ಮಹಿಳೆ', 'ಉಪಸಂಸ್ಕೃತಿಗಳು ಮತ್ತು ವಚನಕಾರರು', 'ವಚನಸಾಹಿತ್ಯದಲ್ಲಿ ಮೂಢನಂಬಿಕೆಗಳ ವಿರೋಧ', 'ವಚನಸಾಹಿತ್ಯದಲ್ಲಿ ಮಾನವೀಯ ಮೌಲ್ಯಗಳು', 'ಬಸವ ಸಂಸ್ಕೃತಿ – ಸಾಮಾಜಿಕ ನ್ಯಾಯ', 'ವಚನಸಾಹಿತ್ಯದ ವೈರುಧ್ಯಗಳು' – ಹೀಗೆ ಹಲವಾರು ಲೇಖನಗಳು ಇಲ್ಲಿವೆ.

– [illegible]

[illegible]

# ಅವ್ವ ಕಟ್ಟಿಕೊಟ್ಟ ಬುತ್ತಿ

ಹೆಗಲಿಗೆ ಪಾಟಿ ಚೀಲವನು
ಜೋತಾಡಿಸುತ ಆರು ಮೈಲಿ
ದೂರದ ಶಾಲೆಗೆ ಹೊರಟು
ನಾ. 'ಸಾಲಿ ಹುಡುಗ'ನಾದಾಗ
ಅವ್ವನಿಗೆ ಮುಗಿಲು ಮೂರೇ ಗೇಣು

ನನಗಾಗಿ ಬುತ್ತಿ ಕಟ್ಟುತ್ತಿದ್ದಳು ಅವ್ವ
ಪೇರಿಸಿಟ್ಟ ಜೋಳದ ರೊಟ್ಟಿಗಳು;
ನಡುವೆ ಒಣ ಖಾರದೊಂದಿಗೆ ಕಲಸಿದ
ಅಕ್ಕರೆ, ನಿರೀಕ್ಷೆಗಳು...!!!

ಬೆಳಗಿನ ಕೋಳಿ ಕೂಗುವ ಮುನ್ನವೇ
ಎದ್ದು ನೀರು ಮುಕ್ಕಳಿಸಿ, ಕಲಸಿ
ಕಣ್ಣೀರಲ್ಲೇ ನಾದುತ್ತಿದ್ದಳು
ಜೋಳದ ಹಿಟ್ಟನ್ನು ಅವ್ವ...


ಚಿತ್ರ : ಮುತ್ತು ಮಾಕೇರಿ

ಕೊಮ್ಮಣಿಗಿಯಲಿ[1] ರೊಟ್ಟಿಯ
ತಟ್ಟುವಾಗಷ್ಟೇ ನಿರಾಳವಾಗಿ
ಉಸಿರ ಬಿಟ್ಟು ಬಿಕ್ಕುತ್ತಿದ್ದಳು.

ಬಡತನದ ಮಣಭಾರ ಹೊತ್ತೂ
ಜಗ್ಗದ ಅವಳದು ವಾರದಲಿ
ಮೂರು ದಿನ ಉಪವಾಸ
ಮಂಗಳವಾರ ಎಲ್ಲವ್ವ,
ಶುಕ್ರವಾರ ಸಿರೆವ್ವ,
ಶನಿವಾರ ಹನುಮಪ್ಪರಿಗೆ...

ಹೊಲದೊಳು ದುಡಿವಾಗ
ಸಿಗುವ ಜೋಳದ ಎಳೆಗಾಳು
ಹಸಿ ತೊಗರಿ ಕಾಳು,
ಸಜ್ಜೆಯ ಸೀತನಿಗಳೇ
ಫಳಾರಗಳು ಅವ್ವನ
ಉಪವಾಸಕ್ಕೆ... !!

ಸಣ್ಣ ಗೋಟಾನಿಕಾಯಿ[2] ಸಾರಿನಲಿ
ನುಚ್ಚನ್ನು ಕಲಸಿ ಉಂಡರೆ ಆಯ್ತು
ಅದೇ ಉಪವಾಸ ಬಿಡುವ
ಭೂರಿ ಭೋಜನ !!

ಅನ್ನ ದೇವರಿಗಿಂತ ಇನ್ನು
ದೇವರೆಯಿಲ್ಲ ಅವ್ವನಿಗೆ;
ತಟ್ಟೆಯಲಿ ಒಂದಗುಳನೂ ಬಿಡಳು,
ನನಗೂ ಅದನೆ ಕಲಿಸಿದಳು.

ಈಗಲೂ ನೆನಪಾಗುತ್ತದೆ
ಈರುಳ್ಳಿ ಸಾರಿನಲಿ
ಅಳಿದುಳಿದ ತಂಗಳ ರೊಟ್ಟಿಗಳ
ಕುದಿಸಿ ಕೊಡುತ್ತಿದ್ದಳು... ಅವ್ವ.
(ಇಂದಿನ ಮ್ಯಾಗಿ ನ್ಯೂಡಲ್ಸ್‌ನಲ್ಲೂ
ಅಂಥ ರುಚಿ ದಕ್ಕುವುದಿಲ್ಲ...)

* * *

ತಟ್ಟೆಯಲಿ ಸ್ಟೈಲಾಗಿ ಅನ್ನವನು ಬಿಟ್ಟೇಳುವ
ಮಗನ ಹಮ್ಮಿಗೆ ರೇಗುತ್ತೇನೆ...
ಇವಳ ಕೆಂಗಣ್ಣು ನನ್ನನೇ ದುರುಗುಟ್ಟುತ್ತ
"ಏನು ಮಹಾಪರಾಧವಾಯ್ತು ?"
ಎನ್ನುತ್ತವೆ...!!!

ಆ ಅನ್ನದ ಅಗುಳುಗಳಲ್ಲಿ ಅವ್ವನ
ಕಣ್ಣೀರು, ಹಿಟ್ಟು, ರೊಟ್ಟಿ,
ಜೋಳದ ಎಳೆಗಾಳು ಕಾಣುತ್ತವೆ...

ನಾನಾದರೂ ಎಲ್ಲವನೂ ಹಸನಾಗಿ
ತಿನ್ನಬೇಕೆಂಬ ಶ್ರದ್ಧೆಯ ಪ್ರಜ್ಞೆಯ
ಬದ್ಧತೆಗೆ ತೃಪ್ತನಾಗುತ್ತೇನೆ

ಮತ್ತೆ ಮತ್ತೆ ನೆನಪಾಗುತ್ತದೆ
ಅವ್ವ ಕಟ್ಟಿಕೊಟ್ಟ ಆ ಬುತ್ತಿ...

---

[1] ರೊಟ್ಟಿ ತಟ್ಟಲು ಬಳಸುವ ಸಾಧನ
[2] ಸಣ್ಣ ಗಾತ್ರದ ಕಾಡು ಟೊಮೆಟೊ ಹಣ್ಣು

**ಮಾರುತಿ ದಾಸಣ್ಣವರ**
ಕನ್ನಡ ಅಧ್ಯಾಪಕರು, ಜವಾಹರ ನವೋದಯ ವಿದ್ಯಾಲಯ, ಗಾಳಿಬೀಡು
ಮಡಿಕೇರಿ ತಾಲ್ಲೂಕು, ಕೊಡಗು ಜಿಲ್ಲೆ - ೫೭೧ ೨೦೧

# ನಾಗರಿಕರು

ಇಟ್ಟಿಗೆಗಳ ಗೂಡುಗಳಾದ
ಕೆರೆಯಂಗಳಗಳಲ್ಲಿ ಮತ್ತೆ ರೆಕ್ಕೆ
ಬಿಚ್ಚುವುದಿಲ್ಲ ಬೆಳ್ಳಕ್ಕಿಗಳು
ಭರವಸೆಗಳೆಲ್ಲ ಬಿರುಕಿನೊಳಗೆ ತೂರಿ
ಕಣ್ಣಂಗಳದಲಿ ಹಳಸಿ ನಿಂತ ನೀರು !
ಬುವಿಯೇನು ನಾದಿಟ್ಟ ಹಿಟ್ಟಿನುಂಡೆಯೇ
ಚೆಂಡಾಡುವುದಕ್ಕೆ ?
ಕತ್ತರಿಸಿಟ್ಟ ಬೆಲ್ಲದಚ್ಚುಗಳು
ನುಣ್ಣನೆ ಬೋಳಾದದ್ದು
ಬೆಳಕಿಗೆ ಬರುವ ಕಥೆಯಲ್ಲ
ಕತ್ತಲನ್ನು ಬಿತ್ತುವ ಹುಂಬತನ

ಬೆಳಗಾಗುವುದರಲ್ಲಿ ಬೆಟ್ಟಗಳು
ಕಟ್ಟಡಗಳಲಿ ಕೈ ಕಟ್ಟಿ ನಿಂತವಲ್ಲ
ಮಿರಿ ಮಿರಿ ಮಿಂಚುವ ಶೂಗಳಡಿ
ಭತ್ತ ಬೆಳೆವ ಗದ್ದೆಗಳ ಸಮಾಧಿ
ಬರಿದಾದ ನದಿಗಳೆದೆ ಮೇಲೆ

ಮಳಲ ಸೆರಗು, ಮೇಲೆ ಬಿಸಿಗಾಳಿ
ಬೀಸಿದರೂ ಸರಿ, ಬೀಸದಿದ್ದರೂ ಸರಿ
ಸರಿದ ಮರಳು
ಮುಗಿಲಲ್ಲಿ
ಮಳೆಯ ಬಿತ್ತದು.

ಕಂಗಾಲಾಗಿ ಕೂತ ಅನ್ನದ ಗದ್ದೆ
ಅಣುವನ್ನು
ಆವಾಹಿಸಿಕೊಂಡಂತೆ
ನೆರಳುಗಳನ್ನು ಬಗ್ಗು ಬಡಿದ
ದಾರಿಗಳಿಗೆ ಅಗಲವಾಗುವ ರೋಗ
ಕಣ್ಣಗಲಕ್ಕೂ ಬೆಳೆದು ನಿಂತ ಬಂಗಲೆಗಳಲ್ಲಿ
ನಿಂತ ನೆಲವ ಮರೆತ ಅಪಸ್ಮಾರ !
ಗೂಡರಸಿಕೊಂಡು ಹೊರಟ ಹಕ್ಕಿಗಳಿಗೆ
ಹೊಗೆತೊಟ್ಟಿಲು, ಹಗೆ ಮುಗಿಲು



ಮರಳು, ಮಣ್ಣು, ಬೆಟ್ಟ, ಬಯಲು, ಗುಡ್ಡ
ನೀರು... ಎಲ್ಲವ ಮುಗಿಸಿದ
ಮನುಷ್ಯರಿಗೆ
ಚಿತ್ರಗಳಲ್ಲಿ ನಿಸರ್ಗವ ಕಾಣುವುದೊಂದು
ಹವ್ಯಾಸ, ಹೆಮ್ಮೆ !

**ವಾಸುದೇವ ನಾಡಿಗ್**, ಜವಾಹರ ನವೋದಯ ವಿದ್ಯಾಲಯ, ಏನಿಗದಲೆ - ೫೬೩ ೧೨೫, ಚಿಂತಾಮಣಿ, ಕೋಲಾರ

# ರೈತನೇಕೆ ಆತ್ಮಹತ್ಯೆ ಹಾದಿ ಹಿಡಿದ ?



**ಆತ್ಮಹತ್ಯೆ ಹೌದು... ಅಲ್ಲ**

ನಮ್ಮ ರಾಜ್ಯ ಸರ್ಕಾರದ ಪ್ರಕಾರ ''ನೇರವಾಗಿ'' ಕೃಷಿಗೆಂದು ಬ್ಯಾಂಕಿನಿಂದ ಸಾಲ ಪಡೆದು, ಅದನ್ನು ತೀರಿಸಲಾಗದೆ ಆತ್ಮಹತ್ಯೆ ಮಾಡಿಕೊಂಡರೆ ಮಾತ್ರ ಅದನ್ನು ರೈತನ ಆತ್ಮಹತ್ಯೆಯೆಂದು ಪರಿಗಣಿಸಿ ಪರಿಹಾರ ನೀಡಲಾಗುವುದು.

ರೈತನು ಬೆಳೆದ ಬೆಳೆಗೆ ಲಾಭದಾಯಕ ಬೆಲೆ ಸಿಗದೆ, ಮಗಳ ಮದುವೆಗೋ, ಮನೆಯವರ ವೈದ್ಯಕೀಯ ವೆಚ್ಚಕ್ಕೋ ಸಾಲ ಮಾಡಿ, ಅದನ್ನು ತೀರಿಸಲಾಗದೆ ಆತ್ಮಹತ್ಯೆ ಮಾಡಿಕೊಂಡರೆ ಅದು ಕೃಷಿ ಬಿಕ್ಕಟ್ಟಿನಿಂದಾಗಿ ಉಂಟಾದ ಆತ್ಮಹತ್ಯೆಯಲ್ಲ. ಸರ್ಕಾರದಲ್ಲಿ ಅಂತಹವರಿಗೆ ಪರಿಹಾರವಿಲ್ಲ.

ನಮ್ಮ ಸಂಪ್ರದಾಯದ ಪ್ರಕಾರ ಜಮೀನು ತಂದೆಯ ಹೆಸರಿನಲ್ಲಿದ್ದು, ಮಗ ಬೇಸಾಯ ಮಾಡುತ್ತಿರುತ್ತಾನೆ. ಅದರಿಂದ ಉಂಟಾದ ನಷ್ಟದಿಂದ ಮರುಗಿದ ಮಗನು ಆತ್ಮಹತ್ಯೆ ಮಾಡಿಕೊಂಡರೆ ಅದು ಕೃಷಿ ಸಮಸ್ಯೆಯಿಂದ ಉಂಟಾದ ಆತ್ಮಹತ್ಯೆಯಲ್ಲ. ಸರ್ಕಾರ ದಾಖಲೆಗಳ ಪ್ರಕಾರ ಜಮೀನು ಮಗನ ಹೆಸರಿನಲ್ಲಿಲ್ಲ, ಆದ್ದರಿಂದ ಆತ್ಮಹತ್ಯೆ ಮಾಡಿಕೊಂಡವನು ರೈತನಲ್ಲ. ಎಷ್ಟು ಸರಳ ನಿಯಮಗಳಲ್ಲವೇ ?

**ನಮ್ಮ ದೇಶದಲ್ಲಿ ಅನ್ನ ಕೊಡುವ ರೈತರು ಸಂಕಷ್ಟದಲ್ಲಿದ್ದಾರೆ. ಅವರಿಗೆ ಬೆನ್ನೆಲುಬಾಗಿ ನಿಲ್ಲಬೇಕಾದವರೆಲ್ಲ ಕೈಚೆಲ್ಲಿ ಕೂತಿದ್ದಾರೆ. ಸಮಸ್ಯೆಗಳ ಸುಳಿಯಲ್ಲಿ ಕೃಷಿಕರು ಆತ್ಮಹತ್ಯೆ ಹಾದಿ ಹಿಡಿದಿದ್ದಾರೆ. ಇನ್ನಾದರೂ ಸರ್ವರೂ ಅವರ ಬೆಂಬಲಕ್ಕೆ ನಿಲ್ಲಬೇಕಿದೆ.**

ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ಸರಪನಹಳ್ಳಿ ಗ್ರಾಮದ ಮಂಜೇಗೌಡನಿಗೆ ನಾಲ್ಕು ಎಕರೆ ಜಮೀನಿತ್ತು. ಐದು ಕೊಳವೆ ಬಾವಿ ಕೊರೆಸಿದರು. ಸಿಕ್ಕ ಅಲ್ಪ ನೀರಿನಲ್ಲಿ ಆಲೂ ಬೆಳೆದರು. ಮಳೆಗೆ ಸಿಕ್ಕಿ ಇದ್ದ ಆಲೂ ಕೊಳೆತು ನಷ್ಟವಾಯಿತು. ಅವರ ಮೇಲೆ ಇದ್ದ ಸಾಲ ಎರಡು ಲಕ್ಷ. ಸಾಲಕ್ಕೆ ಹೆದರಿ ಒಂದು ಬಾಟ್ಲಿ ವಿಷವನ್ನು ಚೆಂಬು ಹಾಲಿಗೆ ಸಕ್ಕರೆಯೊಂದಿಗೆ ಬೆರೆಸಿದರು. ಮೊದಲು ಮಗನಿಗೆ ಕುಡಿಸಿ, ನಂತರ ಗಂಡ-ಹೆಂಡತಿ ಕುಡಿದು (೮-೧೨-೦೬) ಇಹಲೋಕ ತ್ಯಜಿಸಿದರು.

ಹಾನಗಲ್ ಗ್ರಾಮದ ಹಿರಿಯ ರೈತ ರಾಮಣ್ಣ, ಅಕ್ಕಿ ಆಲೂರಿನಲ್ಲಿರುವ ಪಿ.ಎಲ್.ಡಿ. ಬ್ಯಾಂಕ್‌ನಿಂದ ಐವತ್ತು ಸಾವಿರ ರೂಪಾಯಿ ಸಾಲ ಪಡೆದಿದ್ದ. ಅದು ಬಡ್ಡಿಯೆಲ್ಲ ಸೇರಿ ಒಂದು ಲಕ್ಷ ಆಗಿತ್ತು. ಬೆಳೆದ ಕಬ್ಬಿಗೆ ಸರಿಯಾಗಿ ಬೆಲೆ ಸಿಗದೆ, ಕಾರ್ಖಾನೆಗೆ ಸಾಗಿಸಲಾಗದೆ ಒಣಗುತ್ತಿತ್ತು. ಆದರಿಂದ ಅಸಹಾಯಕನಾದ ರಾಮಣ್ಣ ತಾನೇ ಬೆಳೆದಿದ್ದ ಕಬ್ಬಿನ ಬೆಳೆಗೆ ಬೆಂಕಿ ಹಚ್ಚಿ, ಆ ಬೆಂಕಿಯಲ್ಲಿ ಹಾರಿ (೧೮-೪-೦೭) ಆತ್ಮಹತ್ಯೆ ಮಾಡಿಕೊಂಡರು.

ಈ ರೀತಿ ವರದಿಗಳು ದಿನಾಲೂ ನಮ್ಮ ಪತ್ರಿಕೆಗಳಲ್ಲಿ ಬರುತ್ತಲೇ ಇರುತ್ತವೆ. ಅದನ್ನು ಓದಿ ಒಂದು ಕ್ಷಣ ಆ ಘಟನೆಗೆ ಮರುಗಿ ನಮ್ಮ ಕೆಲಸಕ್ಕೆ ತೆರಳುತ್ತೇವೆ. ಯಾಕೆ ಅನ್ನದಾತರೇ ಈ ರೀತಿ ಜೀವತ್ಯಾಗ ಮಾಡುತ್ತಿದ್ದಾರೆ ಎಂದು ಯೋಚಿಸುವಷ್ಟು ಸಮಯ ನಮಗಿಲ್ಲ. ಆತ್ಮಹತ್ಯೆ ಮಾಡಿಕೊಂಡ ರೈತರ ಅಂಕಿ-ಸಂಖ್ಯೆಗಳನ್ನು ಗಮನಿಸಿದರೆ ಮೈ ನಡುಗುತ್ತದೆ. ಇದು ಹೀಗೇ ನಡೆದರೆ ಮುಂದಿನ ಭವಿಷ್ಯ ?

ಈ ಅಂಶದ ಕುರಿತು ಖ್ಯಾತ ಅಭಿವೃದ್ಧಿ ಪತ್ರಕರ್ತ ಪಿ. ಸಾಯಿನಾಥ್ ಅವರು ''೧೯೯೭ರಿಂದ ೨೦೦೫ರ ನಡುವೆ ದೇಶದಲ್ಲಿ ಒಟ್ಟು ಸುಮಾರು ಒಂದೂವರೆ ಲಕ್ಷ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇವುಗಳಲ್ಲಿ ಮೂರನೇ ಎರಡರಷ್ಟು ಕೇವಲ ನಾಲ್ಕೇ ರಾಜ್ಯಗಳಲ್ಲಿ (ಮಹಾರಾಷ್ಟ್ರ, ಆಂಧ್ರಪ್ರದೇಶ, ಕರ್ನಾಟಕ, ಮಧ್ಯಪ್ರದೇಶ) ಸಂಭವಿಸಿದೆ. ಈ ನಾಲ್ಕು ರಾಜ್ಯಗಳ ಜನಸಂಖ್ಯೆಯು ಈ ದೇಶದ ಒಟ್ಟು ಜನಸಂಖ್ಯೆಯ ಮೂರನೇ ಒಂದು ಮಾತ್ರ ಎಂಬುದನ್ನು ಗಮನಿಸಬೇಕು'' ಎಂದು ತಮ್ಮ ಕಳವಳ ವ್ಯಕ್ತಪಡಿಸುತ್ತಾರೆ.

## ಪರಮೇಶ್ವರಯ್ಯ ಸೊಪ್ಪಿಮಠ

ಭಾರತದಲ್ಲಿ ಒಟ್ಟಾರೆ ಆತ್ಮಹತ್ಯೆಗಳ ಪ್ರಮಾಣ ೧೯೯೭-೨೦೦೫ರ ಅವಧಿಯಲ್ಲಿ ಶೇಕಡ ೨.೧೮ ದರದಲ್ಲಿ ಹೆಚ್ಚಿದೆ. ಈ ಒಂಭತ್ತು ವರ್ಷಗಳಲ್ಲಿ ಮೇಲಿನ ನಾಲ್ಕು ರಾಜ್ಯಗಳಲ್ಲಿ ೮೯,೩೬೨ ಆತ್ಮಹತ್ಯೆಗಳ ಪ್ರಕರಣ ದಾಖಲಾಗಿವೆ. ಅವುಗಳಲ್ಲಿ ಅತಿ ಹೆಚ್ಚು ಅಂದರೆ ೨೮,೯೧೧ ಮಹಾರಾಷ್ಟ್ರದಲ್ಲಿ ನಡೆದಿವೆ. ಮಧ್ಯಪ್ರದೇಶ ಮತ್ತು ಛತ್ತೀಸಗಢಗಳಲ್ಲಿ ೨೩,೫೮೮ ಪ್ರಕರಣಗಳು ದಾಖಲಾಗಿವೆ. ಕರ್ನಾಟಕದಲ್ಲಿ ೨೦,೦೯೩ ಪ್ರಕರಣ, ಆಂಧ್ರದಲ್ಲಿ ೧೬,೭೭೦ ರೈತರ ಆತ್ಮಹತ್ಯೆಗಳು ನಡೆದಿವೆ. ಒಟ್ಟಾರೆಯಾಗಿ ನಮ್ಮ ರಾಷ್ಟ್ರದಲ್ಲಿ ಪ್ರತಿ ೩೨ ನಿಮಿಷಕ್ಕೆ ಒಬ್ಬ ರೈತ ಆತ್ಮಹತ್ಯೆಗೆ ಶರಣಾಗುತ್ತಿದ್ದಾನೆ.

### ಇದಕ್ಕೆ ಕಾರಣಗಳೇನು ?

ಆಹಾರ ಧಾನ್ಯಗಳ ಉತ್ಪಾದನೆಯ ಮೇಲೆ ರಾಷ್ಟ್ರದ ರಾಜಕೀಯ ಸ್ಥಿರತೆ ನಿಂತಿದೆ ಎಂದು ರಾಜಕೀಯ ನಾಯಕರು ತಮ್ಮ ಭಾಷಣಗಳಲ್ಲಿ ಹೇಳುತ್ತಲೇ ಇದ್ದಾರೆ. ಸರ್ಕಾರಗಳು ರೈತರಿಗೆ ಏನಾದ್ರು ಮಾಡಿದ್ದು, ಕೊಟ್ಟಿದ್ದು ಗೇಣುದ್ದ ಮಾತ್ರ ಎಂಬಂತಾಗಿದೆ. ಯಾಕೆಂದರೆ ದೇಶದಲ್ಲಿ ೧೯೦ ದಶಲಕ್ಷ ಹೆಕ್ಟೇರ್ ಭೂಮಿಯಲ್ಲಿ ಆಹಾರ ಉತ್ಪಾದನೆ ನಡೆಯುತ್ತಿದ್ದು, ಇಂದಿಗೂ ಶೇಕಡ ೭೦ರಷ್ಟು ಜನರು ವ್ಯವಸಾಯವನ್ನು ತಮ್ಮ ಜೀವನಾಧಾರವಾಗಿ ಮಾಡಿಕೊಂಡಿದ್ದಾರೆ. ಇಷ್ಟೆಲ್ಲ ಮಹತ್ವವಿದ್ದರೂ ಕೃಷಿಗಾಗಿಯೆ ಬಜೆಟ್ ಮಂಡಿಸುವ ಸರ್ಕಾರಗಳು ಎಲ್ಲೂ ಉದಯಿಸಿಲ್ಲದಿರುವುದು ದುರಂತವೆ.

ಕೇಂದ್ರ ಸರ್ಕಾರದ ಇತ್ತೀಚಿನ ನಾಲ್ಕು ಧೋರಣೆಗಳು ಕೃಷಿಬಾಂಧವರಲ್ಲಿ ಹೆಚ್ಚಿನ ಆತಂಕವನ್ನುಂಟು ಮಾಡಿವೆ.

೧. ಕೇಂದ್ರ ಸರ್ಕಾರ ರೈತರ ಸಾಲದ ಮೇಲಿನ ಬಡ್ಡಿಯನ್ನು ಮನ್ನಾ ಮಾಡುವುದಾಗಿ ಹೇಳಿದ್ದರೂ, ಅದು ೨೦೦೪ರಲ್ಲಿ ಪರಿಹಾರ ಪಡೆದ ಫಲಾನುಭವಿಗಳಿಗೆ ಅನ್ವಯವಾಗುವುದಿಲ್ಲ. ದೊಡ್ಡ ಸಮುದಾಯಕ್ಕೆ ಇದರ ಪ್ರಯೋಜನವಾಗುತ್ತಿಲ್ಲ. ಅಲ್ಲದೆ ಕೃಷಿ ಬಿಕ್ಕಟ್ಟಿಗೆ ಪ್ರಮುಖ ಕಾರಣವಾದ ಲಾಭದಾಯಕ ಬೆಲೆಯ ವಿಚಾರದಲ್ಲಿ ಏನನ್ನೂ ಹೇಳಿಲ್ಲ.

೨. ರಾಜ್ಯ ಸಹಕಾರ ಬ್ಯಾಂಕುಗಳಿಗೆ ಮರುಸಾಲವನ್ನು ನೀಡುವ ಕೇಂದ್ರ ಸರ್ಕಾರದ ನಿಯಂತ್ರಿತ ನಬಾರ್ಡ್ ಹಣಕಾಸು ಸಂಸ್ಥೆ ಸಾಲ ನೀಡುವುದಿಲ್ಲ ಎಂದು ಬೆದರಿಕೆ ಹಾಕಿದೆ. ಆಗ ಬ್ಯಾಂಕುಗಳು ರೈತರಿಗೆ ಸಾಲ ನೀಡುವುದನ್ನು ನಿಲ್ಲಿಸಬೇಕಾಗುತ್ತದೆ. ಇದರಿಂದಾಗಿ ಪುನಃ ರೈತರು ಖಾಸಗಿ ಲೇವಾದೇವಿಗಾರರಲ್ಲಿ ಮೊರೆಹೋಗಿ ಹೆಚ್ಚು ಬಡ್ಡಿ ತೆರಬೇಕಾಗುತ್ತದೆ. ವಿಷಚಕ್ರ ಸುತ್ತುತ್ತದೆ.

೩. ಇತರೆ ಏಷಿಯಾ ದೇಶಗಳೊಂದಿಗೆ ಮುಕ್ತ ವ್ಯಾಪಾರ ಒಪ್ಪಂದಗಳಿಗೆ ಕೇಂದ್ರ ಸರ್ಕಾರ ಸಹಿ ಹಾಕಿರುವುದರ ಫಲವಾಗಿ ಪಾಮ್ ಎಣ್ಣೆ ಬೆಳೆ ಬೆಳೆಯುವ ರೈತರಿಗೆ ಹಾನಿಯಾಗಲಿದೆ. ಇತರೆ ದೇಶಗಳಲ್ಲಿ ಕಡಿಮೆ ಬೆಲೆಗೆ ಸಿಗುವ ವಾಣಿಜ್ಯ ಬೆಳೆಗಳಿಂದ ಇಲ್ಲಿನ ರೈತರಿಗೆ ಹಾನಿಯಾಗಲಿದೆ.

## ೧೯೯೭ರಿಂದ ೨೦೦೫ರ ವರೆಗೆ ಭಾರತದಲ್ಲಿ ರೈತರ ಆತ್ಮಹತ್ಯೆಗಳು

| ವರ್ಷ | ಮಹಾರಾಷ್ಟ್ರ | ಮಧ್ಯಪ್ರದೇಶ | ಕರ್ನಾಟಕ | ಆಂಧ್ರಪ್ರದೇಶ | ೪ ರಾಜ್ಯಗಳಲ್ಲಿ | ಭಾರತದಲ್ಲಿ | ೪ ರಾಜ್ಯಗಳಲ್ಲಿ |
|---|---|---|---|---|---|---|---|
| ೧೯೯೭ | ೧೯೧೭ | ೨೩೯೦ | ೧೮೩೨ | ೧೦೯೭ | ೭೨೩೬ | ೧೩೬೨೨ (೧೦೦) | ೫೩ |
| ೧೯೯೮ | ೨೪೦೯ | ೨೨೭೮ | ೧೮೮೩ | ೧೮೧೩ | ೮೩೮೩ | ೧೬೦೧೫ (೧೧೮) | ೫೨ |
| ೧೯೯೯ | ೨೪೨೩ | ೨೬೫೪ | ೨೩೭೯ | ೧೯೪೭ | ೯೪೩೦ | ೧೬೦೮೨ (೧೧೮) | ೫೯ |
| ೨೦೦೦ | ೩೦೨೨ | ೨೬೬೦ | ೨೬೩೦ | ೧೫೨೫ | ೯೮೩೭ | ೧೬೬೦೩ (೧೨೨) | ೫೯ |
| ೨೦೦೧ | ೩೫೩೬ | ೨೮೨೪ | ೨೫೦೫ | ೧೫೦೯ | ೧೦೩೭೪ | ೧೬೪೧೫ (೧೨೧) | ೬೩ |
| ೨೦೦೨ | ೩೬೯೫ | ೨೫೭೮ | ೨೩೪೦ | ೧೮೯೬ | ೧೦೫೦೯ | ೧೭೯೭೧ (೧೩೨) | ೫೮ |
| ೨೦೦೩ | ೩೮೩೬ | ೨೫೧೧ | ೨೬೭೮ | ೧೮೦೦ | ೧೦೮೨೫ | ೧೭೧೬೪ (೧೨೬) | ೬೩ |
| ೨೦೦೪ | ೪೧೪೭ | ೩೦೩೩ | ೧೯೬೩ | ೨೬೬೬ | ೧೧೮೦೯ | ೧೮೨೪೧ (೧೩೪) | ೬೫ |
| ೨೦೦೫ | ೩೯೨೬ | ೨೬೬೦ | ೧೮೮೩ | ೨೪೯೦ | ೧೦೯೫೯ | ೧೭೧೩೧ (೧೨೬) | ೬೪ |
| ಒಟ್ಟು | ೨೮೯೧೧ | ೨೩೫೮೮ | ೨೦೦೯೩ | ೧೬೭೭೦ | ೮೯೩೬೨ | ೧೪೯೨೪೪ | ೬೦ |

ಮೂಲ : ಭಾರತದ ಸರಕಾರದ ಗೃಹ ಮಂತ್ರಾಲಯ ಪ್ರಕಟಿಸುವ ''ಭಾರತದಲ್ಲಿ ಆಕಸ್ಮಿಕ ಸಾವುಗಳು ಮತ್ತು ಆತ್ಮಹತ್ಯೆಗಳು''. ೭ನೇ ಕಾಲಂ ದೇಶದಲ್ಲಿ ಒಟ್ಟು ರೈತರ ಆತ್ಮಹತ್ಯೆಗಳ ಸಂಖ್ಯೆಯನ್ನು ಕೊಡುತ್ತದೆ. ಆವರಣದಲ್ಲಿರುವ ಸಂಖ್ಯೆ ೧೯೯೭ರ ೧೦೦ಕ್ಕೆ ಹೋಲಿಸಿದರೆ ಎಷ್ಟು ಪ್ರಮಾಣದಲ್ಲಿ ಹೆಚ್ಚಿದೆ ಎಂಬುದನ್ನು ಸೂಚಿಸುತ್ತದೆ.
*(ಕೃಪೆ: ''ದಿ ಹಿಂದೂ'' ದೈನಿಕ ೧೨-೧೫-ನವೆಂಬರ್, ೨೦೦೭)*

೪. ರೂಪಾಯಿ ಬೆಲೆಯಲ್ಲಿ ಹೆಚ್ಚಳ ಕಾಣುತ್ತಿರುವುದರಿಂದ ರಫ್ತು ವ್ಯಾಪಾರದ ಮೇಲೆ ಅವಲಂಬಿತವಾಗಿರುವ ವಾಣಿಜ್ಯ ಬೆಳೆಗಳಾದ ತೆಂಗು, ಕಾಫಿ, ಯಾಲಕ್ಕಿ, ಕರಿಮೆಣಸು... ಬೆಳೆಗಳನ್ನು ಬೆಳೆಯುವ ರೈತರು ಕಂಗಾಲಾಗಿದ್ದಾರೆ. ಡಾಲರ್ ಬೆಲೆ ಇಳಿಯುತ್ತಿದ್ದು, ಇದಕ್ಕೆ ಪರಿಹಾರವಾಗಿ ಚಿಕ್ಕಾಸೂ ಕೊಡುವುದಿಲ್ಲ ಎಂದು ವಾಣಿಜ್ಯ ಹಾಗೂ ಹಣಕಾಸು ಸಚಿವರು ಸ್ಪಷ್ಟವಾಗಿ ಹೇಳಿದ್ದಾರೆ. ಹಾಗಾಗಿ ರಫ್ತು ಆಧಾರಿತ ಬೆಳೆ ಬೆಳೆಯುವ ರೈತ ದಿವಾಳಿಯಾಗುತ್ತಿದ್ದಾನೆ.

ತೀರಾ ಇತ್ತೀಚೆಗೆ ಸರ್ಕಾರ ಮಾರುಕಟ್ಟೆ ಕಾಯ್ದೆ ತಿದ್ದುಪಡಿ ಮಾಡಿದ್ದರಿಂದ ವಿದೇಶಿ ಕಂಪನಿಗಳು ಕೂಡ ನಮ್ಮ ಮಾರುಕಟ್ಟೆ ಪ್ರವೇಶಿಸಿ, ಗುತ್ತಿಗೆ ಕೃಷಿ ಆರಂಭಿಸಿ ಏಕಕಾಲಕ್ಕೆ ರೈತ, ವರ್ತಕ ಮತ್ತು ಬಳಕೆದಾರರನ್ನು ಹಿಡಿತಕ್ಕೆ ತೆಗೆದುಕೊಂಡು ಆ ನಂತರ ದೇಶದ ಆಹಾರ ಸಾರ್ವಭೌಮತ್ವಕ್ಕೆ ಆತಂಕ ಒಡ್ಡಲಿವೆ. ಆಗ ಬರೀ ರೈತರಲ್ಲ, ವರ್ತಕರೂ ಕೂಡ ಆತ್ಮಹತ್ಯೆಯ ದಾರಿ ಹಿಡಿಯುವಂತಾಗುತ್ತದೆ.

ನಲವತ್ತು ಶತಮಾನಗಳಿಗೂ ಹೆಚ್ಚು ಕಾಲದಿಂದ ನಮ್ಮ ಪೂರ್ವಜರು ಸಾವಯವ ವಿಧಾನದಲ್ಲಿ ಕೃಷಿ ಮಾಡಿ ಮಣ್ಣಿನ ಫಲವತ್ತತೆಯನ್ನು ಉಳಿಸಿಕೊಂಡು ಬಂದರು. 'ಅಭಿವೃದ್ಧಿ' ಎಂಬ ಕನಸಿನಲ್ಲಿ, ಹಸಿರು ಕ್ರಾಂತಿ ಹೆಸರಿನಲ್ಲಿ, ವಾಣಿಜ್ಯ ಬೆಳೆಗಳ ವ್ಯಾಪಾರದಲ್ಲಿ ಕಳೆದ ನಾಲ್ಕೈದು ದಶಕಗಳಲ್ಲಿ ದೇಶೀ ತಳಿಗಳನ್ನು ಮೂಲೆಗೆ ತಳ್ಳಿ, ವಿದೇಶೀ ಗಿಡ್ಡ ತಳಿಗಳನ್ನು ಪ್ರೋತ್ಸಾಹಿಸಲಾಯಿತು, ಆದಕ್ಕೆ ರಾಸಾಯನಿಕ ಗೊಬ್ಬರಗಳ ಬಳಕೆ ಅಧಿಕವಾಯಿತು. ಮಣ್ಣು ನಿಸ್ಸಾರವಾಗುತ್ತಲೇ ಹೋಯಿತು. ಈ ಗೊಬ್ಬರದಿಂದ ಬೆಳೆದ ಬೆಳೆಗಳು ಪೀಡೆ, ರೋಗಗಳಿಗೆ ಸುಲಭವಾಗಿ ಬಲಿಯಾಗತೊಡಗಿದವು. ಕೀಟನಾಶಕದ ಹೆಸರಿನಲ್ಲಿ ವಿಷಪ್ರವಾಹ ಹೆಚ್ಚಾಯ್ತು. ಹಸಿರು ಕ್ರಾಂತಿಯ ಹೆಸರಿನಲ್ಲಿ ಮಾಡಲಾದ ಪವಾಡಗಳು ಕೈಗಾರಿಕಾ ಉದ್ಯಮಿಗಳಿಗೆ, ವ್ಯಾಪಾರಿಗಳಿಗೆ ಹಾಗೂ ಉದ್ದಿಮೆದಾರರಿಗೆ ಲಾಭ ತಂದುಕೊಟ್ಟಿತು. ಇದರಿಂದಾಗಿ ಕೃಷಿಕರ ಖರ್ಚು ಹೆಚ್ಚಾಗಿ ರೈತನ ಜೀವನವೇ ಅಲ್ಲದೆ ಅವನ ಜಮೀನು ಬರಡಾಯಿತು. ಸಾಲ ಹೆಚ್ಚಾಗುತ್ತಲೇ ಹೋಯಿತು. ಅನ್ನದಾತನಿಗೆ ಬೇರೆ ಮಾರ್ಗಗಳು ಗೋಚರಿಸದೆ ಆತ್ಮಹತ್ಯೆಗೆ ಮುಂದಾದ.

ನಮ್ಮ ದೇಶದಲ್ಲಿ ಶೇಕಡ ೭೩ರಷ್ಟು ರೈತರು ಐದು ಎಕರೆಗಿಂತ ಕಡಿಮೆ ಭೂಮಿ ಹೊಂದಿದ್ದಾರೆ. ಅದರಲ್ಲೂ ಸಾಮಾನ್ಯವಾಗಿ ವಾಣಿಜ್ಯ ಬೆಳೆ ಬೆಳೆಯುವ ಮಧ್ಯಮ ವರ್ಗದ ರೈತರೇ ಆತ್ಮಹತ್ಯೆಗೆ ಶರಣು ಹೋಗುತ್ತಿದ್ದಾರೆ. ಸಾಲ ಸೋಲ ಮಾಡಿ ಬೆಳೆ ಬೆಳೆದರೆ ಸಕಾಲಕ್ಕೆ ಮಳೆಯಾಗದೆ ಬೆಳೆ ಹಾನಿಯಾಗಿ ಅದನ್ನು ತೀರಿಸಲಾಗುತ್ತಿಲ್ಲ. ಮಳೆ ಚೆನ್ನಾಗಿ ಬಂದು ಬೆಳೆ ಉತ್ತಮವಾಗಿ ಬಂದರೆ ಬೆಳೆದ ಬೆಳೆಗೆ ನ್ಯಾಯ ಬೆಲೆ ಸಿಗುತ್ತಿಲ್ಲ.

ಕಬ್ಬಿನ ಉದಾಹರಣೆ ತೆಗೆದುಕೊಂಡರೆ, ಕಬ್ಬನ್ನು ಕಟಾವ್ ಮಾಡಲು ತಗಲುವ ವೆಚ್ಚವನ್ನು ಕೂಡ ಭರಿಸಲಾಗದಷ್ಟು ಬೆಲೆಯನ್ನು ಸಕ್ಕರೆ ಕಾರ್ಖಾನೆಗಳು ನಿಗದಿ ಮಾಡಿವೆ. ಇನ್ನು ಕಟಾವಿನ ಖರ್ಚು, ಕಾರ್ಖಾನೆಗೆ ಸಾಗಾಣಿಕೆ ವೆಚ್ಚ, ಹೊಲದಲ್ಲಿ ಬೆಳೆ ಬೆಳೆಸಲು ತಗಲುವ ವೆಚ್ಚ, ಇಡೀ ಒಂದು ವರ್ಷದ ರೈತರ ಪರಿಶ್ರಮದ ಬೆಲೆ...? ಅದಕ್ಕಾಗಿ ನಮ್ಮ ರಾಜ್ಯದಲ್ಲಿ ಅಂದಿನ ಮುಖ್ಯಮಂತ್ರಿ ಹಾಗೂ ರೈತರ ನಡುವಿನ ಮಾತುಕತೆಯಲ್ಲಿ ೧೭೦೦ ರೂಪಾಯಿಗಳಿಂದ ೨೦೦೦ ರೂಪಾಯಿಗಳವರೆಗೆ ಪ್ರತಿ ಟನ್ನಿಗೆ ಬೆಲೆ ನೀಡಬೇಕೆಂದು ಚರ್ಚೆಯಾಯಿತು. ಪಕ್ಕದ ಮಹಾರಾಷ್ಟ್ರದಲ್ಲಿ ಈಗಾಗಲೆ ಟನ್‌ಗೆ ೧೭೦೦ ರೂಪಾಯಿ ಕೊಡಲಾಗುತ್ತಿದೆ. ಇಂತಹ ಒತ್ತಡದ ಹಿನ್ನೆಲೆಯಲ್ಲಿ ಮುಖ್ಯಮಂತ್ರಿ ೧೨೦೦ ರೂಪಾಯಿ ನೀಡುವ ಭರವಸೆ ನೀಡಿದರು. ಆ ಕೆಲಸ ಆಗಲೇ ಇಲ್ಲ. ಯಥಾರೀತಿ ಸಕ್ಕರೆ ಕಾರ್ಖಾನೆಗಳು ೬೫೦-೭೦೦ ರೂಪಾಯಿವರೆಗೆ ಖರೀದಿಸುತ್ತಿವೆ. ಹೀಗಾದಲ್ಲಿ ಯಾವ ರೈತ ಆತ್ಮಹತ್ಯೆಗೆ ಮೊರೆ ಹೋಗಲಾರ ?

ಮಗಳ ಮದುವೆ, ಮಗನ ವಿದ್ಯಾಭ್ಯಾಸದ ಚಿಂತೆ,

### ಸರ್ಕಾರದ ಮತ್ತೊಂದು ಮುಖ

ಅಖಿಲ ಭಾರತ ಬ್ಯಾಂಕ್ ನೌಕರರ ಒಕ್ಕೂಟದ ೨೨ನೇ ರಾಜ್ಯ ಸಮ್ಮೇಳನದಲ್ಲಿ ಅದರ ಪ್ರಧಾನ ಕಾರ್ಯದರ್ಶಿ ಸಿ. ಹೆಚ್. ವೆಂಕಟಾಚಲಂ ಅವರು ಹೇಳಿದಂತೆ ಸರ್ಕಾರಿ ಸ್ವಾಮ್ಯದ ಬ್ಯಾಂಕುಗಳಲ್ಲಿ ಒಟ್ಟು ೧,೫೦,೦೦೦ ಕೋಟಿ ರೂಪಾಯಿಗಳಷ್ಟು ವಸೂಲಾಗದ ಸಾಲ (ಎನ್.ಪಿ.ಎ.) ಇದೆ. ಅದಕ್ಕೆ ಶೇಕಡ ೭೦ರಷ್ಟು ಉದ್ದಿಮೆದಾರರು ಮತ್ತು ಶ್ರೀಮಂತರು ಕಾರಣ. ಸರ್ಕಾರ ಸಾಲ ಪಾವತಿಗೆ ಅವರ ಮೇಲೆ ಒತ್ತಡ ಹೇರುತ್ತಿಲ್ಲ.

ಹಲವು ವರ್ಷಗಳಿಂದ ಬಾಕಿ ಉಳಿದಿರುವ ಸುಮಾರು ೮೫ ಸಾವಿರ ಕೋಟಿ ರೂಪಾಯಿ ತೆರಿಗೆಯನ್ನು ಕೇಂದ್ರ ಸರ್ಕಾರ ಮನ್ನಾ ಮಾಡುವ ಸಾಧ್ಯತೆ ಇದೆ. ಇದನ್ನು ವಸೂಲಿ ಮಾಡಲು ಸರ್ಕಾರ ಮೀನಮೇಷ ಎಣಿಸುತ್ತಿದೆ.

ನಮ್ಮ ರಾಜ್ಯದಲ್ಲಿ ಕೇವಲ ೧೦೨೪ ಉದ್ದಿಮೆದಾರರಿಂದ ೨,೩೫,೦೦೦ ಕೋಟಿ ರೂಪಾಯಿ ಬಾಕಿ ಇದೆ.

## ಕೇರಳದಲ್ಲೇಕೆ ಕಡಿಮೆ ?

ಕೇರಳದಲ್ಲಿ ಆತ್ಮಹತ್ಯೆಗೆ ಒಳಗಾಗುವ ರೈತರ ಸಂಖ್ಯೆ ಇಳಿಮುಖವಾಗುತ್ತಿದೆ. ಇಲ್ಲವೆ ಹೆಚ್ಚು ಕಡಿಮೆ ನಿಂತಿದೆ ಎಂದು ಅಲ್ಲಿನ ರೈತ ಮುಖಂಡರು ಹೇಳುತ್ತಾರೆ.

ಅಲ್ಲಿ ಹೆಚ್ಚಾಗಿ ವಾಣಿಜ್ಯ ಬೆಳೆ ಬೆಳೆಯುವ ವೈನಾಡ್ ಜಿಲ್ಲೆಯಲ್ಲಿ ಆತ್ಮಹತ್ಯೆಗಳು ನಡೆದಿದ್ದವು. ವೈನಾಡ್ ಜಿಲ್ಲೆ ಕರ್ಷಕ ಸಂಘರ್ಷ ಸಮಿತಿ ಪ್ರಕಾರ ೨೦೦೧ರಲ್ಲಿ ೫೬ ಜನ ಇದಕ್ಕೆ ಶರಣಾದರೆ,೨೦೦೪ರಲ್ಲಿ ೧೩೧ಕ್ಕೆ ಏರಿತು. ೨೦೦೫ರಲ್ಲಿ ೮೬, ೨೦೦೬ರಲ್ಲಿ ೪೮ಕ್ಕೆ ಇಳಿದಿದೆ. ೨೦೦೭ರಿಂದ ಏಳು ಜನ ಮಾತ್ರ ಆತ್ಮಹತ್ಯೆ ಮಾಡಿಕೊಂಡಿದ್ದಾರೆ.

ಆತ್ಮಹತ್ಯೆ ಕಡಿಮೆಯಾಗಲು ಕೇರಳ ರಾಜ್ಯ ಯೋಜನಾ ಆಯೋಗದ ಸದಸ್ಯರಾದ ಪ್ರಭಾತ ಪಟ್ನಾಯಕ್ ಅವರು ನೀಡುವ ಪ್ರಮುಖ ಕಾರಣ ಸಾಲ ಪರಿಹಾರ ಆಯೋಗದ ರಚನೆ. ಈ ಆಯೋಗ ಪ್ರತಿಯೊಬ್ಬ ರೈತನ ಸಾಲದ ತಪಾಸಣೆ ನಡೆಸಿದೆ. ಸರಕಾರ ಬ್ಯಾಂಕು ಹಾಗೂ ಖಾಸಗಿಯವರು ವಸೂಲಿ ಮಾಡುವಾಗ ಜೀವ ಹಿಂಡುವ ರೀತಿಯನ್ನು ನಿರ್ಬಂಧಿಸಿತು. ಆಯೋಗದ ಶಿಫಾರಸ್ಸಿನಂತೆ ವೈನಾಡು ರೆವಿನ್ಯೂ ಜಿಲ್ಲೆಯನ್ನು ಸಂಕಟ ಪೀಡಿತ ಜಿಲ್ಲೆಯೆಂದು ಸರ್ಕಾರ ಘೋಷಿಸಲು ನಿರ್ಧರಿಸಿತು.ಇದರಿಂದ ರೈತರಿಗೆ ಹೆಚ್ಚಿನ ನೆರವು ನೀಡಲಾಗುತ್ತಿದೆ.

ಕಳಪೆ ಗೊಬ್ಬರಗಳ ಹಾವಳಿ, ಸಾಲದ ಹೊರೆ, ಬೆಳೆದ ಬೆಳೆಗೆ ಬೆಲೆ ಇಲ್ಲದೆ ದುರಂತಗಳುಂಟಾಗಿ ರೈತರು ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ. ನಮ್ಮ ಸರ್ಕಾರಗಳ ಧೋರಣೆಗಳು ಹಾಗೂ ಉದಾರೀಕರಣ, ಜಾಗತೀಕರಣಗಳು ಆತ್ಮಹತ್ಯೆಗೆ ತಮ್ಮದೇ ಆದ ಕೊಡುಗೆಗಳನ್ನು ಸಲ್ಲಿಸುತ್ತಲಿವೆ.

### ಪರಿಹಾರ

ನಮ್ಮ ದೇಶದಲ್ಲಿ ರೈತರ ಸಾಲ ಹಾಗೂ ಬ್ಯಾಂಕಿನ ವಸೂಲಾತಿ ಕುರಿತು ನೊಬೆಲ್ ಪ್ರಶಸ್ತಿ ವಿಜೇತರಾದ ಬಾಂಗ್ಲಾದೇಶದ ಅರ್ಥಶಾಸ್ತ್ರಜ್ಞ ಪ್ರೊ|| ಮೊಹಮ್ಮದ್ ಯೂನಸ್ ವಿಷಾದ ವ್ಯಕ್ತಪಡಿಸುತ್ತಾರೆ. ಅವರ ಮಾತುಗಳಲ್ಲೇ ಹೇಳುವುದಾದರೆ ''ಸಾಲಬಾಧೆಯಿಂದ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಸಾಲ ತೆಗೆದುಕೊಳ್ಳುವುದೇ ದೊಡ್ಡ ತಪ್ಪಾಗಿ ಕಾಣಿಸುತ್ತಿದ್ದರೆ, ಭಾರತದಲ್ಲಿ ಬ್ಯಾಂಕ್ ವ್ಯವಸ್ಥೆಯನ್ನು ಸಂಪೂರ್ಣ ಮರುವಿನ್ಯಾಸಗೊಳಿಸಬೇಕು. ಬ್ಯಾಂಕ್ ಕಾರ್ಯಗಳಿಗೆ ಇನ್ನಷ್ಟು ಮಾನವೀಯ ರೂಪ ನೀಡಬೇಕು. ನಮ್ಮ ದೇಶದಲ್ಲಿ ಜನರ ಕಷ್ಟ ನಿವಾರಿಸಲು ಬ್ಯಾಂಕ್ ಆರಂಭಿಸಿದೆವು, ಅವರ ಸಮಸ್ಯೆಯನ್ನು ಹೆಚ್ಚಿಸಲು ಅಲ್ಲ. ಯಾರಾದರೂ ಸಾಲ ಮರುಪಾವತಿಸದಿದ್ದರೆ ಅದಕ್ಕೆ ಕಾರಣ ಪತ್ತೆಹಚ್ಚಿ ಇನ್ನಷ್ಟು ಆರ್ಥಿಕ ನೆರವು ನೀಡುತ್ತೇವೆ. ಅದನ್ನು ಬಿಟ್ಟು ಇಲ್ಲಿಯ ಹಾಗೆ ಕಾಲಾನುಕ್ರಮ ಚಕ್ರಬಡ್ಡಿ ವಿಧಿಸುವುದಿಲ್ಲ. ಹಾಗಾಗಿ ನಮ್ಮಲ್ಲಿ ಬ್ಯಾಂಕಿನ ಮರುಪಾವತಿ ಶೇ. ೯೯ರಷ್ಟಿದೆ'' ಎಂದಾಗ ಅಲ್ಲಿ ಸಾಧ್ಯವಾದದ್ದು ಭಾರತದಲ್ಲೇಕೆ ಸಾಧ್ಯವಾಗುತ್ತಿಲ್ಲ ಎಂಬ ಅವರ ಪ್ರಶ್ನೆಗೆ ಉತ್ತರ ಹೇಳುವವರಾರು ?



ಬಾಯ್ತೆರೆದ ಭೂಮಿ

### ಬೀಜ ನೀತಿ

ರೈತನ ಬದುಕು ಪ್ರಾರಂಭಗೊಳ್ಳುವುದು ಬೀಜದಿಂದ. ಈಗ ಕಳಪೆ ಬೀಜಗಳನ್ನೊದಗಿಸುವ ಸಾವಿರಾರು ಕಂಪನಿಗಳು ಹುಟ್ಟಿವೆ. ಅವುಗಳ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲೇಬೇಕು. ಸರಿಯಾದ ಬೀಜವನ್ನು ಒದಗಿಸಲು ಕ್ರಮ ಕೈಗೊಳ್ಳಲೇಬೇಕು. ಜೊತೆಗೆ ಕಳಪೆ ಗೊಬ್ಬರ ಹಾಗೂ ಕ್ರಿಮಿನಾಶಕಗಳ ತಯಾರಿಕಾ ಕಂಪನಿಗಳಿಗೆ ಕಠಿಣ ಶಿಕ್ಷೆ ವಿಧಿಸಬೇಕು. ರಾಸಾಯನಿಕ ಗೊಬ್ಬರಗಳಿಂದಾಗುವ ಬಗ್ಗೆ ವ್ಯಾಪಕ ಪ್ರಚಾರ ನೀಡಬೇಕು.

### ವಿಮಾ ನೀತಿ

ಕೃಷಿಕನಿಗೆ ಎಲ್ಲ ಸಮಸ್ಯೆಗಳೂ ಮೀರಿ ಬೆಳೆದಾಗ ಅತಿವೃಷ್ಟಿ ಅಥವಾ ಅನಾವೃಷ್ಟಿಯಿಂದ ಬೆಳೆ ನಾಶವಾದಾಗ ಲಭ್ಯವಿರುವ ಈಗಿನ ವಿಮಾ ಪದ್ಧತಿ ಅವೈಜ್ಞಾನಿಕವಾಗಿದೆ. ವಿಮಾ ಕಂಪನಿಗಳು ಬೆಳೆ ಹಾಳಾದ ಎರಡು-ಮೂರು ವರ್ಷಗಳ ನಂತರ ಹಣ ಪಾವತಿಸುತ್ತವೆ. ಇದು ಬಿಟ್ಟು ಮುಂದಿನ ಬೆಳೆಗೆ ವಿಮೆಯ ಅನುಕೂಲವಾಗುವಂತೆ ಸಹಾಯದ ಹಸ್ತ ನೀಡಬೇಕು.

### ಬೆಲೆ ರಕ್ಷಣೆ

ಬೆಲೆ ಏರಿಳಿತಗಳು ರೈತನ ಸಂಕಷ್ಟಕ್ಕೆ ದೊಡ್ಡ ಕಾರಣ. ಅದಕ್ಕೆ ಸರ್ಕಾರ ಸ್ಥಾಪಿಸಿರುವ ಆವರ್ತ ನಿಧಿ ಕೂಡ ಏನೇನೂ ಸಾಲದು. ಆವರ್ತ ನಿಧಿ ಕನಿಷ್ಠ ೧೦ ಸಾವಿರ ಕೋಟಿಯಾದರೂ ಇರಬೇಕು. ಸರ್ಕಾರ ಮಾರುಕಟ್ಟೆ ಮಧ್ಯ ಪ್ರವೇಶಿಸಿ ಬೆಲೆ ರಕ್ಷಣೆ ಕಾರ್ಯ ಮಾಡಬೇಕು. ಖರೀದಿ ಕೇಂದ್ರಗಳನ್ನು ಅರ್ಥಪೂರ್ಣವಾಗಿ ಅವಶ್ಯವಿದ್ದಲ್ಲಿ ಪ್ರಾರಂಭಿಸಬೇಕು. ಇವುಗಳ ಜೊತೆಗೆ ಕೃಷಿಗೆ ಸಂಬಂಧಿಸಿದಂತೆ ಗ್ರಾಮಕ್ಕೆ ಸರಿಯಾದ ವಿದ್ಯುತ್ ವಿತರಿಸಬೇಕು. ಸಾಧ್ಯವಾದಷ್ಟು ಸಹಾಯಧನಗಳನ್ನು ಘೋಷಿಸಬೇಕು.

ಇವೆಲ್ಲವುಗಳ ಜೊತೆ ನಮ್ಮ ಅನ್ನದಾತರು ಸಂಕಷ್ಟಗಳಿಗೆ ಹೆದರದೆ ಧೈರ್ಯದಿಂದ ಮುನ್ನುಗ್ಗಬೇಕು. ಆತ್ಮಹತ್ಯೆ ಅವರ ಸಮಸ್ಯೆಗಳಿಗೆ ಪರಿಹಾರವಲ್ಲ ಎಂಬುದನ್ನು ಮನಗಾಣಬೇಕು. ಸರ್ಕಾರಗಳು ಸಾಲವನ್ನು ಮನ್ನಾ ಮಾಡುವುದರಿಂದ ರೈತನ ರಕ್ಷಣೆ ಖಂಡಿತ ಸಾಧ್ಯವಿಲ್ಲ. ಅದು ತಾತ್ಕಾಲಿಕವಾಗಿ ರೈತರಿಗೆ ಪರಿಹಾರ ನೀಡಬಹುದು. ನಮ್ಮಲ್ಲಿ ಕೃಷಿಯು ಸಂಪೂರ್ಣ ರಾಜ್ಯ ಸರ್ಕಾರದ ಪರಿಮಿತಿಗೆ ಒಳಪಟ್ಟಿದೆ. ಸರ್ಕಾರ ವೈಜ್ಞಾನಿಕವಾಗಿ ವಿಶ್ಲೇಷಿಸಿ ನಿರ್ಧಾರ ಕೈಗೊಳ್ಳಬೇಕಿದೆ.

ಪರಮೇಶ್ವರಯ್ಯ ಸೊಪ್ಪಿಮಠ
ಶಿಕ್ಷಕರು, ಕೆ ವಿ ಓ ಆರ್ ಕಾಲೋನಿ. ಹಗರಿಬೊಮ್ಮನಹಳ್ಳಿ, ಬಳ್ಳಾರಿ (ಜಿಲ್ಲೆ)

# ಒಳಜಗ - ಹೊರಜಗ




**ಮು**ಗಲ್ ದೊರೆಗಳ ಅರಮನೆಯನ್ನು ಗಮನಿಸಿದರೆ ಅಲ್ಲಿ ಎರಡು ಸಭಾಭವನಗಳನ್ನು ಕಾಣಬಹುದು. ಸಾರ್ವಜನಿಕರನ್ನು ಭೇಟಿಯಾಗುವ ದಿವಾನ್-ಎ-ಆಮ್ ಹಾಗೂ ಆತ್ಮೀಯರೊಡನೆ ಏಕಾಂತವಾಗಿ ಭೇಟಿಯಾಗುವ 'ದಿವಾನ್-ಎ-ಖಾಸ್' ಎಂಬ ಸಭಾಭವನಗಳು. ಈ ಭವನಗಳು ಪರಸ್ಪರ ಸಮೀಪದಲ್ಲೇ ಇರುವುದನ್ನೂ ಕಾಣಬಹುದು. ಹಾಗೆಯೇ ನಮ್ಮ ನಿಮ್ಮೆಲ್ಲರಲ್ಲೂ ಎರಡೂ ಲೋಕಗಳಿವೆ. ಜಗತ್ತಿನವರ ಒಡನಾಟದಿಂದ ನಿರ್ಮಿಸಿಕೊಂಡ ಅಂತರಂಗದ ಲೋಕ ಇಲ್ಲವೇ ಒಳಜಗ; ಹಾಗೆಯೇ ಈ ಒಳಜಗವನ್ನು ರೂಪಿಸಲು ಕಾರಣವಾದ ಬಹಿರಂಗಲೋಕ ಇಲ್ಲವೇ ಹೊರಜಗ. ನಾವೇನೂ ಈ ಜಗಗಳಿಗೆ ಕೊಠಡಿಗಳನ್ನೂ ನಿರ್ಮಿಸಿಲ್ಲ. ಜನರೊಡನೆ ಒಡನಾಡುವಾಗ ಹೊರಜಗದೊಂದಿಗೆ ವ್ಯವಹರಿಸುತ್ತೇವೆ. ಒಬ್ಬರೇ ಇರಬೇಕಾದಾಗ ಒಳಜಗದ ಒಡನಾಟ ಇರುತ್ತದೆ. ಈ ಅನುಭವಗಳಿಲ್ಲದವರು ಯಾರಿದ್ದಾರೆ ?

ಆದರೆ ಒಳಜಗ ಹೊರಜಗಗಳೆರಡರಲ್ಲೂ ನಿರಾಳವಾಗಿರುವುದು ಅನೇಕರಿಗೆ ಸಾಧ್ಯವಿಲ್ಲ. ನಾನು ಒಬ್ಬನೇ ಕುಳಿತರೆ ಹುಚ್ಚನಾಗುತ್ತೇನೆ. ನನ್ನ ಚಿಂತೆ ಸಂತಾಪಗಳು ಬಹಳವಾಗಿ ಕಾಡುತ್ತವೆ. ಅದು ಉಸಿರು ಸಿಕ್ಕಿಸುವ ಅನುಭವ. ಹೀಗಾಗಿ ನಾನು ಆದಷ್ಟು ಹೊತ್ತು ಜನರ ನಡುವೆ ಕಳೆಯಬಯಸುತ್ತೇನೆ; ನಾಟಕ, ದೂರದರ್ಶನ ಧಾರಾವಾಹಿ, ಗೆಳೆಯರೊಡನೆ ಹರಟೆ ಯಾವುದಾದರೂ ಸರಿ. ''ನಾನು ನನ್ನ ಅಂತರಂಗ ಲೋಕವನ್ನು ಮರೆತರಾಯಿತು'' ಎನ್ನುವವರು ಕೆಲವರು.

ಮತ್ತೆ ಕೆಲವರು ಇದಕ್ಕೆ ವಿರುದ್ಧ ಪ್ರವೃತ್ತಿಯವರು. ಜನರ ಒಡನಾಟದಲ್ಲಿ ನಾನು ಬೇಗ ಆಯಾಸಗೊಳ್ಳುತ್ತೇನೆ. ಅವರ ಮರ್ಜಿಗೆ ಹೊಂದಿಕೊಳ್ಳುವುದು ಕಷ್ಟ. ಅವರ ಮಾತಿಗೆ, ವರ್ತನೆಗೆ ಪ್ರತಿಕ್ರಿಯೆ ತೋರಬೇಕು. ಈ ಸಡಗರದಲ್ಲಿ ನನ್ನ ಅಂತರಂಗದ ಆಲೋಚನೆಗಳಿಗೆ ಕಿವಿಗೊಡಲು ನನಗೆ ಸಾಧ್ಯವಾಗದು. ಆದೂ ಬೇಡ, ಗೆಳೆಯರೂ ಬೇಡ, ನಾಟಕ/ದೂರದರ್ಶನ – ಯಾವುದೂ ಬೇಡ. ನನ್ನ ಪಾಡಿಗೆ ನನ್ನನ್ನು ಬಿಟ್ಟರೆ ಸಾಕು; ಒಬ್ಬಂಟಿಯಾಗಿ ಹಾಯಾಗಿರುತ್ತೇನೆ ಎನ್ನುವ ಇವರು ಹೊರಜಗದಿಂದ ದೂರ ಸರಿಯಬಯಸುವ ಒಳಜಗ ಪ್ರೇಮಿಗಳು !

ಮತ್ತೊಂದು ವರ್ಗವೂ ಇದೆ. ಹೊರಜಗದಲ್ಲಿದ್ದಾಗ ಒಳಜಗಕ್ಕಾಗಿ, ಒಳಜಗದಲ್ಲಿರಬೇಕಾಗಿ ಒಂಟಿಯಾಗಿದ್ದಾಗ ಹೊರಜಗಕ್ಕಾಗಿ – ಹಂಬಲಿಸುವ ಮಂದಿ ಇವರು. 'ಇವಳ ಮಗ್ಗುಲೊಳಿರಲು ಅವಳ ಚಿಂತೆ, ಅವಳ ಮಗ್ಗುಲೊಳಿರಲು ಇವಳ ಚಿಂತೆ, ಅವಳಿಂದ ಸುಖವಿಲ್ಲ; ಇವಳಿಂದ ಫಲವಿಲ್ಲ. ಇಬ್ಬರ ಸಂಗ ಅಭಿಮಾನ ಭಂಗ'– ಎನ್ನುವ ಪುರಂದರದಾಸರ ಪದ ಇಂತಹ ಮಂದಿಯ ಚಡಪಡಿಕೆಗೆ ಹಿಡಿದ ಕೈಗನ್ನಡಿ. ಜಗಕ್ಕಾಗಿ ನಿರಂತರ ಜಗಳ.

ಮಾನ್ಯ ಓದುಗರೆ, ನಿಮ್ಮನ್ನು ನೀವೇ ಪರೀಕ್ಷಿಸಿಕೊಳ್ಳಿ – ನೀವು ಒಳಲೋಕದ ಸೆಳೆತದವರೋ, ಹೊರಲೋಕದ ಪರವಾದವರೋ, ಇಲ್ಲವಾದರೆ ಎರಡೂ ಲೋಕಗಳಿಗಾಗಿ ಚಡಪಡಿಸುವವರೋ ? ನೀವು ಯಾರೇ ಆಗಿರಿ, ಲೇಖನವನ್ನು ಮುಂದಕ್ಕೆ ಓದಿ. ಸ್ವಾರಸ್ಯವಿರುವುದು ಅಲ್ಲೇ!

೧. ಆಲ್ಬರ್ಟ್ ಐನ್‌ಸ್ಟೈನ್ ಸ್ವಭಾವತಃ ಒಳಲೋಕ ಪ್ರೇಮಿ; ಅರ್ಥಾತ್ ಅಂತರ್ಮುಖಿ. ಅವರ ಬಾಹ್ಯ ಜಗತ್ತಿನ ಸಂಪರ್ಕಗಳು ಹಾಗೂ ಸಂಬಂಧಗಳು ಅಷ್ಟಾಗಿ ಗಾಢವಾಗಿಲ್ಲದೆ ಇದ್ದದ್ದು ಹಾಗೂ ಅವರ ಪ್ರತಿಭೆ ಅವರನ್ನು ಅಂತರ್ಮುಖಿಯಾಗಿಸಿದ್ದು ಸಹಜವೇ.

ಆದರೆ ಅವರ ಬದುಕಿನ ಉತ್ತರಾರ್ಧದಲ್ಲಿ ಅವರಿಗೆ ದೊರೆತ ಜನಪ್ರಿಯತೆಯಿಂದಾಗಿ - ಸದಾ ಜನರ ನಡುವೆ, ಅಂದರೆ, ಹೊರಜಗದ ಮಧ್ಯೆ ಇರುವಂತಾಯಿತು. ಆಗ ಅವರಿಗೆ ಹೇಗಾಗಿರಬೇಡ ! ಅವರ ಆಗಿನ ಸ್ಥಿತಿಯನ್ನು ವಿವರಿಸುವ ವಾಕ್ಯ ಹೀಗಿದೆ: ಐನ್‌ಸ್ಟೈನ್ ಎಂದೂ ಒಬ್ಬಂಟಿಯಲ್ಲ, ಆದರೆ ಸದಾ ಏಕಾಂಗಿ ! ಜನರ ನಡುವೆ ಇರುವಾಗಲೇ ತಮ್ಮ ಒಳಜಗದಲ್ಲಿ ವಿಹರಿಸುವ ಕಲೆಗಾರಿಕೆಯನ್ನು ಅವರು ರೂಢಿಸಿಕೊಂಡರು. ಹೀಗಾಗಿ ಹೊರಜಗದ ಹೊರೆ ಒಳಜಗಕ್ಕೆ ತೆರಳಲು ಅಡ್ಡಿಯಾಗಲೇ ಇಲ್ಲ.

೨. ಈಸೋಪನ ಪ್ರಸಂಗ ಗಮನಿಸಿ, ಅವನು ಜನಜಂಗುಳಿಯಿಂದ ದೂರ ಉಳಿದು ಸೆರೆಮನೆಯಲ್ಲಿ ಏಕಾಂಗಿಯಾಗಿ ಇರಬೇಕಾಯಿತು. ಹೀಗಾಗಿ ಒಳಲೋಕದ ಸುಳಿದಾಟ ಅವನಿಗೆ ಅನಿವಾರ್ಯವಾಯಿತು. (ಇಂದಿನ ರಭಸ ಜೀವನದ ಯುವಕರು ಇಂತಹ ಬಿಕ್ಕಟ್ಟಿಗೆ ಸಿಕ್ಕಿದ್ದರೆ... ಹುಚ್ಚರಾಗಿಬಿಡುತ್ತಿದ್ದರು. ಜನರ ಸಂಗವಿಲ್ಲ; ವರ್ತಮಾನ ಪತ್ರಿಕೆ ಇಲ್ಲ; ಯಾವುದೇ ಹೊಸ ಸಂಪರ್ಕವಿಲ್ಲ, ಇಂತಹ ಸ್ಥಿತಿ ಊಹಿಸಲೂ ಕಠಿಣ). ಆದರೆ ಈಸೋಪ ಮಾಡಿದ್ದಾದರೂ ಏನು ? ಹೊರಜಗತ್ತಿನಲ್ಲಿ ಕಂಡ ವರ್ತನಾವಿಕಾರದ ಪಾತ್ರಗಳಿಗೆ ಪ್ರಾಣಿಗಳ ವೇಷ ಹಾಕಿ ನೀತಿಕಥೆಗಳನ್ನು ಬರೆದ. ಆತನು ಇದ್ದಲಿನ ಸಹಾಯದಿಂದ ಜೇಲಿನ ಗೋಡೆಯ ಮೇಲೆ ಕಥೆ ಬರೆದಾಗ, ಅದನ್ನು ಯಾರಾದರೂ ಓದುವ ಬಗ್ಗೆ, ಸಂಗ್ರಹಿಸಿ ಪ್ರಕಟಿಸುವ ಬಗ್ಗೆ, ಆತನಿಗೆ ಭರವಸೆ ಇರಲಿಲ್ಲ. ಆದಾಗ್ಯೂ ಕಥೆ ಬರೆದ. ಗರಿಷ್ಠ ಸಂಖ್ಯೆಯ ಭಾಷೆಗಳಿಗೆ ಅನುವಾದಿತ ಕೃತಿಗಳ ಪೈಕಿ ಈಸೋಪನ ಕಥೆಗಳೂ ಸೇರಿವೆ ಎಂದು ಗಮನಿಸಬೇಕು. ಒಳಜಗತ್ತು ನೀಡಿದ ಕಣಕ, ಹೊರಜಗತ್ತು ನೀಡಿದ ಹೂರಣ - ಹೋಳಿಗೆ ತಯಾರಾಗಿಯೇ ಹೋಯಿತು.

ಮೇಲಿನ ಎರಡು ಪ್ರಸಂಗಗಳು ಹೇಳುವುದೇನು ? ಹೊರಜಗತ್ತಿನಲ್ಲಿದ್ದುಕೊಂಡೇ ಒಳಜಗತ್ತಿಗೆ ಇಳಿಯುವುದು; ಹಾಗೆಯೇ ಒಳಜಗತ್ತಿನ ಸೆರೆಯಲ್ಲೇ ಹೊರಜಗತ್ತನ್ನು ಬರೆದು ಚಿತ್ರಿಸುವುದು ಸ್ವನಿಯಂತ್ರಣಗೊಂಡ ಮನಸ್ಸಿಗೆ ಮಾತ್ರ ಸಾಧ್ಯ !

ಇಷ್ಟರಮೇಲೆ ಒಳಜಗತ್ತಿನಲ್ಲಿದ್ದಾಗ ಹೊರಜಗತ್ತಿನ ದನಿ, ಹೊರಜಗತ್ತಿನಲ್ಲಿದ್ದಾಗ ಒಳಜಗತ್ತಿನ ಪ್ರತಿಧ್ವನಿ ಕೇಳದಿರುವುದೇ ? ಈ ಬಗ್ಗೆ ಮಂಕುತಿಮ್ಮನ ಕಗ್ಗದ ಈ ಪದ್ಯ ಎಷ್ಟು ಸುಂದರವಾಗಿ ಪ್ರಸ್ತಾಪಿಸಿದೆ ಎಂಬುದನ್ನು ಗಮನಿಸಿ. ಪ್ರವಚನಕಾರರು ಉಪೇಕ್ಷಿಸಿರುವ ಪದ್ಯಗಳ ಪೈಕಿ ಇದೂ ಒಂದು.

ಇಂತು ಹೊರಗೊಳಗುಗಳು ಬೇರೆ ಲೋಕಗಳಲ್ಲ
ಅಂತರಂಗದೊಳು ಊರಸಂತೆ ಸದ್ದಿಹುದು
ಸಂತೆಯೊಳಮ್ ಅಂತರಂಗದ ಸದ್ದು ಕೇಳಿಪುದು
ಸ್ವಾಂತದಿಕ್ಕೆಲಗಳವು – ಮಂಕುತಿಮ್ಮ ॥ ೪೪೧ ॥

ಬಹಿರಂಗ ಲೋಕದ ಗ್ರಹಿಕೆಯಲ್ಲಿ, ಅಂತರಂಗ ಲೋಕದ ಅಭಿವ್ಯಕ್ತಿಯಲ್ಲಿ, ಸ್ವಾಂತ ಅಂದರೆ ವೈಯಕ್ತಿಕ ಅಭಿರುಚಿಯೇ ಕಾರ್ಯ ನಿರ್ವಹಿಸುತ್ತದೆ. ಸ್ವಂತ ಅಭಿರುಚಿಯ ಲೋಹನಾಣ್ಯಕ್ಕೆ ಅಂತರಂಗವೊಂದು ಮುಖ ; ಬಹಿರಂಗವೊಂದು ಮುಖ. ಬೇರ್ಪಡಿಸಹೋಗುವುದು ಹುಚ್ಚು ಸಾಹಸ ; ಪೂರಕವಾಗಿಸುವುದು ವ್ಯಕ್ತಿತ್ವದ ಸಮಗ್ರತೆ. ಅಂತೂ ಇದು - ಶಬ್ದದೊಳಗಣ ನಿಶ್ಶಬ್ದದ, ನಿಶ್ಶಬ್ದದೊಳಗಣ ಶಬ್ದದ ಬೆರಗು.

ಎಂ. ಆರ್. ನಾಗರಾಜು
ಎಫ್. - ೩ ಎಸ್.ಎಫ್.ಎಸ್. ಮನೆಗಳು, ಏಳನೇ 'ಬಿ' ಕ್ರಾಸ್, ಯಲಹಂಕ ಉಪನಗರ, ಬೆಂಗಳೂರು -೬೪



# ನಿಮ್ಮ ವ್ಯಕ್ತಿ ವಿಕಸನಕ್ಕೆ ನವಕರ್ನಾಟಕ ಪ್ರಕಾಶನದ ವಿನೂತನ ಕೊಡುಗೆ






ವ್ಯಕ್ತಿ ವಿಕಸನ ಮಾಲೆ



ಸಂಪಾದಕರು
ಡಾ|| ಸಿ. ಆರ್. ಚಂದ್ರಶೇಖರ್

ಆಯಾಯ ಕ್ಷೇತ್ರಗಳಲ್ಲಿ ಅನುಭವಿಗಳಾದ ಸಮರ್ಥ ಲೇಖಕರು ರಚಿಸಿರುವ 2ನೆಯ ಕಂತಿನ 25 ಅತ್ಯುತ್ತಮ ಕೃತಿಗಳು ಖ್ಯಾತ ಚಿತ್ರಕಾರರ ಸಂದರ್ಭೋಚಿತ ಚಿತ್ರಗಳ ಸಹಿತ. ತಲಾ ರೂ. 40 ಬೆಲೆಯ ಒಟ್ಟು ರೂ. 1000 ಮೌಲ್ಯದ ಪುಸ್ತಕಗಳು.

ಇಂದೇ ಬೇಡಿಕೆ ಸಲ್ಲಿಸಿ























'ಹೊಸತು' ಮೂರು ವರ್ಷದ ಚಂದಾದಾರರಿಗೆ ರಿಯಾಯಿತಿ ಬೆಲೆ ರೂ. 800 + ಅಂಚೆವೆಚ್ಚ ರೂ. 50



## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ನಂ. 11, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ : 5159, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001

✆ : 22203580, 30578022 e-mail: navakarnataka@vsnl.com web : www.navakarnatakabooks.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /August 2008 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.